# ಚಿಂತನೆ ಚಳುವಳಿಗಳಿಗೆ ಪೂರಕವಾದ ಕೃತಿಗಳು




**₹ 250    ಪುಟಗಳು 368**

1924ರಲ್ಲಿ ಮೈಸೂರಿನಲ್ಲಿ ಸಿರಿತನದ ಕುಟುಂಬದಲ್ಲಿ ಜನಿಸಿದ ಎಂ. ಎಸ್. ಕೃಷ್ಣನ್ 1942ರಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ವಿದ್ಯಾರ್ಥಿ ಸಂಘಟನೆಯ ಮೂಲಕ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದವರು. ನಂತರ ತಮ್ಮ ಬದುಕನ್ನೇ ಈ ದೇಶದ ಕಮ್ಯುನಿಸ್ಟ್ ಚಳುವಳಿಗರ್ಪಿಸಿದವರು. ಭಾರತ ಕಮ್ಯುನಿಸ್ಟ್ ಪಕ್ಷದ ರಾಜ್ಯ ನಾಯಕರಾಗಿ, ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್‌ನ ರಾಜ್ಯ, ರಾಷ್ಟ್ರ ನಾಯಕರಾಗಿ, ನಾಲ್ಕು ಅವಧಿಗೆ ಕರ್ನಾಟಕ ಶಾಸನ ಸಭೆಯ ಸದಸ್ಯರಾಗಿ ಬದುಕಿನುದ್ದಕ್ಕೂ ಜನಸಾಮಾನ್ಯರಿಗಾಗಿ ದುಡಿದ ಜನನಾಯಕನ ಸ್ಮರಣೆಗಾಗಿ ರೂಪಗೊಂಡ ಈ ಗ್ರಂಥ 'ಜನಮುಖಿ'. ಎಂ. ಎಸ್. ಕೆ. ಜೀವನ, ಹಿತೈಷಿಗಳ ಸ್ಮರಣೆ, ಒಡನಾಡಿಗಳ ನೆನಪು, ಪ್ರಸ್ತುತ ಸಂದರ್ಭದ ವಿಷಯ ವಸ್ತುಗಳನ್ನೊಳಗೊಂಡ ಲೇಖನಗಳ ಕೃತಿ ಇದು. ದುಡಿವ ವರ್ಗದ ಇತಿಹಾಸದ ಹಿನ್ನೋಟದಿಂದ ಭವಿಷ್ಯಕ್ಕೊಂದು ಮುನ್ನೋಟ ಒದಗಿಸಲು 'ಜನಮುಖಿ'ಯೂ ಒಂದು ಆಕರ. ಈ ಕೃತಿಯಲ್ಲಿ 39 ಲೇಖನಗಳಿವೆ, 38 ಚಿತ್ರಗಳಿವೆ. ಡಾ॥ ಸಿದ್ದನಗೌಡ ಪಾಟೀಲ ಇದರ ಸಂಪಾದಕರು. ಇದು. ಎಂ.ಎಸ್. ಕೃಷ್ಣನ್ ಸ್ಮರಣ ಸಂಸ್ಥೆಯ ಪ್ರಕಟಣೆ.

ಭಾರತದ ರಾಷ್ಟ್ರೀಯತೆಯ ಪರಿಕಲ್ಪನೆ ಕೃತಿಯನ್ನು ಪ್ರಕಟಿಸುವ ಉದ್ದೇಶ ಮೊದಲಿಗೆ ಕೆ. ಎನ್. ಪಣಿಕ್ಕರ್ ಅವರನ್ನು ಕನ್ನಡ ಓದುಗರಿಗೆ ಪರಿಚಯಿಸುವುದು. ಅದಲ್ಲದೆ ಮತ್ತೊಂದು ಉದ್ದೇಶವಿದೆ. ನಾವು ಒಂದು ರಾಷ್ಟ್ರವಾಗಿ ಒಂದು ಮಹತ್ತರ ಸಂಧಿಕಾಲದಲ್ಲಿದ್ದೇವೆ. ಎಪ್ಪತ್ತು ವರ್ಷಗಳ ಸ್ವತಂತ್ರ ರಾಷ್ಟ್ರದ, ಪ್ರಜಾಪ್ರಭುತ್ವದಲ್ಲಿ ಆಗಿರುವ ಆರ್ಥಿಕ ಪ್ರಗತಿಯ, ಸಾಂಸ್ಕೃತಿಕ ಅನುಭವಗಳಿಂದಾಗಿ ಬಿಡುಗಡೆಯ ಹೋರಾಟ ಕಾಲದಲ್ಲಿ, ಅದರ ಮಧ್ಯದಿಂದಲೇ ಎದ್ದುಬಂದ ನಮ್ಮ ರಾಷ್ಟ್ರೀಯತೆಯ ಪರಿಕಲ್ಪನೆ ಈಗ ಗಟ್ಟಿಯಾಗಿ ನೆಲೆಯೂರಿದೆಯೇ ? ನಮಗೆ ನಮ್ಮದೆ ಒಂದು ವಿಶಿಷ್ಟ ಅಸ್ಮಿತೆ ದಕ್ಕಿದೆಯೇ ? ಅಂಥ ಬೆಳವಣಿಗೆ ನಾಡಿನ ರಾಜಕೀಯ ಸಾಮಾಜಿಕ ಒಗ್ಗಟ್ಟಿಗೆ, ಆಗಾಗ್ಗೆ ಒದಗಿಬರುವ ಸವಾಲುಗಳನ್ನು ನಿರ್ವಹಿಸಲು ನೆರವಾಗುತ್ತದೆ, ಅಗತ್ಯವಾಗುತ್ತದೆ. ಸಾಹಿತ್ಯ, ಸಂಸ್ಕೃತಿ, ಶಿಕ್ಷಣ, ಮತಧರ್ಮಾತೀತತೆ, ಆಧುನೀಕರಣ, ಅಭಿವೃದ್ಧಿ ಮತ್ತು ರಾಷ್ಟ್ರೀಯತೆಯ ಕುರಿತು 9 ಲೇಖನಗಳನ್ನೊಳಗೊಂಡ ಈ ಕೃತಿಯನ್ನು ಕನ್ನಡಿಸಿದವರು ಕೆ. ಎಸ್. ಪಾರ್ಥಸಾರಥಿ.




**₹ 90    ಪುಟಗಳು 128**

# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು


**ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ರಾಜಕೀಯ ಬಿರುಗಾಳಿ** *ನಗರಗೆರೆ ರಮೇಶ್* ... ೫೭

**ಸರದಾರ ಭಗತ್ ಸಿಂಗ್ ಅವರ ತಾಯಿ**
**ಕ್ರಾಂತಿಲೋಕದ ಮಹಾತಾಯಿ ವಿದ್ಯಾವತಿ** *ಪ್ರೊ॥ಕಾಶೀನಾಥ ಅಂಬಲಗೆ* ... ೫೪
**ಮಹಿಳಾ ದಿನದ ರೂವಾರಿ ಕ್ಲಾರಾಳ ಜಾಡನ್ನರಸುತ್ತಾ** *ಡಾ॥ ಎನ್. ಗಾಯತ್ರಿ* ... ೪೩
**ವೃತ್ತಿಕಂಪನಿಗಳ ಮಾಲೀಕರಾಗಿ ಮಹಿಳೆಯರು** *ಎಸ್. ಮಾಲತಿ* ... ೨೫
**ಖಾಸಗಿ ಸಂಪ್ರದಾಯ ಆಚರಣೆಗಳು : ಹೆಣ್ಣು** *ಡಾ॥ ವೀರೇಶ* ... ೬೦

**ಸಿಬ್ತೇ ಹಸನ್ : ಪಾಕಿಸ್ತಾನದ ಗ್ರಾಂಶಿ** *ಜಿ. ರಾಮಕೃಷ್ಣ* ... ೧೭

**ಪರಂಪರಾರ್ಜಿತ** *ಓರಿಯಾ ಮೂಲ : ಸುರೇಂದ್ರ ಮಿಶ್ರಾ*
*ಅನುವಾದ : ಡಾ॥ ಬಸವರಾಜ ಸಾದರ* ... ೨೩

**ಕಾರ್ಪೊರೇಟ್ ತಿಮಿಂಗಲಗಳು –**
**ಬ್ಯಾಂಕುಗಳಲ್ಲಿರುವ ಅನುತ್ಪಾದಕ ಸಾಲಗಳು** *ಎಸ್. ಸುರೇಂದ್ರ* ... ೩೩
**ತೈಲ ಬೆಲೆಯ ಏರುಪೇರು ಸುತ್ತಮುತ್ತ** *ಕೆ. ಎಸ್. ಪಾರ್ಥಸಾರಥಿ* ... ೫೯

**ಸೂಕ್ಷ್ಮಜೀವಿಗಳ ಲೋಕದಲ್ಲಿ ಒಂದು ಪಯಣ**
*ಡಾ॥ ರಾಮಲಿಂಗಪ್ಪ ಮತ್ತು ಪಿ. ಜಿ. ವಿನಯ್ ಕುಮಾರ್* ... ೧೩

**ಕಾವ್ಯಲೋಕ** ೨೭, ೩೪, ೩೮, ೪೫, ೫೯, ೬೧

**ನೈಜ ಸ್ವಾತಂತ್ರ್ಯದ ನಿರೀಕ್ಷೆಯಲ್ಲಿ ಹೈದರಾಬಾದ ಕರ್ನಾಟಕ**
*ಡಾ॥ ಪ್ರಕಾಶ ದೇಸಾಯಿ* ... ೪೯

**ಆಧುನಿಕ ಗಣಿತದ ಹರಿಕಾರ – ಜಾರ್ಜ್ ಬೂಲ್ ದ್ವಿಶತಮಾನೋತ್ಸವ**
*ಡಾ॥ ಎಸ್. ಬಾಲಚಂದ್ರ ರಾವ್* ... ೧೧

**ಫ್ರಾನ್ಸಿಸ್ ಬುಕನನ್ ಕಂಡಂತೆ ಕರಾವಳಿ ಕರ್ನಾಟಕದಲ್ಲಿ**
**ಗುಲಾಮಗಿರಿ ಪದ್ಧತಿ** *ಸುಧಾಕರ್* ... ೩೧

**ಇವರಿಗಿಷ್ಟು ಬೆಳಕ ನೀಡಿ** *ನೂತನ ಎಮ್. ದೋಶೆಟ್ಟಿ* ... ೫೧

**‘ಶದಕ್ರಿ’ ಯೋಗದ ಹಿಂದೆ ಮುಂದೆ** *ಕೆ. ಎಸ್. ರವಿಕುಮಾರ್* ... ೨೯

**ನಾನು ಓದಿದ ಪುಸ್ತಕ : ಡಾ॥ ಎಚ್. ಎಸ್. ಅನುಪಮಾ**
**ಅವರ ‘ಸಹಗಮನ’** *ಡಾ॥ ಸುರೇಶ ನಾರಾಯಣ ನಾಯ್ಕ* ... ೪೭
**ವಿಶ್ವವೀಕ್ಷಣೆ : ಉತ್ತರ ಕೊರಿಯಾ : ನ್ಯೂಕ್ಲಿಯರ್ ಅಸ್ತ್ರ ಎಷ್ಟು ಸುರಕ್ಷಿತ**
*ಸೀಯಾರ್ಕೆ* ... ೪೬
**ನಭಾವಲೋಕನ : ಲೆಕ್ಕಕ್ಕೆ ಮಾತ್ರ ಗ್ರಹಣಗಳು** *ಡಾ॥ ಬಿ. ಎಸ್. ಶೈಲಜಾ* ... ೩೭
**ಹೊಸ ಓದು** *ಕಲ್ಲೇಶ್ ಕುಂಬಾರ್* ... ೪೨
**ಕ್ಷ–ಕಿರಣ** *ಸಾನ್ವಿ ಪಿ.* ... ೧೬



**ಚಿತ್ರಗಳು :** ಕಮಲಂ ಅರಸು, ತನು, ವಿ. ಗೋಪಾಲ್
ಜಿ. ಎಂ. ಬೊಮ್ನಳ್ಳಿ, ವಿ. ಆರ್. ಸಿ. ಶೇಖರ್
**ಮುಖಪುಟ :** ವಿದ್ಯಾರ್ಥಿ ನಾಯಕ ಕನ್ಹಯಾ ಹಾಗೂ
ಜೆ. ಎನ್. ಯು. ವಿದ್ಯಾರ್ಥಿಗಳ ಚಳುವಳಿ
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು



ಅಮರನಾದ ಯೋಧ ಹನುಮಂತಪ್ಪ ರಾಮಪ್ಪ ಕೊಪ್ಪದ ಮತ್ತು ಅವರ ಸಹಯೋಧರ ಅಸಾಮಾನ್ಯ ಕಾಣಿಕೆಯನ್ನು ಗೌರವದಿಂದ ಸ್ಮರಿಸುತ್ತಾ ‘ಹೊಸತು’ ಅವರಿಗೆ ತನ್ನ ವಿನಯ ನಮನಗಳನ್ನು ಸಲ್ಲಿಸುತ್ತದೆ. ಹನುಮಂತಪ್ಪನವರು ವೀರನಾಗಿ ಬಾಳಿ, ಸಿಯಾಚಿನ್‌ನಲ್ಲಿ ಸತ್ತು ಮತ್ತು ಬದುಕಿ, ಮತ್ತೆ ದೆಹಲಿಯಲ್ಲಿ ಮರಣಿಸಿದ ದೇಶವಂದ್ಯ ಸೈನಿಕ. ಅವರಿಗೆಲ್ಲಾ ನಾವು ಈ ದೇಶದಲ್ಲಿ ಸದಾಕಾಲಕ್ಕೂ ಋಣಿಗಳು. ಸಿಯಾಚಿನ್‌ಗೆ ನೇಮಕಗೊಂಡ ಯೋಧರು ಮೂರು ಮೂರು ತಿಂಗಳ ಪರ್ಯಂತ ಗಡಿಯಲ್ಲಿ ನಿಂತು ನಾಡನ್ನು ಸಂರಕ್ಷಿಸುವವರು. ಚಳಿಗಾಗಲಿ, ನೆರೆರಾಷ್ಟ್ರದ ಅನಿರೀಕ್ಷಿತ ಧಾಳಿಗಾಗಲಿ, ನಡುಗದೆ ಯಾವ ಪ್ರಾಣಿಯೂ ಇಲ್ಲದ ಆ ಇಪ್ಪತ್ತು ಸಾವಿರ ಅಡಿ ಎತ್ತರದಲ್ಲಿ ಮಂಜುಗಡ್ಡೆಗಳ ಮೇಲೆಯೇ ನಿಂತು ನಮ್ಮ ದೇಶದ ಎಲ್ಲೆಗಳನ್ನು ಎವೆಯಿಕ್ಕದೆ ನೋಡುತ್ತಾ ರಕ್ಷಣೆ ಒದಗಿಸುವವರು ಅವರು. ಹನುಮಂತಪ್ಪನವರು ಹಿಮದಲ್ಲಿ ಹೂತುಹೋದಾಗ ಅವರ ಜೊತೆಯಲ್ಲಿದ್ದವರೂ ಹೂತುಹೋದರು, ಅಸು ನೀಗಿದರು. ಪ್ರಕೃತಿಯ ನಿಯಮಕ್ಕೆ ಸವಾಲೆಸೆದು ಉಸಿರಾಡುತ್ತಿದ್ದ ಕೊಪ್ಪದ ಅವರನ್ನು ಅತ್ಯಂತ ಕಷ್ಟದಿಂದ ದೆಹಲಿಗೆ ಕರೆತಂದಿದ್ದು ಶ್ಲಾಘನೀಯ. ಆದರೆ ಪ್ರಕೃತಿಯು ಪೂಜೆ–ಪ್ರಾರ್ಥನೆಗಳಿಗೆ ಮಣಿಯುವುದಿಲ್ಲ. ಮಾನ್ಯ ಹನುಮಂತಪ್ಪನವರು ನಮ್ಮನ್ನು ಬಿಟ್ಟು ನಡೆದುಬಿಟ್ಟರು. ದಿನಕ್ಕೆ ಐದು ಕೋಟಿ ರೂಪಾಯಿ ಖರ್ಚು ಮಾಡಿದರೂ ನಮ್ಮ ಯೋಧರಿಗೆ ಸಿಯಾಚಿನ್‌ನಲ್ಲಿ ಬೆಚ್ಚಗಿನ ವಾತಾವರಣ ನಿರ್ಮಿಸಲಾಗಿಲ್ಲ. ಅಷ್ಟೇ ಏಕೆ, ಮಡಿದವರನ್ನು ಅಲ್ಲಿಂದ ನಾಡಿಗೆ ಕರೆತರಲು ವಾರಕ್ಕೂ ಹೆಚ್ಚು ಕಾಲ ಬೇಕಾಯಿತು. ಅಂತಹ ಘೋರ ವಾಸ್ತವ ಆ ಪರ್ವತ ಶಿಖರಗಳದ್ದು. ಅಲ್ಲಿ ಮೂರು ತಿಂಗಳಿದ್ದು ಹಿಂದಿರುಗುವವರು ಮತ್ತು ಹಿಂದಿರುಗಲಾರದೆ ಮಡಿದಿರುವವರು ನಿಜಕ್ಕೂ ವೈಭವೋಪೇತ ತ್ಯಾಗಕ್ಕೆ ಹೆಸರಾದವರು. ಸಿಯಾಚಿನ್‌ನಲ್ಲಿ ಅನಿರೀಕ್ಷಿತ ಎಂಬುದೇನೂ ಇಲ್ಲ. ಭರ್ರನೆ ಬೀಸುವ ಹಿಮಗಾಳಿ, ಧೊಪ್ಪನೆ ಉರುಳುವ ಹಿಮಗಡ್ಡೆ–ಹಿಮಬಂಡೆ, ಟೆಂಟುಗಳನ್ನು ಕ್ಷಣಾರ್ಧದಲ್ಲಿ ಮಾಯಮಾಡುವ ಬಿರುಗಾಳಿ, ಇವೆಲ್ಲಾ ಸದಾ ಇರುವಂಥವೆ. ಅನೇಕ ಕೇಂದ್ರ ಮಂತ್ರಿಗಳು ಅಲ್ಲಿಗೆ ಹೋಗಿಬಂದಿದ್ದಾರೆ, ಒಂದೊಂದು ಭೇಟಿಗೂ ನೂರಾರು–ಸಾವಿರಾರು ಕೋಟಿ ರೂಪಾಯಿ ಖರ್ಚು ಮಾತ್ರವಲ್ಲ, ಅವರನ್ನು ನೋಡಿಕೊಳ್ಳುವ ಜವಾಬ್ದಾರಿಯು ಸೇನಾಪಡೆಗಳನ್ನು ಉಡುಗಿಸಿಬಿಡುತ್ತದೆ. ಹನುಮಂತಪ್ಪನವರು ಗತಿಸಿರುವಾಗ ಅವರ ಕೆಚ್ಚೆದೆಗೆ ಪ್ರಣಾಮ ಸಲ್ಲಿಸುವುದು ಒಂದು ಭಾಗ. ಇನ್ನೊಂದು ಭಾಗ ಸಿಯಾಚಿನ್ ಸಂಬಂಧಿ ಸಂಗತಿಗಳನ್ನು ಮತ್ತು ನೀತಿಗಳನ್ನು ಪರಾಮರ್ಶೆ ಮಾಡಿ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ನೆಲೆಯಲ್ಲಿ ಸೂಕ್ತವಾಗಿ ವಿವೇಚಿಸಿಕೊಳ್ಳುವುದು, ಅದಕ್ಕನುಗುಣವಾಗಿ ವರ್ತಿಸುವುದು. ಮಾನ್ಯ ಹನುಮಂತಪ್ಪ ಮತ್ತು ಇತರರು ಸಿಯಾಚಿನ್‌ನಲ್ಲಿ ಇಲ್ಲದೆಯೂ ಹತರಾಗುತ್ತಾರೆ, ಹತರಾಗಲು ಸಿದ್ಧರಿರುತ್ತಾರೆ; ಆದರೆ ಹುತಾತ್ಮರಾಗುವುದು ಅವರ ಧ್ಯೇಯವಲ್ಲ. ಅಜೇಯ ರಾಗುವುದು ಅವರ ಧ್ಯೇಯ. ಅವರಿಗೆ ನಮಿಸುತ್ತಾ ನಮ್ಮ ದೇಶದ ವಿದೇಶಾಂಗ ನೀತಿ, ಸೇನಾ ಸಿದ್ಧತೆ ಮತ್ತು ಸೇನೆಯಲ್ಲಿರುವವರಿಗೆ ನೀಡಲಾಗು ತ್ತಿರುವ ಸೌಲಭ್ಯ, ಇವನ್ನೆಲ್ಲಾ ವಸ್ತುನಿಷ್ಠವಾಗಿ ವಿಮರ್ಶಿಸಿಕೊಳ್ಳಬೇಕು. ಇಲ್ಲದಿದ್ದರೆ ಹುತಾತ್ಮರು ಹೆಚ್ಚುತ್ತಾ ಹೋಗುತ್ತಾರೆ, ದೇಶವು ಅವರನ್ನು ಹುತಾತ್ಮರನ್ನಾಗಿಸುತ್ತಾ ಸಾಗುತ್ತದೆ. ಅಮೆರಿಕಾದೊಡನೆ ನಮಗಿಲ್ಲದ ಆತ್ಮೀಯ ಬಾಂಧವ್ಯದ ಬಗ್ಗೆ ಎಷ್ಟೆಲ್ಲಾ ಬೀಗುತ್ತೇವೆ, ಅದರಿಂದ ಚಿಕ್ಕಾಸಿನ ಪ್ರಯೋಜನವನ್ನೂ ಪಡೆಯಲಾಗುವುದಿಲ್ಲವೆ ? ಎಂದಾದರೂ ಅಮೆರಿಕಾ ಪಾಕಿಸ್ತಾನಕ್ಕೆ ಒತ್ತಡ ಹೇರಿ ಸಿಯಾಚಿನ್‌ನಂತಹ ಪ್ರದೇಶದಲ್ಲಿ ಭಾರತ ಮತ್ತು ಪಾಕಿಸ್ತಾನದ ಸೈನಿಕರು ಇರಬೇಕಾದ್ದು ಅನಗತ್ಯವಾಗುವಂತೆ ಮಾಡಲು ಮುಂದೆ ಬಂದಿದೆಯೆ ? ನೆರೆರಾಷ್ಟ್ರವು ನಮ್ಮೊಡನೆ ದ್ವೇಷ ಸಾಧಿಸಲು

*(೭ನೇ ಪುಟಕ್ಕೆ)*



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೧೭ ಸಂಚಿಕೆ–೮ ಮಾರ್ಚ್ ೨೦೧೬

■ ***ಗೌರವ ಸಂಪಾದಕ***

ಜಿ. ರಾಮಕೃಷ್ಣ

■ ***ಸಂಪಾದಕ***

ಸಿದ್ದನಗೌಡ ಪಾಟೀಲ

■ ***ಸಹಸಂಪಾದಕರು***

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ಆರ್. ಉಡುಪ

■ **ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ **ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೩೯೭೪೨೬

■ ***ಹೊಸತು ಕಚೇರಿಯ ವಿಳಾಸ***




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http ://navakarnataka.blogspot.in**
**http ://hosathumonthly.blogspot.in**




# ಸಂಪಾದಕೀಯ

## ಅನೇಕಗಳ ಏಕತೆ

**ದೇ**ಶದ ಐಕ್ಯತೆ, ಸಮಗ್ರತೆ, ಸಾರ್ವಭೌಮತೆಯನ್ನು ಕಾಪಾಡುವುದು ದೇಶದ ಪ್ರತಿಯೊಬ್ಬ ಪ್ರಜೆಯ ಕರ್ತವ್ಯ. ಅದೇ ಸಂದರ್ಭದಲ್ಲಿ ದೇಶದ ವಿವಿಧತೆಯನ್ನು, ಬಹುತ್ವವನ್ನು ಗೌರವಿಸುವುದೂ ಎಲ್ಲ ಪ್ರಜೆಗಳ ಕರ್ತವ್ಯವಾಗುತ್ತದೆ. ಅನೇಕಗಳ ಏಕತೆಯೇ ನಮ್ಮ ದೇಶದ ಒಕ್ಕೂಟ ವ್ಯವಸ್ಥೆಯ ಶಕ್ತಿ ಮತ್ತು ಸೌಂದರ್ಯ. ಇತ್ತೀಚಿನ ಸಂದರ್ಭದಲ್ಲಿ ನಮ್ಮ ದೇಶದಲ್ಲಿ ಸೈದ್ಧಾಂತಿಕ ಭಿನ್ನಮತವನ್ನು ದಮನ ಮಾಡುವ ಕೆಲಸ ವ್ಯವಸ್ಥಿತವಾಗಿ ನಡೆಯುತ್ತಿದೆ. ಫೆಬ್ರವರಿ ತಿಂಗಳು ಪೂರ್ತಿ 'ದೇಶದ್ರೋಹ'ದ ವಿಚಾರವಾಗಿ ತೀವ್ರವಾದ ಸಂಘರ್ಷ ನಡೆಯಿತು, ಇನ್ನೂ ನಡೆಯುತ್ತಿದೆ. ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿ ಸಂಘದ ಅಧ್ಯಕ್ಷ ಕನ್ಹಯ್ಯ ಕುಮಾರನನ್ನು ದೇಶದ್ರೋಹದ ಘೋಷಣೆ ಕೂಗಿದನೆಂಬ ಆರೋಪ ಹೊರಿಸಿ ಬಂಧಿಸಲಾಯಿತು. ಟಿ.ವಿ. ಚಾನಲ್ ಒಂದರಲ್ಲಿ ಪ್ರಸಾರವಾದ ದೃಶ್ಯಾವಳಿಗಳ ಆಧಾರದ ಮೇಲೆ ಕನ್ಹಯ್ಯನನ್ನು ಬಂಧಿಸಲಾಗಿದೆ ಎಂದು ದೆಹಲಿ ಪೊಲೀಸ್ ಕಮಿಷನರ್ ಅವರ ಹೇಳಿಕೆ ಪ್ರಸಾರವಾಯಿತು. ಈ ರೀತಿ ಘೋಷಣೆ ಕೂಗಿದ ವಿದ್ಯಾರ್ಥಿ ನಾಯಕನಿಗೆ ಲಷ್ಕರ್–ಎ–ತೊಯ್ಬಾ ಸಂಘಟನೆಯ ಸಂಬಂಧವಿದೆಯೆಂದು ಸ್ವತಃ ಈ ದೇಶದ ಗೃಹಮಂತ್ರಿಯೇ ಘೋಷಿಸಿದರು. ಆದರೆ ಮರುದಿನವೇ ಅಂಥ ಯಾವ ಮಾಹಿತಿ ಲಭ್ಯವಾಗಿಲ್ಲವೆಂದು ಗುಪ್ತಚರ ವರದಿ ಮೂಲಗಳು ಹೇಳಿದವು. ದಿನಾಂಕ ೧೭.೨.೨೦೧೬ರಂದು ಸಂಜೆ ಇಂಡಿಯಾ ಟುಡೇ ಟಿ.ವಿ. ಆಘಾತಕಾರಿ ಸುದ್ದಿಯೊಂದನ್ನು ಬಯಲು ಮಾಡಿತು. 'ದೆಹಲಿ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘಟನೆಯ ನಾಯಕ ಕನ್ಹಯ್ಯ ಕುಮಾರ ದೇಶದ್ರೋಹದ ಘೋಷಣೆಗಳನ್ನು ಕೂಗಿಲ್ಲ, ಕೆಲವು ಟಿ.ವಿ. ಚಾನೆಲ್‌ಗಳಲ್ಲಿ ಪ್ರಸಾರವಾಗುತ್ತಿರುವುದು ಹಾಗೂ ಸಾಮಾಜಿಕ ಮಾಧ್ಯಮಗಳಲ್ಲಿರುವುದು ನಕಲಿ ಸಿ. ಡಿ., ಕನ್ಹಯ್ಯ ಕುಮಾರ ದೇಶದ ಎಲ್ಲ ಜನಪರ ಹೋರಾಟಗಾರರು ಹೇಳುವ ಘೋಷಣೆಗಳಾದ: ಬಂಡವಾಳಶಾಹಿಯಿಂದ ಸ್ವಾತಂತ್ರ್ಯ ಬೇಕು, ಕೋಮುವಾದದಿಂದ ಸ್ವಾತಂತ್ರ್ಯ ಬೇಕು, ಜಾತಿವಾದದಿಂದ ಸ್ವಾತಂತ್ರ್ಯ ಬೇಕು, ಮನುವಾದದಿಂದ ಸ್ವಾತಂತ್ರ್ಯ ಬೇಕು, ಎಂದು ದಿನಾಂಕ ೧೧.೨.೨೦೧೬ರಂದು ವಿದ್ಯಾರ್ಥಿ ಸಂಘಟನೆಯ ಪ್ರತಿಭಟನಾ ಕಾರ್ಯಕ್ರಮದಲ್ಲಿ ಕೂಗಿದ್ದಾನೆ. ದೇಶದ್ರೋಹದ ಘೋಷಣೆ ಕೊಟ್ಟಿದ್ದಾನೆ ಎಂದು ಹೇಳಲಾದ ೯.೧೨.೨೦೧೬ರ ಕಾರ್ಯಕ್ರಮದಲ್ಲಿ ಕನ್ಹಯ್ಯ ಯಾವುದೇ ಘೋಷಣೆ ಕೂಗಿಲ್ಲ, ಈಗ ಕೆಲವು ಟಿ.ವಿ. ಹಾಗೂ ಸಾಮಾಜಿಕ ಚಾನೆಲ್‌ಗಳಲ್ಲಿ ಪ್ರಸಾರವಾಗುತ್ತಿರುವ ದೃಶ್ಯಾವಳಿಗಳಲ್ಲಿ ಕನ್ಹಯ್ಯ ಕುಮಾರ ದೇಶವಿರೋಧಿ ಘೋಷಣೆ ಕೂಗುತ್ತಿದ್ದಂತೆ ಸಾಫ್ಟ್‌ವೇರ್ ತಂತ್ರಜ್ಞಾನ ಬಳಸಿ ಸೇರಿಸಲಾಗಿದೆ ಎಂದು ಇಂಡಿಯಾ ಟುಡೇ ಸುದ್ದಿ ವಿಶ್ಲೇಷಕ ರಾಹುಲ ಸಾಕ್ಷಿ ಸಮೇತ ಪ್ರಸಾರ ಮಾಡಿದರು. ಅದಾದ ಮೇಲೆ ಹೆಚ್ಚಿನ ವಿದ್ಯುನ್ಮಾನ ಹಾಗೂ ಮುದ್ರಣ ಮಾಧ್ಯಮಗಳು ಈ ವಿಷಯವನ್ನು ಪ್ರಸಾರ ಮಾಡಿದವು. ಈಗ ಕನ್ಹಯ್ಯ ಕುಮಾರ ದೇಶವಿರೋಧಿ ಘೋಷಣೆ ಕೂಗಿದ್ದನೇ ಎಂಬುದೇ ಪ್ರಶ್ನಾರ್ಹ ವಿಷಯವಾಗಿದೆ. ಇದೇ ಆರೋಪದ ಮೇಲೆ ಬಂಧಿಸಿದ ದೆಹಲಿ ಪೊಲೀಸರು ಕನ್ಹಯ್ಯ ಮೇಲಿನ ಆರೋಪಕ್ಕೆ ಸಾಕ್ಷಿ ಒದಗಿಸುವಲ್ಲಿ ವಿಫಲರಾಗಿದ್ದಾರೆ. ಆದರೂ ಕನ್ಹಯ್ಯ ಕುಮಾರ ಆಪಾದನೆ ಹೊತ್ತಿದ್ದಾನೆ. ಆರೋಪಕ್ಕೆ ಸಾಕ್ಷಿಗಳ ಸೃಷ್ಟಿಯ ಪ್ರಯತ್ನ ಪೊಲೀಸರಿಂದ ನಡೆದಿದೆ.

ಮೇಲಿನ ಎಲ್ಲ ಬೆಳವಣಿಗೆಯಲ್ಲಿ ಕೆಲವು ಸೂಕ್ಷ್ಮ ವಿಷಯಗಳನ್ನು ಗಮನಿಸಬೇಕು. ಕಳೆದ ವರ್ಷ ಜವಾಹರಲಾಲ್ ನೆಹರು ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘಕ್ಕೆ ಚುನಾವಣೆ ನಡೆಯಿತು. ಎ.ಐ.ಎಸ್.ಎಫ್. ಸಂಘಟನೆಯ ಕನ್ಹಯ್ಯ ಕುಮಾರ ಅಧ್ಯಕ್ಷರಾಗಿ ಆಯ್ಕೆಯಾಗುತ್ತಾರೆ. ಉಳಿದ ಬಹುತೇಕ ಸ್ಥಾನಗಳಿಗೆ ಎಡ ಹಾಗೂ ಪ್ರಗತಿಪರ ವಿದ್ಯಾರ್ಥಿ ಸಂಘಟನೆಗಳ ಅಭ್ಯರ್ಥಿಗಳು ಆಯ್ಕೆಯಾಗಿದ್ದಾರೆ. ಅಖಿಲ ಭಾರತ ವಿದ್ಯಾರ್ಥಿ ಪರಿಷತ್ ಎಂಬ ಬಿ.ಜೆ.ಪಿ.ಯ ವಿದ್ಯಾರ್ಥಿ ಸಂಘಟನೆ ಸೋಲುತ್ತದೆ. ಫೆಬ್ರವರಿ ೯ರಂದು ಡೆಮಾಕ್ರೆಟಿಕ್ ಸ್ಟೂಡೆಂಟ್ಸ್ ಯೂನಿಯನ್ ಹಾಗೂ ಎ.ಬಿ.ವಿ.ಪಿ. ಸಂಘಟನೆಗಳ ಮಧ್ಯೆ ಅಫ್ಜಲ್ ಗುರು ವಿಷಯದಲ್ಲಿ ಸಂಘರ್ಷವಾಗಿದೆ. ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದ ಅಧ್ಯಕ್ಷರಾಗಿ ಕನ್ಹಯ್ಯ ಕುಮಾರ ಅಲ್ಲಿ ಹೋಗಿ ವಿವಾದ ಬಗೆಹರಿಸುವ ಪ್ರಯತ್ನ ಮಾಡಿದ್ದಾನೆ. ಅದೇ ದಿನ ದೇಶವಿರೋಧಿ ಘೋಷಣೆಗಳನ್ನು ಕೂಗಿದ್ದಾರೆಂದು ಎ.ಬಿ.ವಿ.ಪಿ. ನಾಯಕರು ತಮ್ಮ ಮಾತೃ ಪಕ್ಷ ಬಿ.ಜೆ.ಪಿ. ಆಡಳಿತದ ಗೃಹಮಂತ್ರಿಯವರಿಗೆ ದೂರು ಕೊಡುತ್ತದೆ. ಬಿ.ಜೆ.ಪಿ. ಸರಕಾರದ ಪೊಲೀಸರು ನಾಲ್ಕು ದಿನದ ನಂತರ ಸ್ವಾಯತ್ತ ಸಂಸ್ಥೆಯಾದ ವಿಶ್ವವಿದ್ಯಾಲಯದಲ್ಲಿ ಪ್ರವೇಶಿಸಿ ಕನ್ಹಯ್ಯ ಕುಮಾರನನ್ನು ಬಂಧಿಸುತ್ತಾರೆ. ದೇಶದ್ರೋಹಿಯೆಂದು ಕೇಸು ದಾಖಲಿಸುತ್ತಾರೆ. ಕನ್ಹಯ್ಯ ಕುಮಾರನನ್ನು ದೆಹಲಿಯ ಕೋರ್ಟಿಗೆ ಕರೆತರುವಾಗ ಬಿ.ಜೆ.ಪಿ. ಬೆಂಬಲಿಗ ವಕೀಲರಿಂದ ಅವನ ಮೇಲೆ, ಪತ್ರಕರ್ತರ ಮೇಲೆ, ಇತರೆ ಕನ್ಹಯ್ಯ ಬೆಂಬಲಿಗ ವಿದ್ಯಾರ್ಥಿ ಮತ್ತು ಉಪನ್ಯಾಸಕರ ಮೇಲೆ ತೀವ್ರವಾದ ಹಲ್ಲೆ ನಡೆಯುತ್ತದೆ. ಒಂದು ಬಾರಿ ದೆಹಲಿಯ ಬಿ.ಜೆ.ಪಿ. ಶಾಸಕನೇ

ನೇರವಾಗಿ ಹಲ್ಲೆ ಮಾಡುತ್ತಾನೆ. ಇದನ್ನೆಲ್ಲ ಮೂಕಪ್ರೇಕ್ಷಕರಂತೆ ಪೊಲೀಸರು ನೋಡುತ್ತ ನಿಲ್ಲುತ್ತಾರೆ. ದೂರು ಕೊಡುವವರೂ ಅವರೇ, ಬಂಧಿಸುವವರೂ ಅವರೇ, ಶಿಕ್ಷೆ ಕೊಡುವವರೂ ಅವರೆ. ಇಲ್ಲಿ ಸಂವಿಧಾನ, ನೆಲದ ಕಾನೂನು ನಿರ್ಲಕ್ಷ್ಯಕ್ಕೊಳಗಾಗಿವೆ. ಕನ್ಹಯ್ಯ ಕುಮಾರ ಆಕ್ಷೇಪಾರ್ಹ ಘೋಷಣೆ ಕೂಗಿದ ಬಗ್ಗೆಯೇ ಅನುಮಾನಗಳಿರುವಾಗ ಈ ರೀತಿಯ ದೊಂಬಿ, ದಾಳಿ ಫ್ಯಾಸಿಸಂನ ಲಕ್ಷಣಗಳನ್ನು ತೋರಿಸುತ್ತವೆ. ಪೊಲೀಸರು ಕನ್ಹಯ್ಯನನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ಅವನು ಅಪರಾಧಿ ಎಂದು ಸಾಬೀತಾದರೆ ಖಂಡಿತ ನ್ಯಾಯಾಲಯ ವಿಧಿಸುವ ಶಿಕ್ಷೆಯನ್ನು ಅವನು ಅನುಭವಿಸಬೇಕು. ಆದರೆ ಆರೋಪವೇ ನಿಖರವಾಗಿಲ್ಲದಿದ್ದಾಗ ಅಪರಾಧಿ ಪಟ್ಟ ಕಟ್ಟುವುದು ಯಾವ ನ್ಯಾಯ? ನಾನು ನಂಬಿದ ತತ್ವಗಳನ್ನು ನೀನು ಒಪ್ಪದಿದ್ದರೆ ನೀನು ದೇಶದ್ರೋಹಿ ಎಂದು ಪರಿಗಣಿಸುವುದು ಫ್ಯಾಸಿಸಂ ಅಲ್ಲದೆ ಮತ್ತೇನು?

ಎಲ್ಲಕ್ಕಿಂತ ಮುಖ್ಯವಾದದ್ದು ಕನ್ಹಯ್ಯ ಕುಮಾರ ಪ್ರತಿನಿಧಿಸುವ ಸಂಘಟನೆಯಾದರು ಎಂಥದ್ದು, ಅದರ ಸಿದ್ಧಾಂತವೇನು ಎಂಬುದನ್ನು ಪೊಲೀಸರು ಗಮನಿಸಬೇಕಿತ್ತು. ೧೯೩೬ರ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಜನ್ಮತಳೆದದ್ದು ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ (ಎ.ಐ.ಎಸ್.ಎಫ್.) ಜವಾಹರಲಾಲ್ ನೆಹರು, ಸುಭಾಷ್ ಚಂದ್ರ ಬೋಸ್ ಮುಂತಾದ ರಾಷ್ಟ್ರ ನಾಯಕರು ಭಾಗವಹಿಸಿದ ಸಂಘಟನೆಯದು. ಒಂದು ಕಾಲದಲ್ಲಿ ಮಾಜಿ ಪ್ರಧಾನಿಗಳಾಗಿದ್ದ ಐ. ಕೆ. ಗುಜ್ರಾಲ್‌ರಂಥವರು ಅದರ ಸದಸ್ಯರಾಗಿದ್ದರು. ನಮ್ಮ ರಾಜ್ಯದ ಸಚಿವರಾಗಿದ್ದ ಅಬ್ದುಲ್ ನಜೀರಸಾಬ್, ಶಾಸಕರಾಗಿದ್ದ ಎಂ. ಎಸ್. ಕೃಷ್ಣನ್, ಬಿ. ವಿ. ಕಕ್ಕಿಲ್ಲಾಯ, ಎಂ. ಸಿ. ನರಸಿಂಹನ್‌ರಂಥ ಗೌರವಾನ್ವಿತರು, ಹೋರಾಟಗಾರರು ಆ ಸಂಘಟನೆಯ ಸದಸ್ಯರಾಗಿದ್ದರು. ಸ್ವಾತಂತ್ರ್ಯ ಹೋರಾಟದಲ್ಲಿ ವಿದ್ಯಾರ್ಥಿ ಸಮೂಹವನ್ನು ಸಂಘಟಿಸಿದ ಇತಿಹಾಸ ಆ ಸಂಘಟನೆಗಿದೆ. ಪಂಜಾಬ್‌ನಲ್ಲಿ ಖಲಿಸ್ತಾನ್ ಪ್ರತ್ಯೇಕತಾ ಚಳುವಳಿ ನಡೆದಾಗ ಅದರ ವಿರುದ್ಧ ದೇಶದ ಐಕ್ಯತೆಗಾಗಿ ಹೋರಾಡಿ ಆ ವಿದ್ಯಾರ್ಥಿ ಸಂಘಟನೆಯ ಹಲವಾರು ಯುವಕರು ಪ್ರಾಣ ಕೊಟ್ಟಿದ್ದಾರೆ. ಅಂಥ ವಿದ್ಯಾರ್ಥಿ ಸಂಘಟನೆಯ ಸದಸ್ಯ ಕನ್ಹಯ್ಯ ಕುಮಾರ. ಸ್ವಾತಂತ್ರ್ಯೋತ್ತರ ಭಾರತದ ಪ್ರಭುತ್ವಗಳ ವಿದ್ಯಾರ್ಥಿ ವಿರೋಧಿ, ಜನ ವಿರೋಧಿ ನೀತಿಗಳ ವಿರುದ್ಧ, ಕೋಮುವಾದ, ಜಾತಿವಾದದ ವಿರುದ್ಧ ಈ ಸಂಘಟನೆ ಹೋರಾಡುತ್ತಲೇ ಬಂದಿದೆ. ಇಂದಿಗೂ ಶಿಕ್ಷಣದ ವ್ಯಾಪಾರೀಕರಣದ ವಿರುದ್ಧ ನಿರಂತರವಾಗಿ ಹೋರಾಡುತ್ತಿದೆ. ಇಂಥ ವಿದ್ಯಾರ್ಥಿ ಸಂಘಟನೆಯ ನಾಯಕನ ವಿರುದ್ಧ ದೇಶದ್ರೋಹದ ಆರೋಪ ಹೊರಿಸಿದ ಘಟನೆ ದೇಶದ ಪ್ರಗತಿಪರ, ಜನಪರ ಹೋರಾಟಗಾರರಿಗೆ ಆಘಾತವನ್ನುಂಟುಮಾಡಿದೆ. ಇದರ ಹಿಂದೆ ವ್ಯವಸ್ಥಿತ ಪಿತೂರಿ, ಷಡ್ಯಂತ್ರ ಕಂಡುಬರುತ್ತಿದೆ.

ಚೆನ್ನೈನ ಐ.ಐ.ಟಿ.ಯಲ್ಲಿ ಪೆರಿಯಾರ ಅಂಬೇಡ್ಕರ್ ವಿಚಾರವಾದಿಗಳ ಮೇಲೆ ದಾಳಿ, ಹೈದರಾಬಾದ ಕೇಂದ್ರೀಯ ವಿಶ್ವವಿದ್ಯಾಲಯದ ಅಂಬೇಡ್ಕರ್ ವಿದ್ಯಾರ್ಥಿ ಸಂಘಟನೆಯ ದಲಿತ ವಿದ್ಯಾರ್ಥಿಗಳ ಮೇಲೆ ದಾಳಿ, ರೋಹಿತ್ ವೇಮುಲನ ಸಾವು, ಈಗ ಜವಾಹರಲಾಲ್ ವಿಶ್ವವಿದ್ಯಾಲಯದ ಎಡಪಂಥೀಯ ಚಿಂತನೆಯ ವಿದ್ಯಾರ್ಥಿ ಕನ್ಹಯ್ಯ ಕುಮಾರನ ಮೇಲೆ ಗಂಭೀರ ಆರೋಪ, ಬಂಧನ ಇವೆಲ್ಲ ಕೋಮುವಾದಿ ಪಕ್ಷವಾದ ಬಿ.ಜೆ.ಪಿ.ಯ ಅಧಿಕಾರಾವಧಿಯಲ್ಲಿ, ಆಡಳಿತ ಪಕ್ಷದ ಸಚಿವರ ಸೂಚನೆಯಂತೆ ನಡೆದದ್ದು ಆಕಸ್ಮಿಕವಲ್ಲ. ಇದು ಭಿನ್ನಮತವನ್ನು ಸದೆಬಡಿವ ಸರ್ವಾಧಿಕಾರಿ ಧೋರಣೆ. ವಿಶ್ವವಿದ್ಯಾಲಯಗಳಲ್ಲಿ ರಾಜಕೀಯ ಚಿಂತನೆ ಇರುವುದು ತಪ್ಪಲ್ಲ. ರಾಜಕೀಯವನ್ನೂ ಒಳಗೊಂಡು ಎಲ್ಲ ವಿಷಯಗಳ ಕುರಿತು ಚಿಂತನ–ಮಂಥನ ನಡೆಯುವುದು, ಸಿದ್ಧಾಂತ–ಪ್ರತಿಸಿದ್ಧಾಂತ ಪ್ರತಿಪಾದನೆಯಾಗುವುದು ಆರೋಗ್ಯಕರ ಲಕ್ಷಣ. ಜವಾಹರಲಾಲ್ ನೆಹರು ವಿಶ್ವವಿದ್ಯಾಲಯ ಅಂಥ ಸೈದ್ಧಾಂತಿಕ ಚರ್ಚೆ, ಸಂಘರ್ಷಗಳಿಗೆ ಹೆಸರುವಾಸಿಯಾಗಿದೆ. ಅದರ ಪರಿಣಾಮವಾಗಿಯೇ ವಿಶ್ವವಿಖ್ಯಾತ ಬುದ್ಧಿಜೀವಿಗಳೂ, ಸಾಮಾಜಿಕ ತಜ್ಞರು, ಇತಿಹಾಸಕಾರರು, ರಾಜಕೀಯ ಮುತ್ಸದ್ದಿಗಳು ಆ ವಿಶ್ವವಿದ್ಯಾಲಯದಿಂದ ಹೊರ ಬಂದಿದ್ದಾರೆ. ಅಂಥವರಲ್ಲಿ ಹಲವಾರು ಜನ, ಬಿ.ಜೆ.ಪಿ.ಯನ್ನೂ ಒಳಗೊಂಡಂತೆ, ದೇಶದ ಎಲ್ಲ ಪಕ್ಷಗಳಲ್ಲಿ ನಾಯಕರಾಗಿ, ವಕ್ತಾರರಾಗಿ, ಮಾರ್ಗದರ್ಶಕರಾಗಿ, ನೀತಿ ನಿರೂಪಕರಾಗಿ ಕೆಲಸ ಮಾಡುತ್ತಿದ್ದಾರೆ. ಜೆ.ಎನ್.ಯು. ಇಂಥ ಚಿಂತಕರಿಂದಲೇ ವಿಶ್ವವಿಖ್ಯಾತಿಯನ್ನು ಪಡೆದಿದೆ. ಆ ಕಾರಣಕ್ಕಾಗಿಯೇ ಕನ್ಹಯ್ಯ ಕುಮಾರನ ಬಂಧನವನ್ನು ಪ್ರತಿಭಟಿಸಿ ಹೋರಾಡುತ್ತಿರುವ ವಿದ್ಯಾರ್ಥಿ–ಅಧ್ಯಾಪಕರಿಗೆ ವಿಶ್ವದಾದ್ಯಂತ ಬೆಂಬಲ ವ್ಯಕ್ತವಾಗಿದೆ. ಇಂದು ಸಾರ್ವಜನಿಕ ವಿಶ್ವವಿದ್ಯಾಲಯಗಳು ಖಾಸಗಿ ಹಾಗೂ ವಿದೇಶಿ ವಿಶ್ವವಿದ್ಯಾಲಯಗಳ ಪೈಪೋಟಿಯನ್ನು ಎದುರಿಸುತ್ತಿವೆ. ನಮ್ಮ ದೇಶದ ಸಾರ್ವಜನಿಕ ವಿಶ್ವವಿದ್ಯಾಲಯಗಳ, ಶಿಕ್ಷಣ ಸಂಸ್ಥೆಗಳ ವಿಶ್ವಾಸಾರ್ಹತೆಯನ್ನು ಕಾಪಾಡುವುದು ನಮ್ಮ ಸರಕಾರಗಳ ಕೆಲಸ. ಆದರೆ ಶಿಕ್ಷಣದ ಖಾಸಗೀಕರಣಕ್ಕೆ, ವ್ಯಾಪಾರೀಕರಣಕ್ಕೆ ಪಣ ತೊಟ್ಟಿರುವ ನಮ್ಮ ಸರಕಾರಗಳು ಇಂಥ ಸಾರ್ವಜನಿಕ ಶಿಕ್ಷಣ ಸಂಸ್ಥೆಗಳ ಸಂರಕ್ಷಣೆಗೆ ನಿಲ್ಲುವುದನ್ನು ನಿರೀಕ್ಷಿಸಲಾಗದು. ವಿದ್ಯಾರ್ಥಿಗಳು, ಪಾಲಕರು ಮುಂದಾಗಿ ಈ ಸಂಸ್ಥೆಗಳನ್ನು ಉಳಿಸಿ ಬೆಳೆಸುವ ಕಾರ್ಯ ಮಾಡಬೇಕಿದೆ.

ಅಂತಿಮವಾಗಿ ಸರಕಾರ ಕನ್ಹಯ್ಯ ಕುಮಾರನ ಮೇಲೆ ನಕಲಿ ವೀಡಿಯೋ ಆಧರಿಸಿ ಮಾಡಲಾದ ಆರೋಪವನ್ನು ಹಿಂತೆಗೆದುಕೊಳ್ಳಬೇಕು. ನಕಲಿ ವೀಡಿಯೋ ತಯಾರಿಸಿದವರ ವಿರುದ್ಧ ತನಿಖೆ ಮಾಡಿ ಕ್ರಮ ಕೈಗೊಳ್ಳಬೇಕು. ಅದೇ ರೀತಿ ಕೋರ್ಟ್ ಆವರಣದಲ್ಲಿ ಕಾನೂನು ಕೈಗೆತ್ತಿಕೊಂಡ ಗೂಂಡಾ ಶಕ್ತಿಗಳ ವಿರುದ್ಧ ಕ್ರಮ ಜರುಗಿಸಬೇಕು. ವಿಶ್ವವಿದ್ಯಾಲಯದ ವಿದ್ಯಮಾನಗಳನ್ನು ವಿಶ್ವವಿದ್ಯಾಲಯದ ಆಡಳಿತ




ತಿಂಗಳ ಪತ್ರಿಕೆ

**ಹೊಸತು**

ನೆನ್ನೆದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





■ **ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

■ **ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಮಂಡಳಿಗೆ ನಿರ್ವಹಿಸುವ ಜವಾಬ್ದಾರಿ ಕೊಟ್ಟು ಸ್ವಾಯತ್ತತೆಯನ್ನು ಗೌರವಿಸಬೇಕು. ಕಾನೂನು ಸುವ್ಯವಸ್ಥೆಗೆ ಧಕ್ಕೆ ಬರುವಂತಿದ್ದರೆ ವಿಶ್ವವಿದ್ಯಾಲಯದ ಆಡಳಿತವರ್ಗದ ಸಲಹೆಯ ಮೇರೆಗೆ ಮಧ್ಯಪ್ರವೇಶ ಮಾಡುವ ಅವಕಾಶ ಸರಕಾರಕ್ಕೆ ಇದ್ದೇ ಇರುತ್ತದೆ. ಆಡಳಿತ ಪಕ್ಷದ ವಿದ್ಯಾರ್ಥಿ ಸಂಘಟನೆಯನ್ನಿಟ್ಟುಕೊಂಡು ಶಿಕ್ಷಣ ಸಂಸ್ಥೆಗಳ ಮೇಲೆ ನಿಯಂತ್ರಣ, ನೀತಿ ಹೇರುತ್ತಾ ಹೋದರೆ ತೀವ್ರವಾದ ಪ್ರತಿರೋಧವನ್ನು ಸರಕಾರಗಳು ಎದುರಿಸಬೇಕಾಗುತ್ತದೆ.

ಪ್ರಸ್ತುತ ವಿದ್ಯಮಾನಗಳನ್ನು ಗಮನಿಸಿದರೆ ದೇಶದ ಐಕ್ಯತೆ, ಸಮಗ್ರತೆಗೆ ಆಳುವ ಪಕ್ಷದ ನೀತಿಗಳಿಂದಲೇ ಧಕ್ಕೆಯಾಗುವ ಅಪಾಯವಿದೆ. ಬಹುಭಾಷೆ, ವೈವಿಧ್ಯಮಯ ಸಂಸ್ಕೃತಿ, ವಿಚಾರ ವೈವಿಧ್ಯತೆಯನ್ನು ಗೌರವಿಸದಿದ್ದರೆ, ಬಹುತ್ವಕ್ಕೆ ಮನ್ನಣೆ ಕೊಡದೇ ಇದ್ದರೆ ಅದು ಪ್ರತ್ಯೇಕತೆಯ ಬೀಜ ಮೊಳೆಯಲು ಕಾರಣವಾಗುತ್ತದೆ. ಅಂಥ ಅಪಾಯಕಾರಿ ಸನ್ನಿವೇಶ ಇಂದು ನಿರ್ಮಾಣವಾಗುತ್ತಿದೆ. ಇಂಥ ಸಂದರ್ಭದಲ್ಲಿ ಆಳುವ ಪಕ್ಷದ ಜವಾಬ್ದಾರಿ ಹೆಚ್ಚಿರುತ್ತದೆ. ಆಳುವ ಪಕ್ಷ ಯಾವುದೇ ಇರಲಿ ಅದು ನಡೆಸುವ ಸರಕಾರ ಒಂದು ಪಕ್ಷದ ಪರವಾಗಿರದೇ ದೇಶದ ಎಲ್ಲ ಜನತೆಯ ಪರವಾಗಿರಬೇಕು. ಅಲ್ಲಿ ಬರುವ ಭಿನ್ನಮತಗಳನ್ನು ಪ್ರಜಾಸತ್ತಾತ್ಮಕವಾಗಿಯೇ ನಿರ್ವಹಿಸಬೇಕು. ಬೌದ್ಧಿಕ ಸಂಘರ್ಷ ದೇಶವನ್ನು ಉನ್ನತಿಯತ್ತ ಕೊಂಡೊಯ್ದರೆ, ಭೌತಿಕ ಸಂಘರ್ಷ ಅವನತಿಗೆ ತಳ್ಳುತ್ತದೆ.

ಸಿದ್ದನಗೌಡ ಪಾಟೀಲ

## ಸಿಯಾಚಿನ್ ದುರಂತ – ಕಾಡುವ ಪ್ರಶ್ನೆಗಳು

ಹಿಮಾಲಯದ ಅತಿ ಎತ್ತರದಲ್ಲಿರುವ ಗಡಿಪ್ರದೇಶ ಸಿಯಾಚಿನ್ ನೀರ್ಗಲ್ಲು ಪ್ರದೇಶ. ಈ ದುರ್ಗಮ ಪ್ರದೇಶದಲ್ಲಿ, ಅತ್ಯಂತ ಕಠಿಣ ಹವಾಮಾನ ಪರಿಸ್ಥಿತಿಯಲ್ಲೂ ಪಹರೆಯಲ್ಲಿದ್ದ ಒಂಬತ್ತು ಮಂದಿ ಯೋಧರು ಫೆಬ್ರವರಿ ೩ರಂದು ಹಠಾತ್ತಾಗಿ ಅಪ್ಪಳಿಸಿದ ಹಿಮಪಾತಕ್ಕೆ ಸಿಕ್ಕಿ ಬಲಿಯಾದರು. ಅವರಿಗೆ ದೇಶದ ಜನತೆ ನಮನ ಸಲ್ಲಿಸಿದ್ದೂ ಆಯಿತು. ಇಂಥ ಪ್ರತಿಕೂಲ ಹವಾಮಾನ ಇರುವ ನಿರ್ಜನ ಪ್ರದೇಶದಲ್ಲಿ ಸೇವೆ ಸಲ್ಲಿಸುವ ಯೋಧರಿಗೆ ಅತ್ಯಾಧುನಿಕ ಪರಿಕರಗಳನ್ನೂ ಒದಗಿಸುವ ಗೋಜಿಗೆ ಹೋಗದಿರುವುದೇ ದುರಂತಗಳಿಗೆ ಕಾರಣ. ಪಾಕಿಸ್ತಾನ–ಚೀಣಾ ಗಡಿಯಲ್ಲಿರುವ ಸಿಯಾಚಿನ್ ದೇಶದ ಭದ್ರತೆಗೆ ಅಗತ್ಯವಾದ ತಾಣ ಎನ್ನುವ ರಕ್ಷಣಾ ಸಚಿವ ಮನೋಹರ್ ಪರಿಕ್ಕರ್ ಇದಕ್ಕೆ ಗಮನ ಕೊಡದಿರುವುದು ಸೋಜಿಗದ ಸಂಗತಿ. ಗಡಿರೇಖೆ ಎಳೆಯದೆ ಬಿಟ್ಟಿರುವ ಈ ಗಡಿಪ್ರದೇಶವನ್ನು ನಿಸ್ಸೇನೀಕೃತ ವಲಯವಾಗಿ ಮಾಡುವ ಪ್ರಯತ್ನ ಇದುವರೆಗೆ ಫಲಿಸದೇ ಹೋಗಿದೆ. ೧೯೮೪ರಲ್ಲಿ ಸಿಯಾಚಿನ್ ಆಯಕಟ್ಟಿನ ಪ್ರದೇಶಗಳನ್ನು ಭಾರತ ಆಕ್ರಮಿಸಿಕೊಂಡ ಮೇಲೆ ಎರಡು ಸಾವಿರ ಮಂದಿ ಯೋಧರು ಸಾವನ್ನಪ್ಪಿದ್ದಾರೆ ಎಂಬುದು ಒಂದು ಅಂದಾಜು. ಹಾಗೆಯೇ ಪಾಕಿಸ್ತಾನದ ಕಡೆಯ ಯೋಧರೂ ಸಾವಿಗೀಡಾಗಿದ್ದಾರೆ. ಆದರೂ ಎರಡೂ ದೇಶಗಳಿಗೆ ಈ ಪ್ರದೇಶ ಪ್ರತಿಷ್ಠೆಯ ಪ್ರಶ್ನೆಯಾಗಿಯೇ ಇದೆ.

ಇಂಥ ದುರಂತಗಳು ಸಂಭವಿಸಿದಾಗಲೆಲ್ಲ ಹಲವಾರು ಪ್ರಶ್ನೆಗಳು ಉದ್ಭವಿಸುತ್ತವೆ, ಚರ್ಚೆಗಳು ನಡೆಯುತ್ತವೆ. ಎಲ್ಲವೂ ಅಲ್ಲಿಗೇ ಮುಗಿಯುತ್ತವೆ. ಅತ್ಯಂತ ದುಬಾರಿ ವೆಚ್ಚದಲ್ಲಿ ನಿರ್ವಹಿಸುತ್ತಿರುವ ಈ ಸೇನಾ ನೆಲೆಗಳನ್ನು ಮುಂದುವರಿಸಬೇಕೆ? ಎರಡೂ ದೇಶಗಳು ಒಂದು ಒಪ್ಪಂದಕ್ಕೆ ಬರಲಾಗುವುದಿಲ್ಲವೆ? ಈ ಪ್ರದೇಶ ದೇಶದ ಭದ್ರತೆಗೆ ಎಷ್ಟು ಅವಶ್ಯ? ಹೀಗೆ ಹಲವಾರು ಪ್ರಶ್ನೆಗಳು ಕಾಡುತ್ತವೆ. ಮಾತುಕತೆಯಿಂದಲೇ ಇದನ್ನು ಬಗೆಹರಿಸಬೇಕಾದ್ದು ಎಂಬುದು ನಿರ್ವಿವಾದದ ಸಂಗತಿ. ಈ ಬಗ್ಗೆ ೧೯೮೯ರಲ್ಲಿ ಸೇನಾರಹಿತ ವಲಯವನ್ನಾಗಿಸುವ ಕುರಿತು ಒಪ್ಪಂದವಾಗಬೇಕಿತ್ತು. ಆದರೆ ಅದು ಅಲ್ಲಿಗೇ ಸ್ಥಗಿತಗೊಂಡಿತು. ೨೦೦೩ರಿಂದ ಭಾರತ–ಪಾಕಿಸ್ತಾನಗಳ ಮಧ್ಯೆ ಕದನವಿರಾಮ ಒಪ್ಪಂದವಾಗಿದೆ. ಆದರೂ ಹವಾಮಾನ ವೈಪರೀತ್ಯದಿಂದ ಸಾವು ಸಂಭವಿಸುತ್ತಲೇ ಇದೆ. ಹಾಗಾಗಿ ಈ ಪ್ರದೇಶವನ್ನು ಸೇನಾರಹಿತ ವಲಯವನ್ನಾಗಿ ಮಾಡುವುದು ಜರೂರು ಅಗತ್ಯ.

ಇನ್ನು ಈ ದುರ್ಗಮ, ಮನುಷ್ಯ ವಾಸಕ್ಕೆ ಯೋಗ್ಯವಲ್ಲದ ನೀರ್ಗಲ್ಲು ಪ್ರದೇಶ ದೇಶದ ಭದ್ರತೆಗೆ ಎಷ್ಟು ಅಗತ್ಯ ಎಂಬುದನ್ನು ನೋಡೋಣ. ಪ್ರತಿಷ್ಠೆಯ ದೃಷ್ಟಿಯಿಂದ ನೋಡುವವರಿಗೆ ನೀರ್ಗಲ್ಲು ಪ್ರದೇಶದಿಂದ ೨೦ ಕಿ.ಮೀ. ದೂರದಲ್ಲಿರುವ ಸಿಯಾಚಿನ್ ಬೆಟ್ಟ ಆಯಕಟ್ಟಿನ ಪ್ರದೇಶ. ಭಾರತ ಸೇನಾ ಪಡೆಯ ಹಿರಿಯ ಅಧಿಕಾರಿಗಳ ಪ್ರಕಾರ ಅದು ಭದ್ರತೆಗೆ ಅನಿವಾರ್ಯವಾಗಿರುವ ಪ್ರದೇಶವೇನಲ್ಲ. ಅದೊಂದು ಭ್ರಮೆ, ಅಷ್ಟೆ. ೧೯೮೪ರಲ್ಲಿ ಈ ಪ್ರದೇಶದ ಆಕ್ರಮಣ ಕಾರ್ಯವನ್ನು ನಿರ್ವಹಿಸಿದ ಲೆಫ್ಟಿನೆಂಟ್ ಜನರಲ್ ಎಂ. ಎಲ್. ಚಿಬ್ಬರ್ ೨೦೦೪ರಲ್ಲಿ ಸಿಯಾಚಿನ್ ಕುರಿತು ಹೇಳಿರುವುದು ಹೀಗೆ: "ಸಿಯಾಚಿನ್ ಸಮತಂತ್ರದ ದೃಷ್ಟಿಯಿಂದ ಅಂಥ ಮಹತ್ವದ್ದೇನಲ್ಲ. ಅದು ಮಹತ್ವಪೂರ್ಣ ಆಯಕಟ್ಟಿನ ಪ್ರದೇಶ ಎಂದು ಹೇಳುವುದು ಒಂದು ಕಲ್ಪನೆ ಮಾತ್ರ."

ಅತ್ಯಾತೀತ ಹವಾಮಾನ ಹೊಂದಿರುವ ಈ ನೀರ್ಗಲ್ಲು ಪ್ರದೇಶ ಮಿಲಿಟರಿ ಕಾರ್ಯಾಚರಣೆಗೆ ಅನಿವಾರ್ಯವೆ? ಖಂಡಿತ ಇಲ್ಲ ಎನ್ನುತ್ತಾರೆ ಸೇನಾ ವಲಯದವರು. ಸಿಯಾಚಿನ್ ನೀರ್ಗಲ್ಲು ಮತ್ತು ಸಾಲ್ಟರೋ ಬೆಟ್ಟಸಾಲು ಪಾಕಿಸ್ತಾನದ ಮೇಲಾಗಲಿ, ಚೀಣಾದ ಮೇಲಾಗಲಿ ಮಿಲಿಟರಿ ಕಾರ್ಯಾಚರಣೆ ಕೈಗೊಳ್ಳಲು ಅನುಕೂಲವಾಗಿಲ್ಲ. ಮನುಷ್ಯ ಜೀವಕ್ಕೇ ಅಪಾಯಕಾರಿಯಾಗಿರುವ ಸಿಯಾಚಿನ್ ಯಾವ ರೀತಿಯಲ್ಲೂ ಭದ್ರತೆಗೆ ಅನಿವಾರ್ಯವಲ್ಲ. ಆದರೆ ಅದು ಅನಿವಾರ್ಯ ಎನ್ನುವ ವಾದ ಮಾತ್ರ ಇದೆ. ಚೀನಾ ಮತ್ತು ಪಾಕಿಸ್ತಾನಗಳಿಗೂ ಇದು ಅನ್ವಯವಾಗುತ್ತದೆ. ಭಾರತ ಸೇನೆ ಏನಾದರೂ ಸಿಯಾಚಿನ್ ನೀರ್ಗಲ್ಲು ಪ್ರದೇಶವನ್ನು ತ್ಯಜಿಸಿದರೆ ಪಾಕಿಸ್ತಾನ ಅದನ್ನು ಆಕ್ರಮಿಸಿಕೊಳ್ಳುವುದು ಎನ್ನುವುದರಲ್ಲಿ ಅರ್ಥವಿಲ್ಲ. ಏಕೆಂದರೆ, ಈ ಪ್ರದೇಶವನ್ನು ನಿಸ್ಸೇನೀಕೃತ ವಲಯವನ್ನಾಗಿಸಲು ಒಪ್ಪಂದಕ್ಕೆ ಬಂದಾಗ ಅಂಥ ಸಂಭವ ಇರುವುದಿಲ್ಲ. ಹಾಗಾಗಿ ಭಾರತ ಸರಕಾರ ಈ ಬಗ್ಗೆ ಆಲೋಚನೆ ಮಾಡುವುದು, ಸೂಕ್ತಕ್ರಮ ಕೈಗೊಳ್ಳುವುದು ಅತ್ಯಗತ್ಯ. ಇದರಿಂದ ಸಿಯಾಚಿನ್ ಉಳಿಸಿಕೊಳ್ಳಲು ಆಗುತ್ತಿರುವ ದುಬಾರಿ ವೆಚ್ಚವನ್ನು ನಿವಾರಿಸಲು ಅವಕಾಶವಾಗುವುದಲ್ಲದೆ, ಯೋಧರ ಜೀವವನ್ನೂ ಉಳಿಸಬಹುದಾಗಿದೆ.

ಸಿಯಾಚಿನ್ ಪ್ರದೇಶವನ್ನು ನಿಸ್ಸೇನೀಕೃತ ವಲಯವನ್ನಾಗಿಸುವವರೆಗೆ, ಈ ಗಡಿಯಲ್ಲಿರುವ ಕಾವಲು ಪಡೆಗೆ ಅತ್ಯಗತ್ಯವಾದ ಆಧುನಿಕ ಸೌಕರ್ಯಗಳನ್ನು ಸರಕಾರ ಒದಗಿಸಲು ಮುಂದಾಗಬೇಕು. ಅದಿಲ್ಲದೆ, ಸೈನಿಕರನ್ನು ಪ್ರಕೃತಿಯ ವಿಕೋಪಕ್ಕೆ ಒಡ್ಡಿ ವೈಭವೀಕರಿಸುವುದರಿಂದ ಪ್ರಯೋಜನವಿಲ್ಲ. ಸೈನಿಕರ ಮಟ್ಟಿಗೆ ಅವರು ವೀರೋಚಿತವಾಗಿ ವೈರಿಗಳ ವಿರುದ್ಧ ಕಾದಾಡಿ ಪ್ರಾಣಾರ್ಪಣೆ ಮಾಡಿದರೆ, ಅದು ಬೇರೆಯದೇ ಆಗಿರುತ್ತದೆ. ಆದರೆ ಅದೇನೂ ಇಲ್ಲದೆ ಜೀವ ಉಳಿಸಿಕೊಳ್ಳಲು ಪ್ರಕೃತಿಯ ಎದುರಿನಲ್ಲಿ ಹೋರಾಡುವುದೇ ದೊಡ್ಡ ವಿಷಯವಾದಾಗ ಅವರಿಗೂ ಸಮಾಧಾನ ದೊರಕದು. ಅದಲ್ಲದೆ ಮೃತ ಯೋಧರಿಗೆ ಸಲ್ಲಬೇಕಾದ ಗೌರವ ಒಂದು ಕಡೆಯಾದರೆ, ಅವರ ಕುಟುಂಬದವರಿಗೆ ದೊರಕ ಬೇಕಾದ ಪರಿಹಾರ ಧನವನ್ನು ಸಕಾಲದಲ್ಲಿ ಒದಗಿಸುವುದು ಅಗತ್ಯ. ಈ ವಿಷಯದಲ್ಲಿ ಸಂಭವಿಸುತ್ತಿರುವ ಮಂದಗತಿ ಶೋಚನೀಯ. ಎಷ್ಟೋ ಮಂದಿ ಯೋಧರ ಕುಟುಂಬಗಳವರು ಸಚಿವಾಲಯದ ಮಂದಗತಿ, ಭ್ರಷ್ಟಾಚಾರದಿಂದ ಪರಿತಪಿಸುತ್ತಿದ್ದಾರೆ. ಮೃತ ಸೈನಿಕರನ್ನು ವೈಭವೀಕರಿಸುವುದರಿಂದ ಪ್ರಯೋಜನವಿಲ್ಲ, ಅವರಿಗೆ ಸಲ್ಲಬೇಕಾದ ಸವಲತ್ತುಗಳನ್ನು ನೀಡುವುದು ಸರಿಯಾದ ಕ್ರಮ. ಸಾರ್ವಜನಿಕರು ಮತ್ತು ಸರಕಾರ ಇದಕ್ಕೆ ಗಮನ ಕೊಡಬೇಕು, ಸಿಯಾಚಿನ್ ದುರಂತದಲ್ಲಿ ಮಡಿದವರ ಕುಟುಂಬಗಳಿಗೆ ಸಾಂತ್ವನ ಹೇಳುತ್ತ, ಅವರಿಗೆ ಸಲ್ಲಬೇಕಾದ ಪರಿಹಾರ ಶೀಘ್ರದಲ್ಲಿ ದೊರಕಲಿ ಎಂದು ಹಾರೈಸೋಣ.

*(ಈ ತಿಂಗಳು : ೩ನೇ ಪುಟದಿಂದ)*

(ಈ ತಿಂಗಳು : ೩ನೇ ಪುಟದಿಂದ)

ಅಂತರರಾಷ್ಟ್ರೀಯ ರಾಜಕೀಯ ಸಂಬಂಧಗಳು ಕುಮ್ಮಕ್ಕು ನೀಡುತ್ತವೆ. ಕಾಶ್ಮೀರದ ವಿಚಾರದಲ್ಲಿ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯಲ್ಲಿ ಭಾರತಕ್ಕೆ ವೀಟೋ ಮೀಸಲಿರುವಂತೆ ಪಾಕಿಸ್ತಾನಕ್ಕೆ ಹತ್ತಾರು ವಿಷಯಗಳಲ್ಲಿ ಅಮೆರಿಕಾದ ಅಭಯಹಸ್ತವಿದೆ. ವ್ಯಾಪಾರ ಕುದುರಿಸಿಕೊಳ್ಳಲು ಒಬಾಮನೋ ಮತ್ತೊಬ್ಬನೋ ಬಂದಾಗ ಎಂದಾದರೂ ಖಂಡ ತುಂಡವಾಗಿ ನಮ್ಮ ದೇಶದ ದೆಹಲಿ ಮುತ್ಸದ್ದಿಗಳು ಉಸಿರೆತ್ತಿದ್ದಾರೆಯೆ ? ಅಂದರೆ, ನಮ್ಮ ವಿದೇಶಾಂಗ ನೀತಿಗೂ ನಮ್ಮ ಶ್ರೇಷ್ಠ ಹುತಾತ್ಮರಿಗೂ ಇರಬಾರದ ಸಂಬಂಧವೊಂದಿದೆ. ಅದನ್ನು ಗುಣಾತ್ಮಕವಾಗಿ ಬದಲಿಸಿಕೊಳ್ಳುವುದು ಒಂದು ಮಹತ್ವದ ಹೆಜ್ಜೆ. ಎರಡನೆಯದಾಗಿ, ಸಿಯಾಚಿನ್‌ಗಾಗಿ ದಿನಂಪ್ರತಿ ಐದು ಕೋಟಿ ರೂಪಾಯಿಗಳ ವೆಚ್ಚದ ವಿಚಾರ : ಅದರಲ್ಲಿ ದಲ್ಲಾಳಿಗಳ ಪಾಲೆಷ್ಟು? ಅಗ್ಗದ ಸರಂಜಾಮು ಪೂರೈಕೆ ಮಾಡಿ ಯೋಧರ ಪ್ರಾಣವನ್ನು ನಾವು ಪಣಕ್ಕಿಡುತ್ತಿದ್ದೇವೆಯೆ ? ಎಷ್ಟು ಸುಭದ್ರ ಟೆಂಟ್ ಹಾಕಿದರೂ ಸಿಯಾಚಿನ್‌ನ ಹಿಮಬಂಡೆಗಳು ಅವನ್ನು ಎಗ್ಗಿಲ್ಲದೆ ನುಚ್ಚುನೂರು ಮಾಡುತ್ತವೆ. ಶರೀರದಲ್ಲಿ ಶಾಖೋತ್ಪತ್ತಿಗೆ ಅಗತ್ಯವಾದಷ್ಟು ಆಹಾರ ಯಾವುದೆಂದು ಸಂಶೋಧನೆ ಮಾಡಿದರೆ ಸಾಲದು, ಅದನ್ನು ಯೋಧರಿಗೆ ಪೂರೈಸಬೇಕು. ಅದನ್ನು ಮಾಡುತ್ತಿದ್ದೇವೆಯೆ ? ದೇಶದ ರಕ್ಷಣಾ ಮಂತ್ರಾಲಯ ಹಾಗೂ ಅದರ ಅಂಗಸಂಸ್ಥೆಗಳಲ್ಲಿ ಭ್ರಷ್ಟಾಚಾರದ ಪ್ರಮಾಣವು ಬಹಳ ಹೆಚ್ಚಾಗಿದೆಯೆಂಬುದು ಎಲ್ಲರಿಗೂ ತಿಳಿದ ಸತ್ಯ. ಇದನ್ನು ನಿಗ್ರಹಿಸದೆ ಹುತಾತ್ಮ ಹನುಮಂತಪ್ಪನವರಿಗೆ ಅಪಾರ ಗೌರವ ಸೂಚಿಸುವುದು ಕ್ಷಣಿಕವಾದ ಪ್ರದರ್ಶನವಾಗಿ ಹೋಗುತ್ತದೆ. ರಕ್ಷಣಾ ಖಾತೆಯಲ್ಲಿ ಭ್ರಷ್ಟಾಚಾರವನ್ನು ಸಹಿಸಲಾಗದೆಂದು ಕಾರ್ಯಮಗ್ನರಾದ ಎ. ಕೆ. ಆಂಟನಿ ನಿರಾಶೆಯಿಂದ ನಿರ್ಗಮಿಸಿದರು, ಕಂಟ್ರಾಕ್ಟರುಗಳು ನಿಟ್ಟುಸಿರೆಳೆದರು. ಈಗ ಪಾರಿಕ್ಕರ್ ಎಲ್ಲವನ್ನೂ ಖಾಸಗಿಗೆ ಹಸ್ತಾಂತರಿಸುವುದರಲ್ಲಿ ಮಗ್ನರು. ಅದು ಹನುಮಂತಪ್ಪನವರಂಥವರಿಗೆ ನಮ್ಮಿಂದಾಗುವ ಅಪಚಾರವೆಂದು ತಿಳಿಯೋಣ. ಜನಸಮುದಾಯವು ಇಂತಹ ಸನ್ನಿವೇಶದಲ್ಲಿ ಸಕಾಲಿಕವಾಗಿ ಮಧ್ಯಪ್ರವೇಶ ಮಾಡುವುದು ಅವಶ್ಯಕ, ಅನಿವಾರ್ಯ. ಮತ್ತೊಮ್ಮೆ ಧೀರಚಿತ್ತರೂ ತ್ಯಾಗಿಗಳೂ ಆದ ಹನುಮಂತಪ್ಪ ಮತ್ತು ಅವರ ಸಹಯೋಧರಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸೋಣ.

✶ ✶ ✶

ಯಾವುದಕ್ಕೆ ಆದ್ಯತೆ ಅಗತ್ಯವೋ ಅದಕ್ಕೆ ಸಾಕಷ್ಟು ಹಣವಿಲ್ಲ, ಯಾವುದು ಅನಗತ್ಯವೋ ಅದಕ್ಕೆ ದುಂದು ವೆಚ್ಚ. ಇದು ನಮ್ಮ ಕೇಂದ್ರ ಸರ್ಕಾರದ ನೀತಿಯಾಗಿಬಿಟ್ಟಿದೆ. ಅದಕ್ಕೆ ಒಂದು ಉದಾಹರಣೆ ಯೋಗದ ಬಾಬತ್ತು ಸಿಯಾಚಿನ್ ಹಿಮಗಡ್ಡೆಗಳೋಪಾದಿಯಲ್ಲಿ ಹಣವು ಉರುಳಿ ಹೋಗುತ್ತಿರುವ ಇಂದಿನ ವಿದ್ಯಮಾನ. ಅಂತರರಾಷ್ಟ್ರೀಯ ಯೋಗ ದಿನಕ್ಕೆ ನಮ್ಮ ದೇಶ ಎಷ್ಟು ಖರ್ಚು ಮಾಡಿತೆಂದು ಇನ್ನೂ ನಿಖರವಾಗಿ ತಿಳಿದಿಲ್ಲ. ಆದರೆ ಒಂದು ವಿಷಯ ತಿಳಿದಿದೆ : ಆ 'ದಿನ'ದ ಸಂಭ್ರಮದಿಂದಾಗಿ ಯೋಗಕ್ಕೆ ಶರಣಾಗಲು ಬಂದವರ ಸಂಖ್ಯೆ ನಗಣ್ಯ. ಅಡಾವುಡಿಯಿಂದ ಜನರನ್ನು ಆಕರ್ಷಿಸಲಾಗುವುದಿಲ್ಲ. ಹೀಗೆ ಬರುತ್ತಾರೆ, ಸಂಭ್ರಮದಲ್ಲಿ ಪಾಲ್ಗೊಳ್ಳುತ್ತಾರೆ, ಹಾಗೆ ಹೋಗಿಬಿಡುತ್ತಾರೆ. ಯೋಗ ದಿನದ ನಂತರದ ಸಮಾಚಾರ ಇಂದಿನದು. ಒಂದು ಕಡೆ ಆಯುಷ್ ಅಧೀನದಲ್ಲಿರುವ ಮೊರಾರ್ಜಿ ಯೋಗಸಂಸ್ಥೆ, ಇನ್ನೊಂದೆಡೆ ವಿಶ್ವವಿದ್ಯಾಲಯ ಧನಸಹಾಯ ಆಯೋಗ (ಯುಜಿಸಿ); ಇವೆರಡರ ಮೇಲೆ ಸಚಿವೆ ಸ್ಮೃತಿ ಇರಾನಿಯವರ ಸಚಿವಾಲಯ. ಕಳೆದ ಎರಡು ತಿಂಗಳಲ್ಲಿ ಯುಜಿಸಿ ಹತ್ತಕ್ಕೂ ಹೆಚ್ಚು ಸಭೆಗಳನ್ನು ನಡೆಸಿದೆ. ಎಲ್ಲಾ ಒಂದು–ಒಂದೂವರೆ ಗಂಟೆ ಸಭೆಗಳು. ಕಾರ್ಯಸೂಚಿಯ ಚರ್ಚೆ ಅತ್ಯಲ್ಪ. ದೇಶದ ಹಲವು ಭಾಗಗಳಿಂದ "ಪರಿಣತರು" ಬರುತ್ತಾರೆ. ವಿಮಾನಗಳಲ್ಲಿ ಬಂದು "ಐದು ನಕ್ಷತ್ರ"ದ ಹೋಟೆಲುಗಳಲ್ಲಿ ಉಳಿಯುತ್ತಾರೆ. ಒಂದೊಂದು ಸಭೆಗೆ ಕನಿಷ್ಠ ಏಳೆಂಟು ಲಕ್ಷ ಖರ್ಚು. ಇಷ್ಟೊಂದು ಸಭೆಗಳಲ್ಲಿ ಚರ್ಚೆಯಾಗುತ್ತಿರುವುದೇನು ? ವಿಶ್ವವಿದ್ಯಾನಿಲಯಗಳೂ ತಮ್ಮ ವಲಯಗಳಲ್ಲಿ ಯೋಗವನ್ನು ಒಂದು ಪಠ್ಯವಿಷಯವಾಗಿಸುವುದು ! ಅದು ಪದವಿ ಮತ್ತು ಸ್ನಾತಕೋತ್ತರ, ಹೀಗೆ ಎರಡು ಹಂತಗಳಲ್ಲೂ ಜಾರಿಗೆ ಬರಬೇಕಂತೆ. ಪಠ್ಯವಿಷಯಗಳೇನು, ಪಠ್ಯಗ್ರಂಥಗಳು ಯಾವುವು, ಬೋಧಕರು ಯಾರು, ವಿದ್ಯಾರ್ಥಿಗಳಾಗಿ ಬರುವವರ ಅರ್ಹತೆಗಳೇನು, ಪರೀಕ್ಷೆ ಹೇಗೆ, ಇತ್ಯಾದಿ ವಿಷಯಗಳ ಚರ್ಚೆ ನಡೆದದ್ದೇ ನಡೆದದ್ದು. ಸಭೆಗಳಲ್ಲಿ ಭಾಗವಹಿಸಿ ಬಂದು, ಇನ್ನು ಮುಂದೆ ಅಂತಹ ಸಭೆಗಳಿಗೆ ಹೋಗುವುದು ನಿರರ್ಥಕವೆಂದು ಬಗೆದಿರುವ ಒಬ್ಬ ಖ್ಯಾತ ಯೋಗಪರಿಣತರು ಈಚಿನ ಒಂದು ಸಭೆಯಲ್ಲಿ ಎತ್ತಿದ ಪ್ರಶ್ನೆಗಳಿವು : ಅನೌಪಚಾರಿಕ ವಿಧಾನಗಳಿಂದ ನೂರಾರು ವರ್ಷಗಳಿಂದ ನಮ್ಮ ಜನ ಯೋಗಾಭ್ಯಾಸ ಮಾಡುತ್ತಿದ್ದಾರೆ; ಈಗ ಕೇವಲ ಯೋಗವೊಂದನ್ನೇ ವ್ಯಾಸಂಗ ಮಾಡಲು ದೇಶದ ಎಲ್ಲ ವಿಶ್ವವಿದ್ಯಾನಿಲಯಗಳಲ್ಲೂ ವಿದ್ಯಾರ್ಥಿಗಳು ಬೇಕೆ ? ಎಲ್ಲಿಂದ ಬರುತ್ತಾರೆ ? ಅವರಿಗೆಲ್ಲಾ ಬೋಧಕರನ್ನು ನಿಜಕ್ಕೂ ಸರ್ಕಾರವು ನೇಮಿಸುತ್ತದೆಯೆ ? ಈಗಾಗಲೆ ತತ್ವಶಾಸ್ತ್ರ ಮತ್ತು ಸಂಸ್ಕೃತ ವಿಭಾಗಗಳಲ್ಲಿ ಯೋಗದ ಪಠ್ಯಗಳ ಅಧ್ಯಯನ ಜಾರಿಯಲ್ಲಿದೆ. ಅಲ್ಲಿ ಎಷ್ಟು ವಿದ್ಯಾರ್ಥಿಗಳು ಬರುತ್ತಿದ್ದಾರೆ ? ಕೇವಲ ಯೋಗ "ಓದಲು" ವಿದ್ಯಾರ್ಥಿಗಳು ಬರುವುದು ಆರೋಗ್ಯಕರವೆ ? ಪೂರ್ಣಾವಧಿಯಲ್ಲಿ ಅದೊಂದನ್ನೇ ವ್ಯಾಸಂಗ ಮಾಡುವುದು ವಿಶ್ವವಿದ್ಯಾನಿಲಯಗಳಿಗೆ ಹೊಂದುತ್ತದೆಯೆ, ಇತ್ಯಾದಿ. ಹೀಗೆ ಪ್ರಶ್ನೆಗಳ ನ್ನೆತ್ತುವವರು ಯೋಗ ವಿರೋಧಿಗಳೆಂಬ ಹಣೆಪಟ್ಟಿ ಧರಿಸುವ ಕಾಲ ಬಂದಿದೆ. ಒಟ್ಟಿನಲ್ಲಿ, ಯೋಗದ ಹೆಸರಿನಲ್ಲಿ ಲಕ್ಷಗಟ್ಟಲೆ ಲೂಟಿ ನಡೆಯುತ್ತಿದೆ. ಪ್ರಧಾನಿಯವರ ಆಶೀರ್ವಾದವಿದೆಯೆಂದು ಹೇಳುತ್ತಾ ಕೆಲವರು ತಾವೇ ನೀತಿನಿರೂಪಕರಾಗುತ್ತಿದ್ದಾರೆಂಬ ವದಂತಿ ದಟ್ಟವಾಗಿ ಹರಡಿದೆ.

✶ ✶ ✶

ಜಶೋದಬೆನ್ ಮೋದಿ ಎಂಬೊಬ್ಬ ಸದ್ಗೃಹಿಣಿ ಎಂತಹ ಪೇಚಿಗೆ ಸಿಲುಕಿದ್ದಾರೆ ಗೊತ್ತೆ ? ಅವರು ಪಾಸ್‌ಪೋರ್ಟ್‌ಗಾಗಿ ಅರ್ಜಿ ಸಲ್ಲಿಸಿದ್ದರು. ಗುಜರಾತಿನಲ್ಲಿರುವ ಒಂದು ಪಾಸ್‌ಪೋರ್ಟ್ ಕಚೇರಿ ಅವರ ಅರ್ಜಿಯನ್ನು ತಿರಸ್ಕರಿಸಿತು. ಕಾರಣವೇನು ? ಅರ್ಜಿಯಲ್ಲಿ ಅವರು ತಮ್ಮ ಗಂಡನ ಬಗ್ಗೆ ಮಾಹಿತಿ ನೀಡಿಲ್ಲ, ಎಂದು. ನಾನೊಲ್ಲೆ ಎಂದು ಗಂಡನು ಆಕೆಯನ್ನು ಎಂದೋ ತ್ಯಜಿಸಿಬಿಟ್ಟಿದ್ದರು. ಅಂಥವರ ಹೆಸರನ್ನು ಆಕೆ ಬರೆಯಬೇಕಿತ್ತೆ ? ಒಂದು ಹೆಸರು ಬರೆದರೆಂದೇ ಇಟ್ಟುಕೊಳ್ಳಿ. ಆ ಹೆಸರಿನ ವ್ಯಕ್ತಿಯು ತಕರಾರೆತ್ತಿದರೆ ಜಶೋದಬೆನ್ ಅದನ್ನು ಹೇಗೆ ನಿಭಾಯಿಸಬೇಕು ? ಇಕ್ಕಟ್ಟಿಗೆ ಸಿಲುಕಿದ ಈಕೆ ಮಾಹಿತಿ ಹಕ್ಕು ಕಾಯಿದೆಯಡಿ ಗುಜರಾತಿನಲ್ಲಿ ಒಂದು ಅರ್ಜಿ ಸಲ್ಲಿಸಿದ್ದಾರೆ. ಅವರು ಕೇಳಿರುವ ಮಾಹಿತಿ ಎರಡು ಪ್ರಶ್ನೆಗಳನ್ನು ಕುರಿತಂತೆ : "ಭಾರತದ ಪ್ರಧಾನಿ ಶ್ರೀ. ನರೇಂದ್ರ ಮೋದಿಯವರಿಗೆ ಪಾಸ್‌ಪೋರ್ಟ್ ನೀಡಲಾಗಿದೆಯೆ ? ಹಾಗಿದ್ದರೆ ಅವರು ತಮ್ಮ ಪತ್ನಿಯ ಹೆಸರನ್ನು ತಿಳಿಸಿದ್ದಾರೆಯೆ ? ಹೌದಾದರೆ ಆ ಹೆಸರೇನು ?" ಆ ಬಗ್ಗೆ ಆಕೆಗಿನ್ನೂ ಮಾಹಿತಿ ದೊರೆತಿಲ್ಲ. ಎಂದಾದರೂ ಅದು ದೊರೆಯುತ್ತದೋ ಇಲ್ಲವೋ ಹೇಳಲಾಗುವುದಿಲ್ಲ. ಈ ಹಿಂದೆ ಆಕೆ ಇನ್ನೊಂದು ಮಾಹಿತಿಗಾಗಿ ಅರ್ಜಿ ಸಲ್ಲಿಸಿದ್ದರು : "ನನ್ನ ರಕ್ಷಣೆಗಾಗಿಯೆಂದು ಯಾವ ಕ್ರಮ ತೆಗೆದುಕೊಳ್ಳಲಾಗಿದೆ ಮತ್ತು ಎಷ್ಟು ಪೊಲೀಸರನ್ನು ನೇಮಿಸಲಾಗಿದೆ ?" ಉತ್ತರ ದೊರೆಯಿತೋ ಇಲ್ಲವೋ ತಿಳಿಯದು. ಒಂದು ಸ್ವಾಗತಾರ್ಹ ವಿಚಾರವೊಂದು ಸ್ಪಷ್ಟವಾಗಿ ತಿಳಿದಿದೆ : ಪ್ರವಾಸಕ್ಕೆಂದು ಜಶೋದಬೆನ್ ಮುಂಬೈಗೆ ಬಂದಿದ್ದರು. ಮುಂಬೈನ ಒಂದು ಕೊಳಚೆ ಪ್ರದೇಶದಲ್ಲಿ ಗುಡಿಸಲು ನಿವಾಸಿಗಳ ಎತ್ತಂಗಡಿಯ ಸೂಚನೆ ಬಂದಿತ್ತು. ಅವರ ಗುಡಿಸಲುಗಳನ್ನು ಕೆಡವಿ, ಅವರನ್ನು ಹೊರಗಟ್ಟಿ, ನಿರ್ವಸಿತರನ್ನಾಗಿಸಿ, ಆ ಜಾಗದಲ್ಲಿ ಬೇರೇನೋ ದೊಡ್ಡ ಕಟ್ಟಡ ಕಟ್ಟುವ ಯೋಜನೆ ಇದ್ದೀತು ! ಗುಡಿಸಲು ನಿವಾಸಿಗಳ ಪರವಾಗಿ ಸಂಘಟಕರು ಜಶೋದಬೆನ್‌ರವರನ್ನು ಸಂಪರ್ಕಿಸಿ ಗುಡಿಸಲು ನಿವಾಸಿಗಳ ಪ್ರತಿಭಟನೆಯನ್ನು ಬೆಂಬಲಿಸಬೇಕೆಂದು ಅವರನ್ನು ಕೇಳಿಕೊಂಡರು. ತಕ್ಷಣ ಅದಕ್ಕೆ ಒಪ್ಪಿಗೆ ನೀಡಿ ಆಕೆ ಗುಡಿಸಲು ಪ್ರದೇಶಕ್ಕೆ ಹೋದರು, ಪ್ರತಿಭಟನಾಕಾರರ ಜೊತೆ ಕುಳಿತರು. ಇಂತಹ ಸಾಮಾಜಿಕ ಪ್ರಜ್ಞೆಯುಳ್ಳ ಮಹಿಳೆಯೊಬ್ಬರಿಗೆ ಪಾಸ್‌ಪೋರ್ಟ್ ನೀಡಲು ತಕರಾರೆತ್ತುವುದು ಯಾವ ನ್ಯಾಯ ? ಕೋಟಿಗಟ್ಟಲೆ ಹಣ ಪಡೆಯುವ ಯಾವುದಾದರೂ ಸರ್ಕಾರೇತರ ಸಂಸ್ಥೆಯ ಯಜಮಾನಿಕೆ ಅವರದಲ್ಲವಲ್ಲ !

✶ ✶ ✶

ಹೈದರಾಬಾದ್ ವಿಶ್ವವಿದ್ಯಾನಿಲಯದ ದಲಿತ ವಿದ್ಯಾರ್ಥಿ ರೋಹಿತ್ ವೇಮುಲ ಆತ್ಮಹತ್ಯೆಯ ಕಾವು ಇನ್ನೂ ಆರದಿರುವಾಗಲೆ ನೆರೆಯ ತಮಿಳುನಾಡಿನ ವೈದ್ಯಕೀಯ ಶಿಕ್ಷಣ ಸಂಸ್ಥೆಯಲ್ಲಿ ಅಧ್ಯಯನ ಮಾಡುತ್ತಿದ್ದ ಮೂವರು ಬಾಲಕಿಯರ ಮರಣದ ಸುದ್ದಿ ಪ್ರಕಟಗೊಂಡಿದೆ. ಇದು ಆತ್ಮಹತ್ಯೆಯೋ ಅಥವಾ ಕೊಲೆಯೋ ಎನ್ನುವುದು ಇನ್ನೂ ನಿರ್ಧಾರವಾಗಿಲ್ಲ. ಅದೇನೇ ಇದ್ದರೂ ನಮ್ಮ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ, ಅದರಲ್ಲೂ ಖಾಸಗಿ ವಲಯದಲ್ಲಿ ದೋಷ ಇರುವುದನ್ನು ಈ ಪ್ರಕರಣಗಳು ಹೊರಗೆಡಹಿವೆ. ಹೈದರಾಬಾದ್ ಪ್ರಕರಣದಲ್ಲಿ ದಲಿತ ವಿದ್ಯಾರ್ಥಿಗಳನ್ನು ನಡೆಸಿಕೊಳ್ಳುವ ರೀತಿಯನ್ನು ಬಹಿರಂಗಗೊಳಿಸಿದೆ. ರಾಜಕೀಯ ಪ್ರಭಾವಕ್ಕೆ ಮಣಿಯುವ ವಿಶ್ವವಿದ್ಯಾನಿಲಯದ ಆಡಳಿತ ವರ್ಗದ ನಡವಳಿಕೆ ಎಂಥ ಅನಾಹುತ ತರಬಹುದು ಎನ್ನುವುದನ್ನು ಎತ್ತಿ ತೋರಿಸಿದೆ. ದಲಿತ ಸಂಘಟನೆಗಳ ಬಗ್ಗೆ ಪಕ್ಷಪಾತ ಧೋರಣೆಯ ಪ್ರಕರಣದ ಇನ್ನೊಂದು ಮುಖವನ್ನು ಚೆನ್ನೈನ ಐಐಟಿ ಉನ್ನತ ಶಿಕ್ಷಣ ಸಂಸ್ಥೆಯಲ್ಲಿ ನಾವು ನೋಡಿದ್ದೇವೆ. ಎರಡೂ ಕೂಡ ಬಲಪಂಥೀಯ ರಾಜಕೀಯ ಪ್ರೇರಿತ ಎನ್ನುವುದು ಸ್ಪಷ್ಟ. ಎರಡರಲ್ಲೂ ಸಂಘಪರಿವಾರದ ವಿದ್ಯಾರ್ಥಿ ವಿಭಾಗದ 'ಅಖಿಲ ಭಾರತ ವಿದ್ಯಾರ್ಥಿ ಪರಿಷತ್'ನ ಕೈವಾಡ ಇತ್ತು. ಇದರಲ್ಲಿ ಅನುಮಾನವಿಲ್ಲ. ಹಿಂದೂಪರ ಸಂಘಟನೆಗಳು, ಅದರಲ್ಲೂ ಮೇಲ್ಜಾತಿಗೆ ಸೇರಿದಂಥವು ದಲಿತರ ಮೇಲೆ, ಅಲ್ಪಸಂಖ್ಯಾತರ ಮೇಲೆ ಹಲ್ಲೆ ನಡೆಸುವುದು ಹೊಸದೇನಲ್ಲ. ಕೇಂದ್ರದಲ್ಲಿ ಮೋದಿ ಸರಕಾರ ಅಧಿಕಾರಕ್ಕೆ ಬಂದ ಮೇಲೆ ಅದು ಉಲ್ಬಣಿಸಿದೆ, ಅಷ್ಟೆ.

ಇನ್ನು ನಾಯಿಕೊಡೆಗಳಂತೆ ಎಲ್ಲೆಲ್ಲೂ ತಲೆ ಎತ್ತಿರುವ ಖಾಸಗಿ ಉನ್ನತ ಶಿಕ್ಷಣ ಸಂಸ್ಥೆಗಳ ಅವ್ಯವಸ್ಥೆ ತಮಿಳುನಾಡಿನ ಚೆನ್ನೈ ಹೊರವಲಯ ದಲ್ಲಿರುವ ವೈದ್ಯಕೀಯ ವಿದ್ಯಾಲಯದಲ್ಲಿ ಮೂವರು ವಿದ್ಯಾರ್ಥಿನಿಯರ ಸಾವಿನಿಂದ ಮತ್ತೊಮ್ಮೆ ಬೆಳಕಿಗೆ ಬಂದಿದೆ. ತಮಿಳುನಾಡಿನ ಸರಕಾರಿ ಕಾಲೇಜುಗಳಲ್ಲಿ ದೀರ್ಘಕಾಲ ಸೇವೆ ಸಲ್ಲಿಸಿದ್ದ, ಖ್ಯಾತ ಸಸ್ಯಶಾಸ್ತ್ರಜ್ಞ ಪ್ರೊ॥ ಬಿ. ಜಿ. ಎಲ್. ಸ್ವಾಮಿ ಕನ್ನಡಿಗರೆಲ್ಲರಿಗೂ ಪರಿಚಿತರು ಅವರ ನವಿರಾದ ಹಾಸ್ಯಭರಿತ ಬರಹಗಳಿಂದ. ಅವರು ತಮ್ಮ ಕಾದಂಬರಿ ಯೊಂದರಲ್ಲಿ ವಿಶ್ವವಿದ್ಯಾನಿಲಯದ ಇನ್‌ಸ್ಪೆಕ್ಷನ್ ತಂಡದ ಸದಸ್ಯರಾಗಿದ್ದಾಗಿನ ಪ್ರಕರಣವನ್ನು ಕುರಿತು ಬರೆದಿದ್ದಾರೆ. ತನ್ನ ಅಧಿಕಾರ ವ್ಯಾಪ್ತಿಗೆ ಬರುವ ಕಾಲೇಜುಗಳ ಪರಿಸ್ಥಿತಿ ಪರಿಶೀಲಿಸಲು ತಂಡವನ್ನು ರಚಿಸುವುದು ವಿಶ್ವವಿದ್ಯಾನಿಲಯಗಳ ವಾಡಿಕೆ. ಹಲವು ಅವ್ಯವಸ್ಥೆಗಳನ್ನೂ ಕಂಡ ಸ್ವಾಮಿಯವರು ಹೇಗೆ ಕನಿಷ್ಠ ಸವಲತ್ತುಗಳನ್ನೂ ಹೊಂದಿರುವುದಿಲ್ಲ ಖಾಸಗಿ ಕಾಲೇಜುಗಳು ಎನ್ನುವುದನ್ನು ವಿವರಿಸುತ್ತ ಹೇಗೆ ಒಂದು ಕಾಲೇಜಿನಿಂದ ಇನ್ನೊಂದು ಕಾಲೇಜಿಗೆ ಇಡೀ ಪುಸ್ತಕ ಭಂಡಾರವನ್ನೇ ಸಾಗಿಸಲಾಗಿತ್ತು ಎನ್ನುವುದನ್ನು ಸ್ವಾರಸ್ಯಕರವಾಗಿ ವಿವರಿಸಿದ್ದಾರೆ. ಅದನ್ನು ಓದಿ ಆನಂದಿಸಿ. ಈ ಪ್ರಕರಣ ಈಗ ನೆನಪಿಗೆ ಬರುವುದಕ್ಕೆ ಕಾರಣ ಮೂವರು ವಿದ್ಯಾರ್ಥಿನಿಯರನ್ನು ಬಲಿ ತೆಗೆದುಕೊಂಡ ಖಾಸಗಿ ಮೆಡಿಕಲ್ ಕಾಲೇಜಿನ ಅವ್ಯವಸ್ಥೆಯ ವಿವರಗಳನ್ನು ಓದಿದ್ದು. ಯಾವುದೇ ದಾಖಲೆಗಳನ್ನು, ಶಿಕ್ಷಕರನ್ನು ಹೊಂದಿಲ್ಲದ ಈ ಉನ್ನತ ವಿದ್ಯಾಸಂಸ್ಥೆಗಳ ಒಡೆಯರು ರಾಜಕೀಯ ಪಕ್ಷಗಳ ಪ್ರಮುಖರು ಪಕ್ಷಾತೀತವಾಗಿ. ಎಡಪಕ್ಷಗಳು ಮಾತ್ರ ಇದರಲ್ಲಿ ಇಲ್ಲ, ಏಕೆಂದರೆ ಅವು ಬರಿಗೈಯ್ಯವು. ಈಗ ಕಾಲೇಜಿಗೆ ಬೀಗಮುದ್ರೆ ಬಿದ್ದಿದೆ. ಮುಂದೇನಾಗುವುದೋ ನೋಡಬೇಕು. ಆದರೆ ವಿದ್ಯಾರ್ಥಿಗಳ ಗತಿ ಏನು ಎಂಬುದರ ಬಗ್ಗೆ ಸಂಬಂಧಪಟ್ಟವರು ಮೌನ ತಾಳಿದ್ದಾರೆ. ತನಿಖೆಯಿಂದ ಇನ್ನೂ ಏನೇನು ಹೊರಬರುತ್ತದೋ, ಇಲ್ಲ ಹಾಗೆಯೇ ಮುಚ್ಚಿಹೋಗುವುದೋ, ಯಾರು ಬಲ್ಲರು!

* * *

ಕರ್ನಾಟಕದಲ್ಲಿ ಸಿದ್ದರಾಮಯ್ಯ ನೇತೃತ್ವದ ಕಾಂಗ್ರೆಸ್ ಸರಕಾರ ಒಂದು ಸಾವಿರ ದಿನಗಳು ಆಡಳಿತ ಪೂರೈಸಿದೆ. ಮೂರು ವರ್ಷ ಮುಗಿಯುವುದಕ್ಕೆ ಮೂರೇ ತಿಂಗಳು ಬಾಕಿ. ಸರಕಾರ ತನ್ನ ಸಾಧನೆಗಳನ್ನು ಕೊಚ್ಚಿಕೊಳ್ಳಲು ಚುನಾವಣಾ ನೀತಿಸಂಹಿತೆ ಅಡ್ಡಿ. ಗ್ರಾಮ ಪಂಚಾಯಿತಿ, ತಾಲ್ಲೂಕು ಜಿಲ್ಲಾ ಪಂಚಾಯಿತಿ ಚುನಾವಣೆಗಳು, ಜೊತೆಗೆ ಶಾಸನ ಸಭೆಗೆ ಮೂರು ಕಡೆ ಉಪ ಚುನಾವಣೆಗಳು ಬೇರೆ. ಹಾಗಾಗಿ ಭಾಜಾಭಜಂತ್ರಿ ಅಬ್ಬರದ ಸಮಾರಂಭಗಳಿಲ್ಲ. ಹೇಳಿಕೊಳ್ಳುವಂಥ ಸಾಧನೆ ಏನಿಲ್ಲ ಬಿಡಿ. ಸಂಪುಟದಲ್ಲಿ ಸಾಮರಸ್ಯದ ಕೊರತೆ ಎದ್ದುಕಾಣುತ್ತಿದೆ. ಈ ಸಲ ಬಜೆಟ್‌ನಲ್ಲಿ ಇನ್ನು ಯಾರಿಗೆ ಭಾಗ್ಯವೋ? ಅದು ಬಿಟ್ಟರೆ ಉಳಿದದ್ದೆಲ್ಲ ಮಾಮೂಲಿ. ಐಎಎಸ್ ಅಧಿಕಾರಿಯ ಸಾವಿನಿಂದ ಹಿಡಿದು ಈಚೆಗೆ ನಡೆದ ತಾಂಜೇನಿಯ ವಿದ್ಯಾರ್ಥಿನಿಯ ಪ್ರಕರಣದವರೆಗೆ ಆಗಾಗ ಸಿಡಿಯುವ ಪ್ರಕರಣಗಳನ್ನು ಬಿಟ್ಟರೆ ಹೆಚ್ಚಿಗೆ ಏನೂ ಇಲ್ಲ. ಹರಸಾಹಸ ಮಾಡಿ ನಡೆಸಿದ ಜಾಗತಿಕ ಹೂಡಿಕೆದಾರರ ಸಮಾವೇಶ ಸ್ವರ್ಗಕ್ಕೆ ಮೂರೇ ಗೇಣು ಎನ್ನುವಂಥ ಭ್ರಮೆ ಸೃಷ್ಟಿಸಿದೆ, ಕೇಂದ್ರದಲ್ಲಿ ಮೋದಿ ಸರಕಾರ ಹೊಸೆದಿರುವ 'ಭಾರತದಲ್ಲೇ ತಯಾರಿಸಿ' ಯೋಜನೆಯಂತೆ. ಎರಡು ದಿನಗಳ ಈ ಸಮಾವೇಶಕ್ಕೆ ನೂರಾರು ಕೋಟಿ ರೂಪಾಯಿಗಳು ವೆಚ್ಚ. ಖಾಸಗಿ ವಾಹನಗಳಿಗೆ ನಗರಕ್ಕೆ ಪ್ರವೇಶ ನಿಷೇಧದಿಂದ ಸಾವಿರಾರು ಕೋಟಿ ರೂ.ಗಳ ನಷ್ಟ ಬೇರೆ. ಅದ್ದೂರಿಯಾಗಿ ನಡೆದ ಎರಡು ದಿನಗಳ ಸಮಾವೇಶದಲ್ಲಿ ಭಾಗವಹಿಸಿದ್ದ ಉದ್ಯಮಿಗಳೆಲ್ಲ ಪರಿಚಿತರೆ. ಇವರುಗಳೇ ಬೇರೇ ರಾಜ್ಯಗಳಲ್ಲಿ ಇಂಥ ಸಮಾವೇಶಗಳಲ್ಲಿ ಭಾಗವಹಿಸು ತ್ತಿರುತ್ತಾರೆ. ಎಲ್ಲ ಕಡೆ ಲಕ್ಷ ಲಕ್ಷ ಕೋಟಿ ರೂ.ಗಳ ಬಂಡವಾಳ ಹೂಡಿಕೆಯ ಭರವಸೆ ನೀಡುತ್ತಾರೆ. ಒಪ್ಪಂದಗಳಿಗೆ ಸಹಿ ಹಾಕುತ್ತಾರೆ. ಈ ಸಲವೂ ಹೆಚ್ಚು ಕಡಿಮೆ ಎರಡು ಲಕ್ಷ ಕೋಟಿ ರೂ.ಗಳ ಬಂಡವಾಳ ಹೂಡಿಕೆಯ ಕುರಿತು ಒಪ್ಪಂದ ಗಳಾಗಿವೆ. ಎಲ್ಲ ಉದ್ಯಮಿಗಳಿಗೂ ಬೇಕಾಗಿರುವುದು ಭೂಮಿ ನೂರಾರು ಎಕರೆ. ಅದು ಕೊಟ್ಟರೆ ಎಲ್ಲ ಮುಗಿಯಿತು. ಕಳೆದ ಒಂದು ದಶಕದಲ್ಲಿ ಕರ್ನಾಟಕದಲ್ಲಿ ಯಾವುದೇ ಹೊಸ ಉದ್ಯಮ ಸ್ಥಾಪನೆಗೊಂಡಿರುವುದು ಕಂಡುಬರುವುದಿಲ್ಲ. ಇದ್ದುದರಲ್ಲೂ ಕೆಲವೊಂದು ಮುಚ್ಚಿಹೋಗಿವೆ. ಭರವಸೆಗಳ ಪೈಕಿ ಕಾಲುಭಾಗದಷ್ಟಾದರೂ ಬಂದರೆ ಸಾಧನೆ ಎನ್ನಬಹುದೇನೋ.

ಉಳಿದಂತೆ ಸರಕಾರಿ ಯಂತ್ರ ಮಾತ್ರ ಮಂದಗತಿಯಿಂದ ಸಾಗುತ್ತಿದೆ. ಭೂಕಬಳಿಕೆ ಎಂದಿನಂತೆ ಮುಂದುವರಿಯುತ್ತಿದೆ. ಹಳೆಯ ಪ್ರಕರಣಗಳೆಲ್ಲ ಒಂದೊಂದಾಗಿ ಉದುರಿಹೋಗುತ್ತಿವೆ. ಮಾಜಿ ಮುಖ್ಯಮಂತ್ರಿ ಯಡಿಯೂರಪ್ಪ ನಿಧಾನ ವಾಗಿ ದೋಷಮುಕ್ತರಾಗುತ್ತಿದ್ದಾರೆ. ಇದುವರೆಗೆ ಯಾವ ರಾಜಕಾರಣಿಯೂ ಭ್ರಷ್ಟಾಚಾರ ಪ್ರಕರಣ ದಲ್ಲಿ ಶಿಕ್ಷೆಗೆ ಗುರಿಯಾಗಿರುವುದು ನೆನಪಾಗುತ್ತಿಲ್ಲ. ಮುಖ್ಯಮಂತ್ರಿ ಸಿದ್ದರಾಮಯ್ಯನವರ ಕೈಗಡಿಯಾರ ಈಗ ವಿವಾದದ ಸುಳಿಯಲ್ಲಿದೆ.

* * *

ನೇತಾಜಿ ಸುಭಾಷ್ ಚಂದ್ರರ ಮರಣದ ರಹಸ್ಯ ಭೇದಿಸುವುದಕ್ಕೆ ಇನ್ನೆಷ್ಟು ಕಾಲ ಬೇಕಾಗುತ್ತದೊ ಏನೊ. ಅಂತೂ ಆಗಾಗ ಅದನ್ನು ರಾಜಕೀಯ ದಾಳವಾಗಿ ಬಳಸಿಕೊಳ್ಳುವ ಪ್ರಯತ್ನ ಮಾತ್ರ ನಡೆಯುತ್ತಿರುತ್ತದೆ. ಮೋದಿ ಅಧಿಕಾರಕ್ಕೆ ಬಂದ ಮೇಲೆ ನೇತಾಜಿ ನಿಧನ ಕುರಿತ ರಹಸ್ಯ ದಾಖಲೆ ಗಳನ್ನು ಕಡತಗಳನ್ನು ಬಹಿರಂಗಗೊಳಿಸುವ ವಿಚಾರದಲ್ಲಿ ಸಾಕಷ್ಟು ಪ್ರಚಾರ ನಡೆಸಿತು. ದಾಖಲೆಗಳನ್ನೆಲ್ಲ ಬಯಲುಮಾಡಿದ್ದೂ ಆಯಿತು. ಆದರೆ ಬೆಟ್ಟ ಕಡಿದರೆ ಇಲಿ ಬಂತು ಎಂಬಂತೆ ಅವುಗಳಿಂದ ಹೊಸ ಸಾಕ್ಷ್ಯವೇನೂ ಬರಲಿಲ್ಲ. ಬರೀ ಅಬ್ಬರ ಎಷ್ಟೋ ಅಷ್ಟೆ. ಹಾಗೆಯೇ ಈಗ ಮುಂಬಯಿಯಲ್ಲಿ ಜರುಗಿದ ಭಯೋತ್ಪಾದನೆಯ ರೂವಾರಿಗಳಲ್ಲಿ ಒಬ್ಬನಾದ ಅಮೆರಿಕದ ಪ್ರಜೆ ಡೇವಿಡ್ ಹೆಡ್ಲಿಯ ವಿಚಾರಣೆ ಕೂಡ. ಪತ್ರಿಕೆಗಳಲ್ಲಿ, ಮಾಧ್ಯಮಗಳಲ್ಲಿ ಈತ ನೀಡುತ್ತಿರುವ ಹೇಳಿಕೆಗಳೇ ಸುದ್ದಿ, ಚರ್ಚೆಗಳಿಗೆ ಮೂಲ. ಈ ಹೆಡ್ಲಿ ಎಂಬ ವ್ಯಕ್ತಿ ಡಬಲ್ ಏಜೆಂಟ್. ಅಮೆರಿಕದ ಗೂಢಚಾರಿ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿದ ಈತ ಪಾಕಿಸ್ತಾನದ ಐಎಸ್ಐ ಗೂಢಚರ್ಯೆ ಸಂಸ್ಥೆಯೊಂದಿಗೂ ಸಂಪರ್ಕ ಹೊಂದಿದ್ದ. ಮುಂಬಯಿ ದಾಳಿ ಪ್ರಕರಣದಲ್ಲಿ ಲಷ್ಕರಿ ತೋಯಿಬಾ ಸಂಘಟನೆಯ ಜೊತೆ ಸೇರಿಕೊಂಡು ಸಂಚು ರೂಪಿಸಿದ್ದ. ಈಗ ಅಮೆರಿಕದಲ್ಲಿ ಕಾರಾಗೃಹ ವಾಸಿಯಾಗಿರುವ ಈತ ಮೋದಿ ಸರಕಾರದ ಪ್ರಯತ್ನದ ಫಲವಾಗಿ ಪ್ರಾಸಿಕ್ಯೂಷನ್ ಪರ ಸಾಕ್ಷಿಯಾಗಿದ್ದಾನೆ. ಅಮೆರಿಕದ ರಹಸ್ಯ ತಾಣದಲ್ಲಿ ಬಂಧಿಯಾಗಿರುವ ಹೆಡ್ಲಿ ವಿಡಿಯೋ ಕಾನ್ಫರೆನ್ಸ್ ಮೂಲಕ ಸಾಕ್ಷಿ

*(೧೦ನೇ ಪುಟಕ್ಕೆ)*




### ಜಾತಿ ಅಪಮಾನ ಗ್ರಹಿಸುವುದು ಹೇಗೆ...

✉ ೨೦೦೫ರ ನವೆಂಬರ್ ೬ರಂದು ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆ ಕೋಲಾರ ಜಿಲ್ಲೆಯ ಕಗ್ಗನಹಳ್ಳಿಯ ಸರ್ಕಾರಿ ಪ್ರಾಥಮಿಕ ಶಾಲೆಯ ಕುರಿತು "ಕಾಸ್ಟ್ ಇನ್ ಕ್ಲಾಸ್ ರೂಂ" ಎಂಬ ಶೀರ್ಷಿಕೆಯಲ್ಲಿ ಒಂದು ವರದಿ ಪ್ರಕಟಿಸಿತು. ವರದಿಯ ಪ್ರಕಾರ ಜನವರಿ ೨೦೧೪ರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ರಾಧಮ್ಮ ಎನ್ನುವವರು ಮುಖ್ಯ ಅಡುಗೆಯವರಾಗಿ ಆ ಶಾಲೆಯಲ್ಲಿ ಕೆಲಸಕ್ಕೆ ಸೇರಿದರು. ಅವರು ಸೇರಿದಂದಿನಿಂದ ಆ ಶಾಲೆಯಲ್ಲಿ ಕಲಿಯುತ್ತಿದ್ದ ಮೇಲ್ಜಾತಿಯ ಮಕ್ಕಳು ಆಕೆ ತಯಾರು ಮಾಡಿದ ಊಟವನ್ನು ನಿರಾಕರಿಸುತ್ತ ಬಂದರು. ಸರ್ಕಾರದ ಮಧ್ಯ ಪ್ರವೇಶದಿಂದ ಜನರನ್ನು ಮನವೊಲಿಸಲು ಪ್ರಯತ್ನಿಸಲಾಯಿತು. ಪರಿಣಾಮ ೧೧೮ ಜನ ಓದುತ್ತಿದ್ದ ಶಾಲೆಯಲ್ಲಿ ೧೦೦ ಜನ ಮಕ್ಕಳನ್ನು ಆ ಶಾಲೆಯಿಂದಲೇ ಪೋಷಕರು ಬಿಡಿಸಿದರು. ಮಿಕ್ಕ ೧೮ ಜನ ಆಕೆ ತಯಾರಿಸುತ್ತಿದ್ದ ಅಡುಗೆಯನ್ನು ಸೇವಿಸುತ್ತಿಲ್ಲ! ಆಕೆ ಇಂದಿಗೂ ಪ್ರತಿ ದಿನ ಸರ್ಕಾರ ನೀಡಿರುವ ಡೈರಿಯಲ್ಲಿ "ಇಂದು ಯಾವ ಮಕ್ಕಳು ಊಟ ಮಾಡಿಲ್ಲ" ಎಂದು ಬರೆಯುತ್ತಿದ್ದಾಳೆ.

ಇನ್ನೊಂದು ಕಡೆ, ಆಧುನಿಕ ಶಿಕ್ಷಣ ವ್ಯವಸ್ಥೆಯ ಕಿರೀಟ ಸ್ಥಾನ ಎಂಬ ಹೆಸರನ್ನು ಹೊತ್ತಿರುವ ವಿಶ್ವವಿದ್ಯಾನಿಲಯವೊಂದರಲ್ಲಿ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ ಸಂಘಟನೆಯ ನಾಯಕ ರೊಂದಿಗೆ ಕೆಲವು ಸೈದ್ಧಾಂತಿಕ ಕಾರಣಗಳಿಗೆ ದಲಿತ ಸಂಘಟನೆಯ ಹುಡುಗರು ಜಗಳವಾಡುತ್ತಾರೆ. ಇವರ ವಿರುದ್ಧ ಕ್ರಮ ಕೈಗೊಳ್ಳಿ ಎಂದು ಕೇಂದ್ರದ ಮಂತ್ರಿಯೊಬ್ಬರು ಮಾನವ ಸಂಪನ್ಮೂಲ ಸಚಿವೆಗೆ ನೇರವಾಗಿ ಪತ್ರ ಬರೆಯುತ್ತಾರೆ. ವಿಶ್ವವಿದ್ಯಾನಿಲಯ ವಿದ್ಯಾರ್ಥಿಗಳನ್ನು ಹಾಸ್ಟೆಲಿನಿಂದ ಹೊರಹಾಕುತ್ತದೆ.

ಅವರಲ್ಲಿ ಒಬ್ಬ ವಿದ್ಯಾರ್ಥಿ ರೋಹಿತ್ ವೇಮುಲ ಕೆಲವು ದಿನಗಳ ನಂತರ ಅಲ್ಲಿನ ಉಪ ಕುಲಪತಿ ಯವರಿಗೆ "ದಯಮಾಡಿ ದಲಿತ ವಿದ್ಯಾರ್ಥಿಗಳಿಗೆ ಪ್ರವೇಶಾತಿಯ ಸಂದರ್ಭದಲ್ಲಿಯೇ ಸ್ವಲ್ಪ ವಿಷ ಕೊಟ್ಟು ಬಿಡಿ, ಅವರ ಕೋಣೆಗಳಿಗೆ ನೇಣು ಬಿಗಿದುಕೊಳ್ಳಲು ಗಟ್ಟಿಯಾದ ಹಗ್ಗಗಳನ್ನು ಸರಬರಾಜು ಮಾಡಿಬಿಡಿ, ಆ ಮೂಲಕವಾದರೂ ನೀವು ದಲಿತರ ಸಮಸ್ಯೆಯನ್ನು ಇಲ್ಲವಾಗಿಸಬಹುದು" ಎಂದು ಬೇಸತ್ತು, ನೊಂದು ಪತ್ರ ಬರೆಯುತ್ತಾನೆ. ಆದರೆ ಯಾವುದೇ ಪ್ರಯೋಜನವಾಗುವುದಿಲ್ಲ. ಏಸಿ ಕೋಣೆಯಲ್ಲಿ ಕುಳಿತ ಮನುಷ್ಯನ ಹೃದಯ ಕರಗುವುದಿಲ್ಲ. ಆ ಹುಡುಗ ದಿನಾಂಕ ೧೮-೦೧-೨೦೧೬ರಂದು ಜಗತ್ತಿಗೆ ಒಂದು ಪತ್ರ ಬರೆದಿಟ್ಟು ನೇಣಿಗೆ ಏರುತ್ತಾನೆ.

ಮೇಲಿನ ಎರಡು ಘಟನೆಗಳನ್ನು ಅವಲೋಕಿಸಿದರೆ ನಮಗೆ ಇದರಲ್ಲಿ ಜಾತಿಯ ಪಾತ್ರವನ್ನು ಕಾನೂನಾತ್ಮಕವಾಗಿ ಗುರುತಿಸಲು ಸಾಧ್ಯವಿಲ್ಲ. ಮೇಲ್ನೋಟಕ್ಕೆ ಈ ಘಟನೆಗಳಿಗೂ ಜಾತಿ ಶೋಷಣೆಗೂ ಸಂಬಂಧವಿಲ್ಲ ಎಂಬಂತೆ ಕಾಣುತ್ತದೆ.

ಆ ಕಾರಣಕ್ಕೆ ನಮ್ಮ ನಡುವಿನ ಕೆಲವು ವಿದ್ವಾಂಸರು ಮೊದಲಿನ ಘಟನೆಯಲ್ಲಿ ಪೋಷಕರಿಗೆ ಶಾಲೆ ಇಷ್ಟವಾಗಲಿಲ್ಲ, ಅದಕ್ಕೆ ಶಾಲೆ ಬಿಡಿಸಿದರು! ಮಕ್ಕಳಿಗೆ ಊಟ ಇಷ್ಟವಾಗುತ್ತಿಲ್ಲ, ಅದಕ್ಕೆ ತಿನ್ನುತ್ತಿಲ್ಲ! ಅಷ್ಟೆ. ಇದರಲ್ಲಿ ಎಂತಹ ಜಾತಿ ಹುಡುಕುತ್ತೀರ ಎನ್ನುವ ತರ್ಕ ತಂದರೆ, ಎರಡನೆಯ ಪ್ರಕರಣದಲ್ಲಿ




ಒಬ್ಬ ಸಂಶೋಧಕ, "ನನ್ನ ಆತ್ಮಹತ್ಯೆಗೆ ನಾನೇ ಕಾರಣ" ಎಂದು ಬರೆದಿಟ್ಟ ಮೇಲೂ ನೀವೇಕೆ ಅದನ್ನು ಜಾತಿ ಕಾರಣದಿಂದ ಆದ ಹತ್ಯೆ ಎನ್ನುತ್ತಿದ್ದೀರಾ ? ನಿಮಗೆ ಎಲ್ಲದಕ್ಕೂ ಜಾತಿಯ ಬಣ್ಣ ಬಳಿಯುವುದು ಅಭ್ಯಾಸವಾಗಿದೆ ಎಂದು ತರ್ಕ ಹೂಡುತ್ತಾರೆ. ನಮ್ಮ ನಡುವಿನ ಕಾನೂನಿನ ಮಿತಿ ಹೀಗಿದೆ. ಇಲ್ಲಿ, ಜಾತಿಯ ಕಾರಣಕ್ಕೆ ಆಗುತ್ತಿರುವ ಅಪಮಾನ ಮತ್ತು ಮಾನಸಿಕ ನೋವುಗಳನ್ನು ಒಂದು ಹಿಂಸೆಯಾಗಿ ಗುರುತಿಸಲು ಸಾಧ್ಯವಾಗುತ್ತಿಲ್ಲ.

ಮುಖ್ಯವಾದ ವಿಷಯ, ನಾನು ಮೇಲಿನ ಎರಡು ಘಟನೆಗಳನ್ನೇ ಏಕೆ ಉದಾಹರಿಸಿದೆ ಎಂದರೆ ಕೋಲಾರ ಜಿಲ್ಲೆಯ ಕಗ್ಗನಹಳ್ಳಿಯಲ್ಲಿ ರಾಧಮ್ಮನಿಗೆ ಆದ ಹಿಂಸೆ ಪ್ರಕಟವಾದಾಗ ಎಲ್ಲೋ ಇರುವ ರೋಹಿತ್ ತನ್ನ ಫೇಸ್‌ಬುಕ್‌ನಲ್ಲಿ ಬರೆದು ಖಂಡಿಸಿದ್ದ! ಇಂದು ಆತನೇ ವ್ಯವಸ್ಥೆಯ ಹಿಂಸೆಗೆ ಸತ್ತು ಮಲಗಿದ್ದಾನೆ!

ಗಾಜನೂರು **ಕಿರಣ್ ಎಂ.**

### 'ವಂಶವೃಕ್ಷ' ಮತ್ತು 'ಸಂಸ್ಕಾರ' ಕಾದಂಬರಿಗಳ ಮುಖಾಮುಖಿ

✉ ೨೦೧೬ರ ವಾರ್ಷಿಕ ಸಂಚಿಕೆಯಲ್ಲಿ ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯನವರು 'ವಂಶವೃಕ್ಷ' ಮತ್ತು 'ಸಂಸ್ಕಾರ' ಕಾದಂಬರಿಗಳ ತುಲನಾತ್ಮಕ ಒಳನೋಟ ಗಳನ್ನು ಓದುಗರ ಮುಂದಿಟ್ಟಿದ್ದಾರೆ. ಎರಡೂ ಕಾದಂಬರಿಗಳಲ್ಲಿ ಲೇಖಕರ ಸೈದ್ಧಾಂತಿಕ ನಿಲುವುಗಳು ವ್ಯಕ್ತವಾಗಿವೆ. ಡಾ॥ ಎಸ್. ಎಲ್. ಭೈರಪ್ಪ ನವರು ಸನಾತನ ಹಿಂದೂ ಮೌಲ್ಯಗಳ ಪ್ರತಿಪಾದಕ ರಾದರೆ, ಡಾ॥ ಯು. ಆರ್. ಅನಂತಮೂರ್ತಿಯವರು, ಪಾಶ್ಚಾತ್ಯ ವಿಚಾರಗಳಿಂದ ಪ್ರಭಾವಿತರಾದ 'ಲಿಬರಲ್' ವಿಚಾರವಾದಿಗಳ ಬಣಕ್ಕೆ ಸೇರಿದವರಾಗಿದ್ದಾರೆ. ಎರಡೂ ಕಾದಂಬರಿಗಳ ನಡುವಣ ವೈರುಧ್ಯಗಳನ್ನು ಡಾ॥ ಕೆ.ಎಲ್. ಜಿ.ಯವರು ಸರಿಯಾಗಿ ಗುರುತಿಸಿದ್ದಾರೆ. 'ವಂಶಪಾರಂಪರ್ಯ ಶುದ್ಧಿ' 'ವಂಶವೃಕ್ಷ'ದ ಮುಖ್ಯ ವಸ್ತುವಾದರೆ, ಕರ್ಮಠ ಬ್ರಾಹ್ಮಣ ಅಗ್ರಹಾರದಲ್ಲಿ ಒಂದು ಸನ್ನಿವೇಶ ಸೃಷ್ಟಿಸುವ ದ್ವಂದ್ವ 'ಸಂಸ್ಕಾರ' ಕಾದಂಬರಿಯ ಮುಖ್ಯ ವಸ್ತುವಾಗಿದೆ. 'ವಂಶವೃಕ್ಷ'ದ ಶ್ರೀನಿವಾಸ ಶ್ರೌತಿಗಳ ಪಯಣ ಅನುರಕ್ತಿಯಿಂದ ವಿರಕ್ತಿಯೆಡೆಗೆ ಸಾಗಿದರೆ, 'ಸಂಸ್ಕಾರ'ದ ಪ್ರಾಣೇಶಾಚಾರ್ಯರ ಪಯಣ ವಿರಕ್ತಿಯಿಂದ ಅನುರಕ್ತಿಯೆಡೆಗೆ ಸಾಗುತ್ತದೆ.

'ಸಂಸ್ಕಾರ' ಕಾದಂಬರಿಯಲ್ಲಿ ನಾರಣಪ್ಪನ ಶವಸಂಸ್ಕಾರದ ಸಮಸ್ಯೆಗೆ ಧರ್ಮಶಾಸ್ತ್ರಗಳಲ್ಲಿ ಮತ್ತು ಮುಖ್ಯಪ್ರಾಣದೇವರ ಸನ್ನಿಧಿಯಲ್ಲೂ ಪರಿಹಾರ ಕಾಣದೆ, ಪ್ರಾಣೇಶಾಚಾರ್ಯರು ಸಂಚಾರ ಹೊರಟಾಗ ಆಕಸ್ಮಿಕವಾಗಿ, ಮಾಲೇರ ಪುಟ್ಟನ ಪರಿಚಯವಾಗುತ್ತದೆ. ಇಬ್ಬರೂ ದಾರಿ ಸವೆಸುತ್ತಿದ್ದಾಗ, ಒಂದು ನಾಗರಹಾವು ಅಡ್ಡ ಬಂದಾಗ ಮಾಲೇರ ಪುಟ್ಟನು ಹಾವನ್ನು ಸಾಯಿಸಿ, ರಸ್ತೆಯ ಬದಿಯಲ್ಲಿ ಇದ್ದ ಒಣಗಿದ ಕಡ್ಡಿ, ಎಲೆಗಳನ್ನು ಒಟ್ಟು ಮಾಡಿ ಸತ್ತ ಹಾವನ್ನು ಸುಡುತ್ತಾನೆ. ನಂತರ ಪ್ರಾಣೇಶಾಚಾರ್ಯರ ಕಡೆಗೆ ತಿರುಗಿ ಹಾವು ವಿಷಜಂತುವಾದರೂ, ಸತ್ತ ಹಾವಿಗೂ ಸಂಸ್ಕಾರದ ಅಗತ್ಯವಿದೆ ಎನ್ನುತ್ತಾನೆ. ಧರ್ಮಶಾಸ್ತ್ರ ಗ್ರಂಥಗಳಲ್ಲಿ ದೊರಕದ ಸರಳ ಪರಿಹಾರ ಪ್ರಾಣೇಶಾಚಾರ್ಯರಿಗೆ ಮಾಲೇರ ಪುಟ್ಟನ ಮಾತುಗಳಲ್ಲಿ ಲಭಿಸುತ್ತದೆ.

'ವಂಶವೃಕ್ಷ' ಮತ್ತು 'ಸಂಸ್ಕಾರ'ಗಳು ಸಾಹಿತ್ಯಕ ವಲಯದಲ್ಲಿ ಸುದೀರ್ಘ ಚರ್ಚೆ, ವಿವಾದಗಳನ್ನು ಹುಟ್ಟುಹಾಕಿ ಸಾಕಷ್ಟು ಪ್ರಭಾವ ಬೀರಿದ ಕೃತಿಗಳು ಎನ್ನಬಹುದು.

ಬೆಂಗಳೂರು **ಶಂಕರನಾರಾಯಣ**

✉ ೨೦೧೬ನೇ ಜನವರಿ ತಿಂಗಳ ವಿಶೇಷ ಸಂಚಿಕೆಯಲ್ಲಿ ಶ್ರೀ ಎಚ್. ಎಲ್. ಕೇಶವಮೂರ್ತಿ

ಅವರ ಲೇಖನ ತುಂಬ ಅದ್ಭುತವಾಗಿದೆ. 'ಮೋದಿ ವಿಜ್ಞಾನ' ಎಂಬ ಲೇಖನ ಓದುಗರಿಗೆ ಮುದ ನೀಡಿದೆ. ಈ ಲೇಖನ ವಿಮರ್ಶೆ ಮಾಡುವವರಿಗೆ ಆಹಾರವಾಗಿ ಪರಿಣಮಿಸಿದೆ.

ಭಾರತ ದೇಶದ ಪ್ರಧಾನ ಮಂತ್ರಿ ಮೋದಿಯವರು ವಿಜ್ಞಾನಿಯಲ್ಲ. ಭಾರತದ ಪುರಾಣ, ವೇದಗಳು, ಇತಿಹಾಸ ಮತ್ತು ಉತ್ತಮ ಕಥೆಗಳ ಅಭ್ಯಾಸ ಮಾಡಿರಬಹುದು. ಓದಿ, ಕೇಳಿರಬಹುದು. ಆದರೆ ಅವೆಲ್ಲ ವಿಜ್ಞಾನಕ್ಕೆ ಸಂಬಂಧಿಸಿದ ಕಾಲ್ಪನಿಕ ಕಥೆಗಳು. ವಿಜ್ಞಾನವೆಂದರೇನು ? ಯಾವುದೇ ವಿಷಯ ನಿಖರತೆ ಮತ್ತು ವಸ್ತುನಿಷ್ಠೆಯಿಂದ ಸಹಜವಾಗಿರಬೇಕು.

*ಚೌಡಾಪುರ* **ಮರಿದೇವರ ಸಿದ್ದಪ್ಪ**

### ಕರ್ನಾಟಕ – ಮಹಾರಾಷ್ಟ್ರ ಗಡಿ ಆಯೋಗಕ್ಕೊಂದು ಸಲಹೆ

ಭಾರತ ಸ್ವತಂತ್ರವಾದಾಗ ಪಾಕಿಸ್ತಾನಕ್ಕೆ ಸೇರಬಹುದಾದ ಪ್ರದೇಶವನ್ನು ನಿರ್ಧರಿಸಿ ಭಾರತ–ಪಾಕಿಸ್ತಾನದ ಗಡಿ ರೇಖೆಯನ್ನು ಗುರುತಿಸಲು ಆರ್.ಎ.ಡಿ.ಎ.ಆರ್. ರ್‍ಯಾಡ್ ಕ್ಲಿಫ್ ಎಂಬ ಮಹಾಶರಣರಿಗೆ ಒಪ್ಪಿಸಲಾಗಿತ್ತು. ಅವರು ಆ ಗಡಿಗೆರೆಯನ್ನು ನಿರ್ಧರಿಸಿದರು. ಆದರೆ ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳು ನಿರ್ಮಾಣವಾದಾಗ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿಗಳಾಗಿದ್ದ ಫಜ್ಲಲ್ ಅಲಿ ಅವರ ಅಧ್ಯಕ್ಷತೆಯಲ್ಲಿ ರಾಜ್ಯಗಳು ಪುನರ್ ವಿಂಗಡಣಾ ಆಯೋಗವನ್ನು ರಚಿಸಲಾಯಿತು. ಆ ಆಯೋಗ ಕೊಟ್ಟ ವರದಿಯ ಅನುಸಾರವಾಗಿ ಕರ್ನಾಟಕದ ಗಡಿ – ಗೆರೆಗಳನ್ನು ಗುರ್ತಿಸಿತು. ಆ ವರದಿಯನ್ನು ಭಾರತ ಸರಕಾರವು ಒಪ್ಪಿ ಅದನ್ನು ರಾಜ್ಯಗಳು ಪುನರ್ ವಿಂಗಡಣಾ ಶಾಸನವನ್ನು ಸಂಸದನ ಉಭಯ ಸದನಗಳು ಮಂಜೂರು ಮಾಡಿದವು.

ಆದರೆ ರಾಜ್ಯದ ಗಡಿಯಲ್ಲಿರುವ ಕೆಲವು ಪ್ರದೇಶಗಳಲ್ಲಿರುವ ಮರಾಠಿ ಮಾತನಾಡುವ ಪ್ರದೇಶವನ್ನು ಮಹಾರಾಷ್ಟ್ರ ಸರಕಾರ ಒಪ್ಪದೆ ಕರ್ನಾಟಕದಲ್ಲಿರುವ ಮರಾಠಿ ಜನರ ಹಳ್ಳಿಗಳು ಮಹಾರಾಷ್ಟ್ರಕ್ಕೆ ಸೇರಬೇಕೆಂದು ಕಳೆದ ೬೦ ವರ್ಷಗಳಿಂದ ಗಡಿ ಸಮಸ್ಯೆಯ ನಿಮಿತ್ತ ನಿರಂತರ ಹೋರಾಟ ನಡೆಸುತ್ತಿದ್ದಾರೆ. ಅವರ ಅಪೇಕ್ಷೆಯಂತೆ ೧೯೬೬ರಲ್ಲಿ ಭಾರತ ಸರಕಾರ ನ್ಯಾಯಮೂರ್ತಿ ಮಹಾಜನ್ ಅವರನ್ನು (ನಿವೃತ್ತ) ನ್ಯಾಯಮೂರ್ತಿ ಮಹಾಜನ್ ಏಕಸದಸ್ಯ ಆಯೋಗ ವನ್ನು ರಚಿಸಿದರು. ಕರ್ನಾಟಕ ಮಹಾಜನ್ ಆಯೋಗದ ವರದಿಯನ್ನು ಸಂಪೂರ್ಣವಾಗಿ ಒಪ್ಪದಿದ್ದರೂ ಬಹು ಮಟ್ಟಿಗೆ ಸಮ್ಮತಿಸಿತು. ಆದರೆ ಮಹಾರಾಷ್ಟ್ರ ಸಮ್ಮತಿಸಲಿಲ್ಲ.

ಇದನ್ನೆಲ್ಲ ಗಮನಿಸಿದಾಗ ಆಂಧ್ರ, ಕರ್ನಾಟಕ ರಾಜ್ಯಗಳಲ್ಲಿ ಬಳ್ಳಾರಿ ಗಡಿ ವಿವಾದದ ಬಗ್ಗೆ ಅಂದಿನ ಆಂಧ್ರ ಮತ್ತು ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಸ್. ನಿಜಲಿಂಗಪ್ಪ ಮತ್ತು ಶ್ರೀ ನೀಲಂ ಸಂಜೀವರೆಡ್ಡಿ ಹೇಗೆ ಆ ಸಮಸ್ಯೆಯನ್ನು ಪರಿಹರಿಸಿದರು ಎಂಬುದನ್ನು ಮಾದರಿಯನ್ನಾಗಿಟ್ಟುಕೊಳ್ಳಬೇಕು.

ಮಹಾರಾಷ್ಟ್ರದ ಗಡಿವಿವಾದದಲ್ಲಿ ನಾವು ಒಂದು ಸೌಹಾರ್ದ ವಾತಾವರಣವನ್ನು ಉಂಟುಮಾಡುವ ಪ್ರಯತ್ನವನ್ನು ಮಾಡಬೇಕು. ಮಹಾರಾಷ್ಟ್ರದ ಕರ್ನಾಟಕವನ್ನು ಪ್ರೀತಿಸುವ ಮರಾಠಿಗರಿದ್ದಾರೆ. ಕರ್ನಾಟಕದಲ್ಲಿರುವ ಮರಾಠಿಗರೂ ಕನ್ನಡಿಗರನ್ನು ಪ್ರೀತಿಸುತ್ತಾರೆ. ಕನ್ನಡವನ್ನು ಗೌರವಿಸುತ್ತಾರೆ. ೨೦೧೩ರಲ್ಲಿ ವಿಜಯಪುರದಲ್ಲಿ ಜರುಗಿದ ೭೯ನೇ ಸಾಹಿತ್ಯ ಸಮ್ಮೇಳನದ ಕಾಲಕ್ಕೆ ಅಲ್ಲಿರುವ ಮರಾಠಿಗರು ಬೇರೆ ಕಡೆಗಳಿಂದ ಬರುವ ಕನ್ನಡಿಗರಿಗೆ ತಮ್ಮ ಮನೆಗಳಲ್ಲಿ ವಸತಿ ಏರ್ಪಾಟು ಮಾಡಿದರು. ಹಾಗೆಯೇ ಮಹಾರಾಷ್ಟ್ರದಲ್ಲಿರುವ ಮರಾಠಿ ಜನರು ಕನ್ನಡವನ್ನು ಕನ್ನಡಿಗರನ್ನು ಪ್ರೀತಿಸುತ್ತಾರೆ, ಗೌರವಿಸುತ್ತಾರೆ. ಮಹಾರಾಷ್ಟ್ರ ಸರಕಾರದಲ್ಲಿ ಕೊಲ್ಲಾಪುರದ ಶ್ರೀ ರತ್ನಪ್ಪ ಕುಬಾರ ಶ್ರೀಮತಿ ಪಾರ್ವತೀ ದೇವಿ ಮಂತ್ರಿಗಳಾಗಿದ್ದರು. ಆದ್ದರಿಂದ ಕರ್ನಾಟಕ ಮಹಾರಾಷ್ಟ್ರದ ಸೌಹಾರ್ದಯುತ ಸ್ನೇಹ–ಸಂಬಂಧಗಳಿಗೆ ಸ್ಪಂದಿಸುವ ಜನರು, ಜನಪ್ರತಿನಿಧಿಗಳು, ಸಾಹಿತ್ಯ ಕಲಾವಿದರು, ಇದ್ದಾರೆ. ಆಂಧ್ರದವರೆಲ್ಲ ಸೌಹಾರ್ದ ವಾತಾವರಣ ವನ್ನುಂಟುಮಾಡಲು ಈ ಗಡಿ ಸಮಸ್ಯೆಯನ್ನು ಸೌಹಾರ್ದಯುತವಾಗಿ ಬಗೆಹರಿಸಬಹುದು. ಈ ಅಭಿಪ್ರಾಯಕ್ಕೆ ಯಶಸ್ಸು ದೊರಕೀತೇ ಎಂಬ ಸಂದೇಹ ಉಂಟಾಗಬಹುದು. ಈ ಪ್ರಯತ್ನವನ್ನು ಕರ್ನಾಟಕ ಸರ್ಕಾರ ಮಾಡಿದರೆ, ಹಿಂದಿನ ಅನುಭವದಿಂದ, ಇದು ಸಾಧ್ಯವಾಗಲಾರದು ಎಂಬ ಸಂದೇಹ ಇದ್ದರೂ ಆ ಕುರಿತು ಪ್ರಯತ್ನ ಮಾಡುವುದರಲ್ಲಿ ನಷ್ಟವಿಲ್ಲ. ಈ ದಿಸೆಯಲ್ಲಿ ಕರ್ನಾಟಕವೇ ಸ್ನೇಹ ಹಸ್ತವನ್ನು ನೀಡುವುದು ಸೂಕ್ತವೆಂದು ಕಾಣುತ್ತದೆ. ಅದನ್ನು ಬಿಟ್ಟು ನಮ್ಮ ಮುಖಕ್ಕೆ ಅವರು, ಅವರ ಮುಖಕ್ಕೆ ನಾವು ಮಸಿ ಬಳಿಯುವುದರಿಂದ ಈ ಸಮಸ್ಯೆಯನ್ನು ಬಗೆಹರಿಸಲಾಗದು. ಯಾವ ಮಾರ್ಗ ಸೂಕ್ತ ಎಂಬುದನ್ನು ಅವರು ನಾವೂ ಕೂಡಿಯೇ ಯೋಚಿಸಬೇಕು.

*ಬೆಂಗಳೂರು* **ಕೋ. ಚೆನ್ನಬಸಪ್ಪ**

---

*( ಈ ತಿಂಗಳು : ೮ನೇ ಪುಟದಿಂದ )*

ನೀಡುತ್ತಿದ್ದಾನೆ. ಈವರೆಗೆ ಹೊಸ ವಿಚಾರವೇನೂ ಹೊರಬಂದಿಲ್ಲ. ಈತನನ್ನು ಎಷ್ಟು ಮಟ್ಟಿಗೆ ನಂಬುವುದಕ್ಕೆ ಸಾಧ್ಯ ? ಸಾಮಾನ್ಯವಾಗಿ ಭಾಜಪ ಪರವಾಗಿರುವ ಶೇಖರ ಗುಪ್ತ ಎಂಬ ಅಂಕಣಕಾರ ಹೇಳುವ ಪ್ರಕಾರ ಹೆಡ್ಲಿ ೨೦೧೦ರಲ್ಲಿ ನೀಡಿದ್ದ ಹೇಳಿಕೆಯನ್ನೇ ಪುನರುಚ್ಚರಿಸುತ್ತಿದ್ದಾನೆ. "ಆತನ ಹೇಳಿಕೆಗಳಿಗೆ ಏನೂ ಅರ್ಥವಿಲ್ಲ. ಅವನೊಬ್ಬ ಅಪರಾಧಿ, ಅಮೆರಿಕದಲ್ಲಿ ಪ್ರತಿವಾದಿಗಳ ಶಿಕ್ಷೆ ಕಡಿತಗೊಳಿಸುವ ಮಾಫಿ ಸಾಕ್ಷಿಯ ಅವಕಾಶ ಬಳಸಿಕೊಂಡು ಜೀವ ಉಳಿಸಿಕೊಂಡವನು. ಭಾರತದಲ್ಲೂ ಆತ ಟಾಡಾ ನ್ಯಾಯಾಲಯದ ಕ್ಷಮೆ ಪಡೆದವ. ಇಂತಹ ಹೇಳಿಕೆಗಳು ತನಗೆ ನೀಡಿದ ಕ್ಷಮೆಗೆ ಪ್ರತಿಯಾಗಿ ಎನ್.ಡಿ.ಎ. ಋಣ ತೀರಿಸಲು ಆತ ಅಳವಡಿಸಿಕೊಂಡ ಒಂದು ಕ್ರಮ ಅಷ್ಟೆ." ಎಂದು ಶೇಖರ ಗುಪ್ತ ಅಭಿಪ್ರಾಯ ಪಟ್ಟಿದ್ದಾರೆ. (ಪ್ರ.ವಾ. ಫೆ. ೧೪)

* * *

'ಕರಿಯರ ಜೀವಕ್ಕೂ ಬೆಲೆ ಇದೆ.' ಇದು ಅಮೆರಿಕದಲ್ಲಿ ಆಫ್ರಿಕನ್ನರು ಎಂದು ಕರೆಸಿಕೊಳ್ಳುತ್ತಿರುವ ಕಪ್ಪುಜನರು ನಡೆಸುತ್ತಿರುವ ಚಳವಳಿಯ ಘೋಷ ವಾಕ್ಯ. ಕಳೆದೆರಡು ವರ್ಷಗಳಲ್ಲಿ ಅಮೆರಿಕದಲ್ಲಿ ಆಫ್ರಿಕನ್–ಅಮೆರಿಕನ್ನರ ಮೇಲೆ ದಾಳಿಗಳು ಹೆಚ್ಚಾಗತೊಡಗಿವೆ. ಮುಖ್ಯವಾಗಿ, ಕಾನೂನು ಪರಿಪಾಲನೆ ಮಾಡಬೇಕಾಗಿರುವ ಪೊಲೀಸರೇ ಹಲವು ಪ್ರಕರಣಗಳಲ್ಲಿ ವರ್ಣದ್ವೇಷಗಳಾಗಿ ವರ್ತಿಸಿದ್ದಾರೆ. 'ಫೇಕ್ ಎನ್‌ಕೌಂಟರ್' (ನಕಲಿ ಗೋಳೀಬಾರು) ನಮಗೆ ಪರಿಚಯವಿದೆ. ಪೊಲೀಸರು ಉದ್ದೇಶಪೂರ್ವಕವಾಗಿ ನಡೆಸುವ ಹತ್ಯೆ ಇದು. ಇಂಥ ಹತ್ಯೆಗಳು ನಮ್ಮ ದೇಶಕ್ಕಷ್ಟೇ ಸೀಮಿತವಾಗಿಲ್ಲ. ಅಮೆರಿಕದಲ್ಲೂ ನಡೆಯುತ್ತಿರುತ್ತವೆ. ಅದರಲ್ಲೂ ಅಮೆರಿಕ ಮುಂದೆ ಇದೆ. ಹೆಚ್ಚಾಗಿ ಇದಕ್ಕೆ ಬಲಿಯಾಗುವವರು ಕರಿಯ ಜನಾಂಗದವರೆ. ೨೦೧೫ನೇ ವರ್ಷ ಒಂದರಲ್ಲೇ ೧೨೦೦ ಜನ ಪೊಲೀಸರಿಂದ ಹತ್ಯೆಗೊಳಗಾಗಿದ್ದಾರೆ. ಇವರಲ್ಲಿ ಕರಿಯರೇ ಹೆಚ್ಚು ಮಂದಿ. ಇದರ ಮೇಲೆ ಅಮೆರಿಕದಲ್ಲಿ ಅನಿರ್ಬಂಧವಾಗಿ ಬಂದೂಕು ಪಡೆದುಕೊಳ್ಳಲು ಅವಕಾಶ ಇರುವುದರಿಂದ ಹಿಂಸಾಚಾರ ಪ್ರಕರಣಗಳು ಅಧಿಕವಾಗಿವೆ. ಅಮೆರಿಕದಲ್ಲಿ ವಯಸ್ಕನಾದ ಯಾವ ನಾಗರಿಕನಾದರೂ ಸುಲಭವಾಗಿ ಬಂದೂಕು ಕೊಳ್ಳಬಹುದು. ಅದನ್ನು ನಿಯಂತ್ರಿಸಲು ಹಲವು ಅಧ್ಯಕ್ಷರುಗಳು ಪ್ರಯತ್ನಪಟ್ಟರೂ ಸಫಲರಾಗಿಲ್ಲ. ತೀವ್ರವಾಗಿ ಪ್ರಯತ್ನಿಸಿದವರು ಅಧ್ಯಕ್ಷ ಬರಾಕ್ ಒಬಾಮಾ. ಅವರಿಗೂ ಕೂಡ ಏನೇ ಸಾಹಸ ಮಾಡಿದರೂ ಪ್ರಬಲವಾದ 'ಗನ್ ಲಾಬಿ'ಯನ್ನು ಮಣಿಸಲಾಗಲಿಲ್ಲ. ಹಾಗಾಗಿ ಬಂದೂಕು ದಾಳಿಗಳಲ್ಲಿ ಅಮಾಯಕರು ಬಲಿಯಾಗುವುದು ಹೆಚ್ಚಾಗುತ್ತಿದೆ. ಪ್ರಮುಖವಾಗಿ ಶಾಲೆಗಳು, ವಿದ್ಯಾಸಂಸ್ಥೆಗಳಲ್ಲಿ ಆಗಾಗ ನಡೆಯುವ ಬಂದೂಕು ದಾಳಿಗಳು, ಸಂಭವಿಸುವ ಸಾವು ನೋವುಗಳು ಕಳವಳಕಾರಿ. ೨೦೧೫ ಒಂದು ವರ್ಷದಲ್ಲೇ ಅಮೆರಿಕದಲ್ಲಿ ೧೩,೦೦೦ ಜನ ಬಂದೂಕು ದಾಳಿಯ ಅನಾಹುತದಲ್ಲಿ ಮೃತಪಟ್ಟಿದ್ದಾರೆ. ಅಂದರೆ ಪ್ರತಿದಿನ ೩೬ ಜನ ಅದರಿಂದ ಹತರಾಗುತ್ತಾರೆ. ಇಷ್ಟಾದರೂ ದೇಶದಲ್ಲಿ ಬಂದೂಕು ಖರೀದಿಸಲು ನಿಯಂತ್ರಣ ವಿಧಿಸುವುದಕ್ಕೆ ವಿರೋಧ ಇರುವುದು ಅಚ್ಚರಿಯ ಸಂಗತಿ.

■

**ಡಾ॥ ಎಸ್. ಬಾಲಚಂದ್ರ ರಾವ್**



# ಆಧುನಿಕ ಗಣಿತದ ಹರಿಕಾರ ಜಾರ್ಜ್ ಬೂಲ್ – ದ್ವಿಶತಮಾನೋತ್ಸವ

ಹತ್ತೊಂಬತ್ತು–ಇಪ್ಪತ್ತನೇ ಶತಮಾನಗಳಲ್ಲಿ ವಿಕಾಸಗೊಂಡ 'ಆಧುನಿಕ' ಗಣಿತ ವಿಜ್ಞಾನದ ಹರಿಕಾರರಲ್ಲಿ ಒಬ್ಬ ಶ್ರೇಷ್ಠಮಟ್ಟದ ಗಣಿತಜ್ಞನೆಂದರೆ ಜಾರ್ಜ್ ಬೂಲ್ (೧೮೧೫–೧೮೬೪). ಅವನ ಹೆಸರಿನಿಂದಲೇ ಇಂದು ಬಹಳ ಪ್ರಚಲಿತವಿರುವ ಗಣಿತ–ತರ್ಕದ ಬುನಾದಿ, **'ಬೂಲಿಯನ್ ಆಲ್ಜಿಬ್ರ'**.

ಈತನು ಹುಟ್ಟಿ ಬಾಳಿದ ಕಾಲ, ಪ್ರದೇಶ ಹಾಗೂ ವರ್ಗ ಇವುಗಳ ಬಗ್ಗೆ ಒಂದು ಮಾತಿದೆ – 'ಜಾರ್ಜ್ ಬೂಲ್ ಹುಟ್ಟಿದ್ದು ಒಂದು ಪ್ರತಿಕೂಲವಾದ ಕಾಲದಲ್ಲಿ, ಪ್ರತಿಕೂಲವಾದ ಪ್ರದೇಶದಲ್ಲಿ ಮತ್ತು ನಿಶ್ಚಿತವಾಗಿಯೂ ಪ್ರತಿಕೂಲವಾದ ಆರ್ಥಿಕ ವರ್ಗದಲ್ಲಿ!' ಆತನು ಒಬ್ಬ ಗಣಿತದ ಮಹಾಪ್ರತಿಭೆಯಾಗಿ ಬೆಳೆಯುವದಂತೂ ಊಹಿಸಲಾಗದ್ದು, But he did it – ಜಾರ್ಜ್ ಈ ಎಲ್ಲಾ ಪ್ರತಿಕೂಲಗಳನ್ನೂ ಮೆಟ್ಟಿ ತನ್ನ ವಿಶೇಷ ಪ್ರತಿಭೆಯನ್ನು ಬೆಳೆಸಿಕೊಂಡು ವಿಶ್ವಕ್ಕೆ ಅದರ ಪ್ರತಿಫಲವನ್ನು ಸಮರ್ಪಿಸಿದನು. ಇಂತಹುದೇ ವಿಶೇಷವಾದ ಪ್ರತಿಭಾ ಪ್ರಭಾವವನ್ನು ವಿಶ್ವವಿಖ್ಯಾತ ಗಣಿತಜ್ಞರಾದ ಶ್ರೀನಿವಾಸ ರಾಮಾನುಜನ್ (೧೮೮೭–೧೯೨೦), ನೀಲ್ಸ್ ಅಬೆಲ್ (೧೮೦೨–೧೮೨೯), ಎವರೆಸ್ಟ್ ಗ್ಯಾಲ್ವಾ (೧೮೧೧–೧೮೩೨) ಮುಂತಾದವರಲ್ಲೂ ಕಾಣುತ್ತೇವೆ.

ಜಾರ್ಜ್ ಹುಟ್ಟಿದ್ದು ೧೮೧೫ರಲ್ಲಿ ಇಂಗ್ಲೆಂಡಿನ ಒಂದು ಕೈಗಾರಿಕಾ ಸ್ಥಳವಾದ ಲಿಂಕನ್‌ನಲ್ಲಿ. ಈತನಿಗೆ ಗಣಿತದ ಕಲಿಕೆಯಲ್ಲಿ ಮೊದಲನೇ ಸ್ಫೂರ್ತಿ ಅವನ ತಂದೆಯೇ. ಎಂಟನೇ ವಯಸ್ಸಿಗಾಗಲೇ ಜಾರ್ಜ್ ತನ್ನ ತಂದೆ (ಜಾನ್ ಬೂಲ್) ಹೇಳಿಕೊಟ್ಟ ಗಣಿತದ ಮಿತಿಯನ್ನು ಬಹಳಮಟ್ಟಿಗೆ ದಾಟಿ 'ಇನ್ನೂ ಬೇಕು, ಇನ್ನೂ ಬೇಕು' ಎನ್ನುವ ತೀವ್ರವಾದ ಜ್ಞಾನತೃಷೆಯನ್ನು ಹೊಂದಿದ್ದ. ಕುಟುಂಬದ ಒಬ್ಬ ಸ್ನೇಹಿತನ ಆಸಕ್ತಿಯಿಂದಾಗಿ ಬಾಲಕ ಜಾರ್ಜ್ ಲ್ಯಾಟಿನ್ ಭಾಷೆಯನ್ನು ಕಲಿತು ತನ್ನ ೧೨ನೇ ವಯಸ್ಸಿನಲ್ಲೇ ಲ್ಯಾಟಿನ್ ಕವಿತೆಗಳನ್ನು ಇಂಗ್ಲಿಷ್‌ಗೆ ಅನುವಾದ ಮಾಡುವ ಸಾಮರ್ಥ್ಯವನ್ನು ಪಡೆದ. ತನ್ನ ಹದಿಹರೆಯದಲ್ಲೇ ತನ್ನ ಮಾತೃಭಾಷೆಯಲ್ಲದ ಫ್ರೆಂಚ್, ಜರ್ಮನ್ ಮತ್ತು ಇಟಾಲಿಯನ್ ಭಾಷೆಗಳಲ್ಲಿ ಪರಿಣತಿಯನ್ನು ಪಡೆದುಕೊಂಡ.

ಜಾರ್ಜ್‌ನ ಶೈಕ್ಷಣಿಕ ಮತ್ತು ಔದ್ಯೋಗಿಕ ಬೆಳವಣಿಗೆ ಎಷ್ಟು ತೀವ್ರಗತಿಯನ್ನು ಹೊಂದಿತ್ತೆಂದರೆ ತನ್ನ ೧೬ನೇ ವಯಸ್ಸಿನಲ್ಲೇ ಆತ ಒಬ್ಬ ಸಹಾಯಕ ಶಿಕ್ಷಕನಾಗಿ ತನ್ನ ಹುದ್ದೆಯನ್ನು ಆರಂಭಿಸಿ, ೨೦ನೇ ವಯಸ್ಸಿಗಾಗಲೇ ತನ್ನದೇ ಆದ ಶಾಲೆಯನ್ನೂ ಸ್ಥಾಪಿಸಿಬಿಟ್ಟ, ಅನಂತರದ ಕೆಲವು ವರ್ಷಗಳ ಕಾಲ ಜಾರ್ಜ್ ಅವನಿಗಿಂತ ಸುಮಾರು ಎರಡು ಶತಮಾನಗಳ ಹಿಂದಿನಿಂದ ಗಣಿತ ಮತ್ತು ಭೌತವಿಜ್ಞಾನ ಕ್ಷೇತ್ರಗಳನ್ನು ಬೆಳಸಿದ ಮತ್ತು ಬೆಳಗಿಸಿದ ನ್ಯೂಟನ್‌ನ (೧೬೪೨–೧೭೨೭) **'ಪ್ರಿನ್ಸಿಪಿಯಾ ಮ್ಯಾಥಮ್ಯಾಟಿಕಾ'** ಹಾಗೂ ಪ್ರಖ್ಯಾತ ಫ್ರೆಂಚ್ ವಿಜ್ಞಾನಿಗಳಾದ ಲಾಪ್ಲಾಸ್ (೧೭೪೯–೧೮೨೭) ಮತ್ತು ಲಾಗ್ರಾಂಜ್ (೧೭೩೬–೧೮೧೩) ಮುಂತಾದವರ ಕೊಡುಗೆಗಳನ್ನು ಅಧ್ಯಯನ ಮಾಡಿದ. ಅಷ್ಟೇ ಅಲ್ಲದೆ, ಅವನ ಸಮಕಾಲೀನ ಗಣಿತಜ್ಞರ ಕೃತಿಗಳನ್ನೂ ಕರಗತ ಮಾಡಿಕೊಂಡ.

ಇಷ್ಟೆಲ್ಲ ಆಳವಾದ ಮತ್ತು ವಿಸ್ತೃತವಾದ ಗಣಿತಜ್ಞಾನದ ಬುನಾದಿಯ ಮೇಲೆ ತನ್ನದೇ ಆದ ಗಣಿತಸೌಧವನ್ನೇ ಕಟ್ಟುವ ಯೋಜನೆಯ ಗಾಢವಾದ ಚಿಂತನೆ. ತನ್ನ ೨೪ನೇ ವಯಸ್ಸಿನಲ್ಲೇ ಜಾರ್ಜ್ ತನ್ನ ಮೊಟ್ಟಮೊದಲನೇ ಸಂಶೋಧನ ಲೇಖನವನ್ನು 'ಕೇಂಬ್ರಿಜ್ ಮ್ಯಾಥಮ್ಯಾಟಿಕಲ್ ಜರ್ನಲ್' ಎಂಬ ಪ್ರತಿಷ್ಠಿತ ಸಂಶೋಧನ ನಿಯತಕಾಲಿಕದಲ್ಲಿ ಪ್ರಕಟಿಸಿದ.

ಮುಂದಿನ ಒಂದು ದಶಕ ವರ್ಷಗಳ ಕಾಲ ಸಮಕಾಲೀನ ಗಣಿತದ ಕ್ಷಿತಿಜವನ್ನು ಹಿಗ್ಗಿಸುವಂತಹ ಅನೇಕ ಸ್ವೋಪಜ್ಞ ಆವಿಷ್ಕಾರಗಳನ್ನು ರೂಪುಗೊಳಿಸಿದನು. ಸುಮಾರು ೩೦ನೇ ವಯಸ್ಸಿನಲ್ಲಿ ಜಾರ್ಜ್ ತನ್ನ ಸಮಕಾಲೀನ ಬೀಜಗಣಿತದ ಮತ್ತು ಕಲನಶಾಸ್ತ್ರಗಳ (Calculus) ಜೋಡಣೆಯಿಂದ ಕನಿಷ್ಠ ಮತ್ತು ಗರಿಷ್ಠ ಬೆಲೆಯ ('ಅಣೋರಣೀಯಾನ್ ಮಹತೋ ಮಹೀಯಾನ್') ಚರಾಂಕಗಳ (Variables) ಅಧ್ಯಯನವನ್ನು ನಡೆಸುತ್ತಿದ್ದ. ಆತನಿಗೆ 'ಗಣಿತ ವಿಶ್ಲೇಷಣ' ವಿಭಾಗದ ಕೊಡುಗೆಗಾಗಿ ಪ್ರಖ್ಯಾತವಾದ ಎಡಿನ್ಬರೋದ 'ರಾಯಲ್ ಸೊಸೈಟಿ'ಯ ಕೀತ್ ಚಿನ್ನದ ಪದಕವನ್ನು ನೀಡಿ ಸನ್ಮಾನಿಸಲಾಯಿತು. ಮುಂದೆ ೧೮೫೫ರಲ್ಲಿ ರಾಯಲ್ ಸೊಸೈಟಿಯ 'ಫೆಲೊ' (FRS) ಆಗಿ ಚುನಾಯಿಸಲಾಯಿತು. ಜಾರ್ಜ್ ತನ್ನ ಬೀಜಗಣಿತದ ಆವಿಷ್ಕಾರಗಳನ್ನು ತರ್ಕಶಾಸ್ತ್ರಕ್ಕೆ ಅನ್ವಯಿಸುವ ಸಾಧ್ಯತೆಗಳ ಬಗ್ಗೆ ಕಾರ್ಯನಿರತನಾದ. 'ತರ್ಕದ ಗಣಿತ–ವಿಶ್ಲೇಷಣೆ' ಎಂಬ ೧೮೪೭ರಲ್ಲಿ ಪ್ರಕಟಗೊಂಡ ಜಾರ್ಜ್‌ನ ಕೃತಿ ಈ ಹಿಂದೆ ಪ್ರಖ್ಯಾತ ಜರ್ಮನ್ ಗಣಿತಜ್ಞ ಮತ್ತು ತತ್ತ್ವಜ್ಞಾನಿ ಲೈಬ್ನಿಜ್ (೧೬೪೬–೧೭೧೬) ಮನಗಂಡ ತರ್ಕ ಮತ್ತು ಗಣಿತಗಳ ಪರಸ್ಪರ ಸಂಬಂಧವನ್ನು ದೃಢಪಡಿಸಿತು. ಅಷ್ಟೇ ಅಲ್ಲದೆ, ತರ್ಕವು ಮುಖ್ಯವಾಗಿ ಗಣಿತವಿಜ್ಞಾನದ ಒಂದು ಶಾಖೆಯೇ ಹೊರತು ತತ್ತ್ವಶಾಸ್ತ್ರದ ಭಾಗವಲ್ಲ ಎಂದು ಸ್ಪಷ್ಟಪಡಿಸಿತು.

ಜಾರ್ಜ್ ಬೂಲ್‌ನ ಗಣಿತ–ತರ್ಕದ ವಿಶಿಷ್ಟವಾದ ಆವಿಷ್ಕಾರ ಗಳಿಗಾಗಿ ಡಬ್ಲಿನ್ ಮತ್ತು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯಗಳಿಂದ ಎಲ್.ಎಲ್.ಡಿ. (ಡಾಕ್ಟರ್ ಆಫ್ ಲಾಸ್) ಎಂಬ ಗೌರವ ಡಾಕ್ಟರೇಟ್ ನೀಡಲಾಯಿತು.

**ಗಣಿತಶಾಸ್ತ್ರದ ಪ್ರಾಧ್ಯಾಪಕ**

ಜಾರ್ಜ್‌ನ ಈ ಪ್ರಮುಖವಾದ ಸಂಶೋಧನ ಲೇಖನವು ಪ್ರತಿಷ್ಠಿತ ತರ್ಕಜ್ಞ ಆಗಸ್ಟಸ್ ಡಿ–ಮಾರ್ಗನ್‌ನ ಮೆಚ್ಚುಗೆಯನ್ನು ಗಳಿಸಿಕೊಟ್ಟಿದ್ದು ಮಾತ್ರವಲ್ಲದೆ ೧೮೪೯ರಲ್ಲಿ ಐರ್ಲ್ಯಾಂಡ್‌ನ ಕಾರ್ಕ್‌ಪಟ್ಟಣದ ಕ್ವೀನ್ಸ್ ಕಾಲೇಜ್‌ನಲ್ಲಿ ಪ್ರಾಧ್ಯಾಪಕ ಸ್ಥಾನವನ್ನೂ ಗಿಟ್ಟಿಸಿತು.

ಹಿಂದಿನಂತೆ ಈಗ ಶಾಲೆಯನ್ನು ನಡೆಸುವ ಜವಾಬ್ದಾರಿಯಿಂದ

**ಬೂಲಿಯನ್ ಆಲ್ಜಿಬ್ರ ಎಂದರೇನು ?**

ಸಾಮಾನ್ಯ ಬೀಜಗಣಿತದಲ್ಲಿ ಚರಾಂಕಗಳು ಹಾಗೂ ಅವುಗಳನ್ನೊಳಗೊಂಡ ಬೀಜಗಣಿತೋಕ್ತಿಗಳು ಸಂಖ್ಯೆಗಳನ್ನು ಸೂಚಿಸುತ್ತವೆ. ಆದರೆ ಈ ವಿಶಿಷ್ಟವಾದ 'ಬೂಲಿಯನ್ ಬೀಜಗಣಿತ'ದಲ್ಲಿ ಚರಾಂಕಗಳು 'ನಿಜ' ಮತ್ತು 'ಸುಳ್ಳು' ಎಂಬುವುಗಳನ್ನು ಮಾತ್ರ ಸೂಚಿಸುತ್ತಿದ್ದು, ಅವುಗಳನ್ನು ಕ್ರಮವಾಗಿ ೧ (ಒಂದು) ಮತ್ತು ೦ (ಸೊನ್ನೆ) ಎಂಬ ಚಿಹ್ನೆಗಳು ಪ್ರತಿನಿಧಿಸುತ್ತವೆ. ಆಗ, ೦ ಮತ್ತು ೧ ಬೆಲೆಗಳ ಸಂಕಲನ ಮತ್ತು ವ್ಯವಕಲನ ಸಾಮಾನ್ಯ ಬೀಜಗಣಿತದ ನಿಯಮಗಳಿಗಿಂತ ಸ್ವಲ್ಪ ಬೇರೆಯಾಗಿರುತ್ತವೆ. ಉದಾಹರಣೆಗೆ, ೧+೧=೨ ಆಗಿರದೆ, ಬೂಲಿಯನ್ ಆಲ್ಜಿಬ್ರದಲ್ಲಿ ೧+೧=೦. ಇಲ್ಲಿ ೦ ಮತ್ತು ೧ ಇವೆರಡೇ ಸಂಖ್ಯೆಗಳ 'ದ್ವಿಮಾನ' ಪದ್ಧತಿಯು ಬಳಕೆಯಲ್ಲಿದೆ.

ಅಷ್ಟೇ ಅಲ್ಲದೆ, ಸಾಮಾನ್ಯ ಬೀಜಗಣಿತದ ಪ್ರಾಥಮಿಕ ಪರಿಕರ್ಮಗಳಾದ 'ಸಂಕಲನ' ಮತ್ತು 'ವ್ಯವಕಲನ'ಗಳ ಬದಲಿಗೆ 'ಮತ್ತು', 'ಅಥವಾ', ಮತ್ತು 'ಇಲ್ಲ' 'ಸಂಯೋಜಕ'ಗಳನ್ನು ಬಳಸುತ್ತೇವೆ. $x$ ಮತ್ತು $y$ ಎರಡು ಬೀಜೋಕ್ತಿಗಳಾಗಿದ್ದರೆ ಈ ಮೂರು ಸಂಯೋಜಕಗಳಿಗೆ ಚಿಹ್ನೆಗಳು ಕ್ರಮವಾಗಿ ಹೀಗಿವೆ :

(i) $x$ ಮತ್ತು $y$ : $x \wedge y$ (ಸಂಯುಕ್ತಿ, conjunction)

(ii) $x$ ಅಥವಾ $y$ : $x \vee y$ (ವಿಯುಕ್ತಿ, disjunction)

(iii) $x$ ಅಲ್ಲ : $\sim x$ (ನಕಾರ, negation)

ಈ ಚಿಹ್ನೆಗಳ ಮೂಲಕ ಸಂಯೋಜಕಗಳ ನಿಯಮಗಳನ್ನು ಹೀಗೆ ಹೇಳಬಹುದು :–

(೧) $x=1$, $y=1$ ಆಗಿದ್ದರೆ, ಅಂದರೆ $x$ ಮತ್ತು $y$ ಎರಡು ಬೀಜೋಕ್ತಿಗಳು ನಿಜ ಆಗಿದ್ದರೆ, ಅವುಗಳ 'ಸಂಯುಕ್ತಿ' $x \wedge y=1$, ನಿಜ ಆಗಿರುತ್ತದೆ.

(೨) $x$ ಮತ್ತು $y$ ಗಳಲ್ಲಿ ಒಂದು ಅಥವಾ ಎರಡು ಸುಳ್ಳು ಆಗಿದ್ದರೆ, $x \wedge y=0$, ಸುಳ್ಳು ಆಗಿರುತ್ತದೆ.

(೩) $x=0$, $y=0$, ಅಂದರೆ $x$ ಮತ್ತು $y$ ಎರಡು ಸುಳ್ಳು ಆಗಿದ್ದರೆ, $x \vee y=0$ ಸುಳ್ಳು; ಮತ್ತು

(೪) $x$ ಮತ್ತು $y$ ಗಳಲ್ಲಿ ಯಾವುದೇ ಒಂದು ಅಥವಾ ಎರಡೂ ನಿಜ ಆಗಿದ್ದರೆ, $x \vee y=1$, ನಿಜ.

(೫) $x$ ನಿಜ ಆಗಿದ್ದರೆ, $\sim x=0$, ಸುಳ್ಳು ಮತ್ತು $x$ ಸುಳ್ಳು ಆಗಿದ್ದರೆ, $\sim x=1$, ನಿಜ.

ಈ ಮೇಲಿನ ಫಲಿತಾಂಶಗಳನ್ನು ಕೋಷ್ಟಕದಲ್ಲಿ ತೋರಿಸಿದೆ.

| $x$ | $y$ | $x \wedge y$ ಸಂಯುಕ್ತಿ | $x \vee y$ ವಿಯುಕ್ತಿ | $\sim x$ ನಕಾರ |
|---|---|---|---|---|
| 0 | 0 | 0 | 0 | 1 |
| 1 | 0 | 0 | 1 | 0 |
| 0 | 1 | 0 | 1 | – |
| 1 | 1 | 1 | 1 | – |

ಈ ಮೇಲಿನ 'ಸಂಯೋಜನೆ'ಗಳನ್ನು ಆಧರಿಸಿ ಮುಂದಿನ 'ಬೂಲಿಯನ್ ಬೀಜಗಣಿತ'ದ ಫಲಿತಾಂಶಗಳನ್ನು ಪಡೆಯಲಾಗಿದೆ. ಇಂದಿನ ಕಂಪ್ಯೂಟರ್‌ನಲ್ಲಿ ಬಳಸಲಾದ ವಿದ್ಯುನ್ಮಾನ ಸರ್ಕ್ಯೂಟ್‌ಗಳು 0 ಮತ್ತು 1 ಎಂಬ 'ದ್ವಿಮಾನ' ಆಧರಿತ ಬೂಲಿಯನ್ ಬೀಜಗಣಿತವನ್ನೇ ಅವಲಂಬಿಸಿವೆ.

ಮುಕ್ತನಾಗಿದ್ದು ತನ್ನದೇ 'ಗಣಿತ ವಿಶ್ಲೇಷಣ' ಶಾಖೆಯ ಸಂಶೋಧನೆಯಲ್ಲಿ ಹೆಚ್ಚು ಹೆಚ್ಚು ಆಳವಾಗಿ ತೊಡಗಿಸಿಕೊಂಡ ಅವನ ವಿಶೇಷ ಆಸಕ್ತಿ ಮತ್ತು ಯೋಜನೆ ಇದ್ದಿದ್ದು ತರ್ಕಶಾಸ್ತ್ರದ ವಾದಗಳನ್ನು ಗಣಿತೀಯ ರೀತಿಯಲ್ಲಿ ಅಭಿವ್ಯಕ್ತಿಸುವ ಪರಿಕರ್ಮಗಳನ್ನು ಸಾಧಿಸುವುದು ! ಆಗ ತಾರ್ಕಿಕವಾಗಿ ಬರಬಹುದಾದ ನಿರ್ಧಾರಗಳನ್ನು ಗಣಿತದ ವಿಧಾನಗಳಿಂದಲೇ ಸುಲಭವಾಗಿ ಮತ್ತು ಸ್ಪಷ್ಟವಾಗಿ ಸಾಧಿಸಬಹುದು. ಪ್ರಾಧ್ಯಾಪಕನಾಗಿ ಸೇರಿಕೊಂಡ ಒಂದೇ ವರ್ಷದಲ್ಲಿ ತನ್ನ ಸಹೋದ್ಯೋಗಿಯಾದ ಗ್ರೀಕ್ ಭಾಷೆಯ ಪ್ರಾಧ್ಯಾಪಕರ ಮನೆಯಲ್ಲಿ ಮೇರಿ ಎವರೆಸ್ಟ್ ಎಂಬಾಕೆಯ ಪರಿಚಯವಾಗಿ, ಕೆಲವು ವರ್ಷಗಳ ನಂತರ ಆಕೆಯನ್ನು ವಿವಾಹವಾದರು.

ತರ್ಕವನ್ನು ಗಣಿತೀಯವಾಗಿ ಅಭಿವ್ಯಕ್ತಿಸುವ ಸಾಧನೆಯಲ್ಲಿ ಜಾರ್ಜ್ ಬೂಲ್ ಯಶಸ್ವಿಯೂ ಆದ! ಆತನ ವಿಶಿಷ್ಟವಾದ 'ಭಾಷಿಕ ಬೀಜಗಣಿತ'ದ ಪ್ರಾಥಮಿಕ ಆಧಾರ ಪರಿಕರ್ಮಗಳು ಎಂದರೆ 'ಮತ್ತು', 'ಅಥವಾ' ಹಾಗೂ 'ಇಲ್ಲ'. ಈ ಮೂರನ್ನೇ ಆಧಾರವಾಗಿರಿಸಿಕೊಂಡು ಆತನ ಪ್ರಖ್ಯಾತ 'ಬೂಲಿಯನ್ ಆಲ್ಜಿಬ್ರ' ಎಂಬ ಆಧುನಿಕ ಗಣಿತ ಶಾಖೆಯನ್ನು ಬೆಳೆಸಿದನು. ೧೮೫೪ರಲ್ಲಿ ಪ್ರಕಟಿಸಿದ ಆತನ ಪದ್ಧತಿಯು 'ದ್ವಿಮಾನ' ಚಿಂತನ ಪದ್ಧತಿಯಾಗಿದ್ದು ತಾರ್ಕಿಕ ನಿರ್ಧಾರಗಳಿಗೆ ಮೂರು ಮುಖ್ಯವಾದ ಆಧಾರವೆಂದರೆ, 'ಹೌದು–ಇಲ್ಲ', 'ನಿಜ–ಸುಳ್ಳು', 'ಆನ್–ಆಫ್' ಮತ್ತು 'ಒಂದು–ಸೊನ್ನೆ' ಎಂಬ ದ್ವಿಮಾನ ವಿಧಾನ.

ವಿಪರ್ಯಾಸವೆಂದರೆ, ಜಾರ್ಜ್‌ಗೆ ಶೈಕ್ಷಣಿಕವಾಗಿ ಉಚ್ಚಸ್ಥಾನಗಳಿದ್ದರೂ, ಬೂಲ್‌ನ ಹೊಸ ಗಣಿತ–ತರ್ಕ ಚಿಂತನೆಗೆ ಸಮಕಾಲೀನರಿಂದ ಸಿಕ್ಕಿದ್ದು ಅವಹೇಳನ, ಇಲ್ಲವೇ ಉಪೇಕ್ಷೆ! ಪಾರಂಪರಿಕವಾಗಿ ಸವೆದಹಾದಿಗಿಂತ ವಿಭಿನ್ನವಾಗಿ ತಮ್ಮದೇ ಆದ ಆವಿಷ್ಕಾರಪೂರ್ಣವಾದ ಮಾರ್ಗವನ್ನು ಹುಡುಕುವವರಿಗೆ ಮತ್ತು ಸ್ಥಾಪಿಸುವವರಿಗೆ ಸಿಗುವ 'ಮನ್ನಣೆ' ಎಂದರೆ ಇದೇ! ಅದಕ್ಕೆ ಸ್ವಲ್ಪಮಟ್ಟಿಗೆ ಮಾನವಸಹಜವಾದ ಈರ್ಷ್ಯೆಯೂ ಕಾರಣ. ಇಂತಹ ಪ್ರತಿಕೂಲವಾದ ಚಿಂತನ ವಾತಾವರಣದಲ್ಲೂ ಜಾರ್ಜ್ ಬೂಲ್‌ನಿಗೆ ಮೆಚ್ಚಿಗೆಯನ್ನು ತೋರಿ ಪ್ರೋತ್ಸಾಹಿಸಿದವನು ಅಮೇರಿಕಾದ ತಾರ್ಕಿಕ ಚಾರ್ಲ್ಸ್ ಸ್ಯಾಂಡರ್ಸ್ ಪಿಯರ್ಸ್ ಎಂಬಾತ. ಜಾರ್ಜ್‌ನ ಹೊಸ ವಿಧಾನದ ಪ್ರಕಟಣೆಯ ಹನ್ನೆರಡು ವರ್ಷಗಳ ನಂತರ 'ಅಮೇರಿಕನ್ ಅಕಾಡೆಮಿ ಆಫ್ ಆರ್ಟ್ಸ್ ಅಂಡ್ ಸೈನ್ಸ್' ಉದ್ದೇಶಿಸಿ ಪಿಯರ್ಸ್‌ನು ಜಾರ್ಜ್ ಬೂಲ್‌ನ ಗಣಿತ–ತರ್ಕ ಪದ್ಧತಿಯನ್ನು ವಿವರಿಸಿದ. ಅಷ್ಟೇ ಅಲ್ಲದೆ, ಮುಂದೆ ಇಪ್ಪತ್ತು ವರ್ಷಗಳ ಕಾಲ ಆ ವಿಧಾನವನ್ನು ಸ್ವಲ್ಪಮಟ್ಟಿಗೆ ಬದಲಿಸಿ ಮತ್ತು ವಿಸ್ತರಿಸಿ 'ಎಲೆಕ್ಟ್ರಾನಿಕ್–ಸರ್ಕ್ಯೂಟ್'ಗಳಿಗೆ ಅನ್ವಯಿಸುವ ಸಾಧ್ಯತೆಗಳ ಬಗ್ಗೆ ತೀವ್ರವಾದ ಸಂಶೋಧನೆಯನ್ನು ಕೈಗೊಂಡ. ಚಾರ್ಲ್ಸ್ ಪಿಯರ್ಸ್ ಓರ್ವ ಸೈದ್ಧಾಂತಿಕ ತರ್ಕಜ್ಞನಾಗಿದ್ದನೇ ಹೊರತು ವಿದ್ಯುನ್ಮಾನ ತಂತ್ರದಲ್ಲಿ ಪರಿಣತನಾಗಿರಲಿಲ್ಲ. ಹೀಗಾಗಿ ಆತ ಪ್ರಾಯೋಗಿಕವಾಗಿ ವಿದ್ಯುನ್ಮಾನ ತರ್ಕ–ಸರ್ಕ್ಯೂಟ್‌ಗಳನ್ನು ರೂಪಿಸದಿದ್ದರೂ ವಿಶ್ವವಿದ್ಯಾಲಯದ ಮಟ್ಟದಲ್ಲಿ ತರ್ಕಶಾಸ್ತ್ರ ಮತ್ತು ತತ್ತ್ವಶಾಸ್ತ್ರಗಳ ಪಠ್ಯಕ್ರಮಗಳಲ್ಲಿ ಆ ವಿಷಯವನ್ನು ಅಳವಡಿಸಿಕೊಂಡು ಪ್ರಚಾರವನ್ನು ನೀಡಿದ. ಕಾಲಕ್ರಮೇಣ ಕ್ಲಾಡ್ ಶ್ಯಾನನ್ ಎಂಬಾತ ಜಾರ್ಜ್ ಬೂಲ್‌ನ ಸಿದ್ಧಾಂತದಿಂದ ಬಹಳ ಪ್ರಭಾವಿತನಾಗಿ ಆ ಕ್ಷೇತ್ರದಲ್ಲಿ ಬಹಳ ವಿಸ್ತಾರವಾದ ಅಧ್ಯಯನವನ್ನು ಕೈಗೊಂಡ.

ತನ್ನ 'ಇನ್ವೆಸ್ಟಿಗೇಶನ್' ಸಂಶೋಧನ ಲೇಖನದ ನಂತರ ಜಾರ್ಜ್ ಬೂಲ್ ಬಹಳಷ್ಟು ಲೇಖನಗಳನ್ನು ಪ್ರಕಟಿಸಿದ. ಅವುಗಳ ಪೈಕಿ ಬಹಳ ಪ್ರಭಾವಪೂರ್ಣವಾದ ಕೃತಿಗಳೆಂದರೆ 'ಟ್ರೀಟಿಸ್' ಆನ್ ಡಿಫ಼ರೆನ್ಷಿಯಲ್ ಇಕ್ವೇಷನ್ಸ್' (೧೮೫೯) ಮತ್ತು ಟ್ರೀಟಿಸ್ ಆನ್ ಕ್ಯಾಲ್ಕ್ಯುಲಸ್ ಆಫ್ ವೇರಿಯೇಶನ್ಸ್' (೧೮೬೦) ಎಂಬವು.

ಆತನ ಅಂತ್ಯ ೪೯ನೇ ವಯಸ್ಸಿನಲ್ಲೇ, ೧೮೬೪ ಡಿಸೆಂಬರ್ ೮ರಂದು ಕಾಣಿಸಿಕೊಂಡ ರೀತಿ ಒಂದು ದುರಂತವೇ ಸರಿ. ಜಾರ್ಜ್ ಬೂಲ್ ಜೋರಾಗಿ ಸುರಿಯುತ್ತಿದ್ದ ಮಳೆಯಲ್ಲೇ ನೆನೆದುಕೊಂಡೇ ಎರಡು ಮೈಲಿಗಳ ದೂರದಲ್ಲಿದ್ದ ತನ್ನ ತರಗತಿಗೆ ತೆರಳಿ ಒದ್ದೆಬಟ್ಟೆಯಲ್ಲೇ ಪಾಠ ಮಾಡಿ ಚಳಿಜ್ವರವನ್ನು ಮೈಮೇಲೆ ಎಳೆದುಕೊಂಡು ಅಸುನೀಗಿದ. ಪ್ರತಿಭೆಗೂ ಸಾಮಾನ್ಯಜ್ಞಾನಕ್ಕೂ ಸಖ್ಯ ಬಹಳ ಅಪರೂಪ ಎಂದು ಜಾರ್ಜ್ ಬೂಲ್ ತನ್ನ ಅಂತ್ಯದಲ್ಲೇ ಇನ್ನೊಮ್ಮೆ ಸಾಧಿಸಿ ತೋರಿಸಿದ !

ಬೂಲ್‌ನ 'ಗಣಿತ–ವಿಶ್ಲೇಷಣೆಗೆ' ಮತ್ತು 'ಚಿಂತನ–ನಿಯಮಗಳ ಪರೀಕ್ಷೆ' ಎಂಬ ಸಂಶೋಧನ ಲೇಖನಗಳ ಫಲಶ್ರುತಿಯೇ ಇಂದು ಪ್ರಸಿದ್ಧವಾಗಿರುವ 'ಬೂಲಿಯನ್ ಆಲ್ಜಿಬ್ರ' ಅಥವಾ 'ಬೂಲಿಯನ್ ಲಾಜಿಕ್'.

**ಡಾ॥ ಎಸ್. ಬಾಲಚಂದ್ರ ರಾವ್**
ಗೌರವ ನಿರ್ದೇಶಕರು, ಭಾರತೀಯ ವಿದ್ಯಾಭವನದ ಗಾಂಧೀ ಕೇಂದ್ರ
ನಂ. ೪೩/೧, ರೇಸ್ ಕೋರ್ಸ್ ರಸ್ತೆ, ಬೆಂಗಳೂರು – ೫೬೦ ೦೦೧

# ಸೂಕ್ಷ್ಮಜೀವಿಗಳ ಲೋಕದಲ್ಲಿ ಒಂದು ಪಯಣ

ಡಾ|| ರಾಮಲಿಂಗಪ್ಪ ಮತ್ತು
ವಿನಯ್ ಕುಮಾರ್ ಪಿ. ಜಿ.


ಆಂಟನಿವಾನ್ ಲೀವನ್ ಹೂಕ್‌ನ ಸೂಕ್ಷ್ಮದರ್ಶಕ


ಸಂಯುಕ್ತ ಸೂಕ್ಷ್ಮದರ್ಶಕ


ಎಲೆಕ್ಟ್ರಾನ್ ಸೂಕ್ಷ್ಮದರ್ಶಕ

ಮನುಷ್ಯ, ಇತರೆ ಪ್ರಾಣಿಗಳು ಹಾಗೂ ಸಸ್ಯಗಳು ಕಣ್ಣಿಗೆ ಕಾಣಿಸುವ ಜೀವಿಗಳು. ಬರಿಗಣ್ಣಿಗೆ ಕಾಣಿಸದ ಕೆಲವು ಜೀವಿಗಳಿವೆ, ಅವುಗಳನ್ನು ಕಾಣಲು ಸೂಕ್ಷ್ಮದರ್ಶಕವೇ ಬೇಕು, ಅಂತಹ ಜೀವಿಗಳನ್ನು ಸೂಕ್ಷ್ಮಜೀವಿಗಳೆನ್ನುತ್ತೇವೆ. ಈ ಜೀವಿಗಳು ಏಕಕೋಶ ಜೀವಿಗಳಾಗಿರಬಹುದು, ಇಲ್ಲವೇ ಬಹುಕೋಶ ಜೀವಿಗಳಾಗಿರಬಹುದು. ಎಂದರೆ, ಅನೇಕ ಕೋಶಗಳಿಂದ ಮಾಡಲ್ಪಟ್ಟ ಜೀವಿಗಳಾಗಿರಬಹುದು. ಈ ಜೀವಿಗಳ ಅಳತೆಯನ್ನು ಮೈಕ್ರೋಮೀಟರ್‌ಗಳಲ್ಲಿ ಮಾಡಲಾಗುತ್ತದೆ, ಒಂದು ಮೈಕ್ರೋಮೀಟರ್ ಎಂದರೆ ಒಂದು ಮಿಲಿಮೀಟರ್‌ನ ಸಾವಿರದ ಒಂದನೆಯ ಭಾಗ.

ಸೂಕ್ಷ್ಮಜೀವಿಗಳನ್ನು ಕೋಶಕೇಂದ್ರ (ಅನುವಂಶಿಕ ಅಂಶ+ ಕೋಶಪೊರೆ = ಕೋಶಕೇಂದ್ರ)ವಿಲ್ಲದ ಜೀವಿಗಳು ಹಾಗೂ ಕೋಶಕೇಂದ್ರವಿರುವ ಜೀವಿಗಳು ಎಂದು ವರ್ಗೀಕರಿಸಬಹುದು. ಕೋಶಕೇಂದ್ರವಿಲ್ಲದ ಸೂಕ್ಷ್ಮಜೀವಿಗಳಿಗೆ ಆರ್ಕಿ ಬ್ಯಾಕ್ಟೀರಿಯಾ, ಬ್ಯಾಕ್ಟೀರಿಯಾ (ದಂಡಾಣು ಹಾಗೂ ದುಂಡಾಣುಗಳು), ರಿಕೆಟ್ಸಿಯಾ ಹಾಗೂ ಹಸಿರು–ನೀಲಿ ಶೈವಲ (ಸೈಯನೋ ಬ್ಯಾಕ್ಟೀರಿಯಾ)ಗಳು ಉದಾಹರಣೆಯಾಗಿವೆ. ಈ ಜೀವಿಗಳಲ್ಲಿ ಅನುವಂಶಿಕ ಅಂಶದ ಸುತ್ತ ಕೋಶಕೇಂದ್ರದ ಪೊರೆ ಇರುವುದಿಲ್ಲ. ಶಿಲೀಂಧ್ರ, ಪಾಚಿ (ಆ್ಯಲ್ಗೇ), ಪ್ರೋಟೋಜೋವಾ ಹಾಗೂ ನೆಮಟೋಡುಗಳು ಕೋಶಕೇಂದ್ರವಿರುವ ಸೂಕ್ಷ್ಮಜೀವಿಗಳು. ಈ ಜೀವಿಗಳಲ್ಲಿ ಅನುವಂಶಿಕ ಅಂಶದ ಸುತ್ತ ಕೋಶಕೇಂದ್ರದ ಪೊರೆಯಿರುತ್ತದೆ. ಇವಲ್ಲದೆ ವೈರಸ್‌ಗಳು, ಪ್ರಯಾನುಗಳು ಹಾಗೂ ವೈರಾಯ್ಡ್‌ಗಳು ಸಹ ಸೂಕ್ಷ್ಮಜೀವಿಗಳ ಗುಂಪಿಗೆ ಸೇರುತ್ತವೆ. ಇವುಗಳನ್ನು ನೋಡಲು ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳೇ ಬೇಕು.

**ಸರ್ವಾಂತರ್ಯಾಮಿ ಸೂಕ್ಷ್ಮಜೀವಿಗಳು :** ಸೂಕ್ಷ್ಮಜೀವಿಗಳು ಸರ್ವಾಂತರ್ಯಾಮಿಯಾಗಿವೆ, ಅವುಗಳು ನೆಲ, ಜಲ, ವಾಯುವಿನಲ್ಲಿ, ಅಂಟಾರ್ಟಿಕ್‌ನಿಂದ ಸಹರಾ ಮರುಭೂಮಿಯವರೆಗೆ, ಸಾಗರದಾಳದಿಂದ ವಾಯು ಪದರದ ಕೊನೆಯವರೆಗೆ ಕಂಡುಬರುತ್ತವೆ.

**ಸೂಕ್ಷ್ಮಜೀವಿಗಳ ಸಂಶೋಧನೆ ಮತ್ತು ಇತಿಹಾಸ :** ಸೂಕ್ಷ್ಮಜೀವಿಗಳನ್ನು ಪ್ರತ್ಯಕ್ಷವಾಗಿ ಕಾಣುವ ಮೊದಲೇ ಕೆಲವು ಸಂಶೋಧಕರು ಅವುಗಳ ಇರುವಿಕೆ ರೋಗಕ್ಕೆ ಕಾರಣವಾಗಿದೆ ಎಂಬುದರ ಬಗ್ಗೆ ಅನುಮಾನ ವ್ಯಕ್ತಪಡಿಸಿದ್ದರು. ಅಂಥವರುಗಳಲ್ಲಿ ರೋಮ್‌ನ ತತ್ವಶಾಸ್ತ್ರಜ್ಞ ಲೂಕ್ರೆಟಿಯಸ್ (ಕ್ರಿಸ್ತಪೂರ್ವ ೯೮–೫೫) ಹಾಗೂ ವೈದ್ಯ ಗಿರೊಲ್ಯಾಮೋ ಫ್ರಕಾಸ್ಟ್ರೋ (೧೪೭೮–೧೫೫೩) ಪ್ರಮುಖರು. ೧೬೬೫ರಲ್ಲಿ ರಾಬರ್ಟ್ ಹೂಕ್‌ನ ಮೈಕ್ರೋಗ್ರಾಫಿಯಾ ಎಂಬ ಪುಸ್ತಕದಲ್ಲಿ ಮೊದಲ ಸೂಕ್ಷ್ಮಜೀವಿಯ ಚಿತ್ರ ಪ್ರಕಟವಾಯಿತು. ಆಂಟನಿವಾನ್ ಲೀವನ್ ಹೂಕ್ ಎಂಬ ಹವ್ಯಾಸಿ ಸೂಕ್ಷ್ಮದರ್ಶಕ ತಜ್ಞನು ಸೂಕ್ಷ್ಮಜೀವಿಗಳ ಬಗೆಗಿನ ಮೊದಲ ಮತ್ತು ವ್ಯಾಪಕವಾದ ನಿಷ್ಕೃಷ್ಟವಾದ ಅವಲೋಕನಗಳನ್ನು ಪ್ರಕಟಿಸುತ್ತಾನೆ. ಇದುವರೆಗೂ ಸೂಕ್ಷ್ಮಜೀವಿಗಳ ಲೋಕದಲ್ಲಿ ಹಲವಾರು ಸಂಶೋಧನೆಗಳು ನಡೆದಿವೆ. ೨೦೧೦ರಲ್ಲಿ ಕ್ರೇಗ್ ವೆಂಟರನು ಕೃತಕ ಸೂಕ್ಷ್ಮಜೀವಿಯನ್ನು ಸೃಷ್ಟಿಸಿದ್ದಾನೆ.

**ಉಪಕರಣಗಳು :** ಸೂಕ್ಷ್ಮಜೀವಿಗಳನ್ನು ನೋಡಲು ವಿವಿಧ ರೀತಿಯ ಸೂಕ್ಷ್ಮದರ್ಶಕಗಳನ್ನು, ಅವುಗಳನ್ನು ಪ್ರಯೋಗಾಲಯದಲ್ಲಿ ಬೆಳೆಸಲು ಪೆಟ್ರಿಡಿಶ್, ಕಲ್ಚರ್ ಟ್ಯೂಬ್, ಇನ್ಕ್ಯುಬೇಟರ್‌ಗಳನ್ನು ಬಳಸುತ್ತಾರೆ.

**ಸೂಕ್ಷ್ಮಜೀವಿಗಳ ವಿಧಗಳು :** ಮೊದಲೇ ತಿಳಿಸಿದಂತೆ ವೈರಸ್, ಆರ್ಕಿ ಬ್ಯಾಕ್ಟೀರಿಯಾ, ಬ್ಯಾಕ್ಟೀರಿಯಾ, ರಿಕೆಟ್ಸಿಯಾ, ಹಸಿರು–ನೀಲಿ ಶೈವಲ, ಶಿಲೀಂಧ್ರ, ಪಾಚಿ, ಪ್ರೋಟೋಜೋವಾ ಹಾಗೂ ನೆಮಟೋಡ್‌ಗಳು ಸೂಕ್ಷ್ಮಾಣು ಜೀವಿಗಳ ಗುಂಪಿಗೆ ಸೇರಿವೆ.

ವೈರಸ್‌ಗಳು ಜೀವಿಗಳ ಮತ್ತು ನಿರ್ಜೀವಿಗಳ ನಡುವಿನ ಕೊಂಡಿಯೆಂದು ಕರೆಯಲ್ಪಡುತ್ತವೆ. ಏಕೆಂದರೆ, ಅವು ವಾತಾವರಣದಲ್ಲಿ ನಿರ್ಜೀವಿಗಳಂತೆ ವರ್ತಿಸುತ್ತವೆ. ಅವುಗಳನ್ನು ಮಾಮೂಲಿ ರಾಸಾಯನಿಕಗಳಂತೆ ಅನಂತಕಾಲದವರೆಗೆ ಶೇಖರಿಸಿ ಇಡಬಹುದು. ಆದರೆ ಆಶ್ರಯ ಜೀವಿಗಳ




*ಸೂಕ್ಷ್ಮದರ್ಶಕದಲ್ಲಿ ಕಂಡಂತೆ : ಅ. ದುಂಡಾಣುಗಳು, ಬ. ಅಮೀಬಾ (ಚಿತ್ರಕೃಪೆ : ಪ್ರೆಸ್‌ಕಾಟ್ ಮೈಕ್ರೋಬೈಯಾಲಜಿ, ೭ನೇ ಆವೃತ್ತಿ )*




*ಪೆಟ್ರಿಡಿಶ್‌ನಲ್ಲಿ ಬೆಳೆದ ದಂಡಾಣು ಹಾಗೂ ಶಿಲೀಂಧ್ರದ ಕಾಲೋನಿಗಳು (ಚಿತ್ರಕೃಪೆ : ವಿನಯ್ ಕುಮಾರ್ ಮತ್ತು ರಾಮಲಿಂಗಪ್ಪ ಪ್ರೆಸ್‌ಕಾಟ್ ಮೈಕ್ರೋಬೈಯಾಲಜಿ, ೭ನೇ ಆವೃತ್ತಿ )*

ದೇಹದೊಳಗೆ ಸಂತಾನೋತ್ಪತ್ತಿಯನ್ನು ತೋರಿಸಿ ಅನೇಕ ರೋಗಗಳನ್ನು ಉಂಟುಮಾಡುತ್ತವೆ. ಅವುಗಳು ೨೦–೩೦೦ ನ್ಯಾನೋ ಮೀಟರ್‌ವರೆಗೆ ಗಾತ್ರ ಹೊಂದಿರುತ್ತವೆ.

ವೈರಾಯ್ಡ್‌ಗಳು ಕೇವಲ ಅನುವಂಶಿಕ ಅಂಶಗಳಾಗಿದ್ದರೆ, ಪ್ರಯಾನುಗಳು ಕೇವಲ ಸಸಾರಜನಕಗಳಾಗಿವೆ. ವೈರಾಯ್ಡ್‌ಗಳು ಸಸ್ಯಗಳಲ್ಲಿ ರೋಗವನ್ನು ಉಂಟುಮಾಡಿದರೆ, ಪ್ರಯಾನುಗಳು ಮನುಷ್ಯ ಹಾಗೂ ಪ್ರಾಣಿಗಳ ಕೆಲವು ರೋಗಗಳಿಗೆ ಕಾರಣವಾಗಿವೆ.

ಆರ್ಕಿ ಬ್ಯಾಕ್ಟೀರಿಯಾ, ಬಾಕ್ಟೀರಿಯಾ ಹಾಗೂ ರಿಕೆಟ್ಸಿಯಾಗಳು ಏಕಕೋಶ ಸೂಕ್ಷ್ಮಾಣು ಜೀವಿಗಳಾಗಿವೆ. ಅವು ೦.೨ರಿಂದ–೧೦೦ ಮೈಕ್ರೋಮೀಟರ್‌ಗಳಷ್ಟು ಗಾತ್ರವನ್ನು ಹೊಂದಿರುತ್ತವೆ. ಬ್ಯಾಕ್ಟೀರಿಯಾಗಳನ್ನು ಅವುಗಳ ಆಕಾರದ ಮೇಲೆ ಕಾಕೈ (ದುಂಡಗಿರುವ ಬ್ಯಾಕ್ಟೀರಿಯಾ), ಬ್ಯಾಸಿಲೈ (ಕೋಲಿನಂತಿರುವ ಬ್ಯಾಕ್ಟೀರಿಯಾ), ವಿಬ್ರಿಯೋ (ಅರ್ಧವಿರಾಮ ಚಿಹ್ನೆ) ಹಾಗೂ ಸ್ಪೈರೋಕೀಟ್ (ಸ್ಪ್ರಿಂಗಿನಂತಿರುವ ಬ್ಯಾಕ್ಟೀರಿಯಾ)ಗಳೆಂದು ವರ್ಗೀಕರಿಸಲಾಗಿದೆ.

ಶಿಲೀಂಧ್ರಗಳು ಏಕಕೋಶೀಯ ಹಾಗೂ ಬಹುಕೋಶೀಯ ಸೂಕ್ಷ್ಮಜೀವಿಗಳಾಗಿವೆ. ಈಸ್ಟುಗಳು ಏಕಕೋಶೀಯ ಶಿಲೀಂಧ್ರಗಳಾಗಿದ್ದರೆ, ಬೂಸ್ಟುಗಳು ಬಹುಕೋಶೀಯ ಶಿಲೀಂಧ್ರಗಳಾಗಿವೆ. ನಾಯಿಕೊಡೆಗಳು ಸಹ ಶಿಲೀಂಧ್ರಗಳ ಗುಂಪಿಗೆ ಸೇರುತ್ತವೆ.

ಪಾಚಿ ಹಾಗೂ ಹಸಿರು–ನೀಲಿ ಶೈವಲಗಳು ಬೇರೆಬೇರೆ ಗುಂಪಿಗೆ ಸೇರಿದ ಸೂಕ್ಷ್ಮಜೀವಿಗಳಾಗಿವೆ. ಪಾಚಿಗಳು ಕೋಶಕೇಂದ್ರವನ್ನು ಒಳಗೊಂಡ ಸೂಕ್ಷ್ಮಜೀವಿಗಳು. ಹಸಿರು–ನೀಲಿ ಶೈವಲಗಳು ಕೋಶಕೇಂದ್ರವನ್ನು ಒಳಗೊಂಡಿರದ ಸೂಕ್ಷ್ಮಜೀವಿಗಳಾಗಿವೆ. ಪಾಚಿ ಹಾಗೂ ಹಸಿರು–ನೀಲಿ ಶೈವಲಗಳು ದ್ಯುತಿಸಂಶ್ಲೇಷಣೆ ಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

ಪ್ರೋಟೋಜೋವಾ ಹಾಗೂ ನೆಮಟೋಡುಗಳು ಪ್ರಾಣಿ ವರ್ಗಕ್ಕೆ ಸೇರಿದ ಸೂಕ್ಷ್ಮಜೀವಿಗಳು. ಪ್ರೋಟೋಜೋವಾಗಳು ಏಕಕೋಶ ಸೂಕ್ಷ್ಮಜೀವಿಗಳು. ನೆಮಟೋಡುಗಳು ಬಹುಕೋಶೀಯ ಸೂಕ್ಷ್ಮಜೀವಿಗಳು. ಪ್ರೋಟೋಜೋವಾಗಳು ಮನುಷ್ಯ ಹಾಗೂ ಪ್ರಾಣಿಗಳ ರೋಗಗಳಿಗೆ ಕಾರಣವಾಗುತ್ತವೆ. ನೆಮಟೋಡುಗಳು ಸಸ್ಯಗಳು, ಮನುಷ್ಯ ಹಾಗೂ ಇತರೆ ಪ್ರಾಣಿಗಳ ಅನೇಕ ರೋಗಗಳಿಗೆ ಕಾರಣವಾವಾಗುತ್ತವೆ. ಕೆಲವು ನೆಮಟೋಡುಗಳು ಇತರೆ ಪರಾವಲಂಬಿ ಜೀವಿಗಳನ್ನು ತಿಂದು ಸಸ್ಯಗಳಲ್ಲಿ ಬೆಳೆಗಳ ಇಳುವರಿ ಹೆಚ್ಚಲು ಸಹಾಯ ಮಾಡಿದರೆ, ಕೆಲವು ನೆಮಟೋಡುಗಳು ಸಸ್ಯಗಳಿಗೆ ರೋಗಕಾರಕವಾಗಿ ಬೆಳೆಗಳ ಇಳುವರಿಯನ್ನು ಕಡಿಮೆ ಮಾಡುತ್ತವೆ.

**ಸ್ನೇಹಮಯಿ ಸೂಕ್ಷ್ಮಜೀವಿಗಳು :** ಸೂಕ್ಷ್ಮಜೀವಿಗಳು ಮಾನವನಿಗೆ ಅನೇಕ ರೀತಿಯಲ್ಲಿ ಉಪಕಾರಿಯಾಗಿವೆ. ಉದಾಹರಣೆಗೆ, ಮೊಸರಿನಲ್ಲಿರುವ ಲ್ಯಾಕ್ಟೋ ಬ್ಯಾಸಿಲೈಗಳು ನಮ್ಮ ಕರುಳಿನಲ್ಲಿರುವ ಇತರೆ ರೋಗಕಾರಕ ಸೂಕ್ಷ್ಮಜೀವಿಗಳನ್ನು ನಿಯಂತ್ರಣದಲ್ಲಿ ಇಡುತ್ತವೆ. ಕೆಲವು ಸೂಕ್ಷ್ಮಜೀವಿಗಳು ಮಣ್ಣಿನಲ್ಲಿರುವ ಜೈವಿಕ ಪದಾರ್ಥಗಳು ಕೊಳೆಯಲು ಸಹಕರಿಸುತ್ತವೆ. ರೈಜೋಬಿಯಮ್ ಮುಂತಾದ ಸೂಕ್ಷ್ಮಜೀವಿಗಳು ಶೇಂಗಾ ಹಾಗೂ ಇತರೆ ಬೆಳೆಗಳ ಇಳುವರಿ ಹೆಚ್ಚಲು ಸಹಕಾರಿಯಾಗಿವೆ.

ಕೆಲವೊಂದು ಸೂಕ್ಷ್ಮಜೀವಿಗಳನ್ನು ಜೀವ ನಿರೋಧಕಗಳ ತಯಾರಿಕೆಯಲ್ಲಿ ಬಳಸುತ್ತಾರೆ. ಉದಾಹರಣೆಗೆ, ಪೆನಿಸಿಲಿಯಮ್ ಶಿಲೀಂಧ್ರವನ್ನು ಪೆನ್ಸಿಲಿನ್ ತಯಾರಿಕೆಯಲ್ಲಿ ಹಾಗೂ ಸ್ಟ್ರೆಪ್ಟೋಮೈಸಿನ್ ತಯಾರಿಕೆಯಲ್ಲಿ ಸ್ಟ್ರೆಪ್ಟೋಮೈಸಿಸ್‌ಅನ್ನು ಉಪಯೋಗಿಸಲಾಗುತ್ತದೆ. ಬೆಳೆಗಳಲ್ಲಿರುವ ಹಾನಿಕಾರಕ ಶಿಲೀಂಧ್ರಗಳನ್ನು ನಿಯಂತ್ರಿಸಲು ಟ್ರೈಕೋಡರ್ಮ ಎಂಬ ಶಿಲೀಂಧ್ರವನ್ನು ಉಪಯೋಗಿಸಲಾಗುತ್ತದೆ. ಅದೇ ರೀತಿಯಲ್ಲಿ ಪರಾವಲಂಬಿ ಜಾತಿಯ ಕೀಟಗಳನ್ನು ನಿಯಂತ್ರಿಸಲು ಫ್ಯುಸೇರಿಯಮ್ ಶಿಲೀಂಧ್ರವನ್ನು ಉಪಯೋಗಿಸಲಾಗುತ್ತದೆ. ಜೈವಿಕ ತಂತ್ರಜ್ಞಾನದಲ್ಲೂ ಸಹ ಸೂಕ್ಷ್ಮಜೀವಿಗಳ ಬಳಕೆಯಿದೆ. ಬ್ಯಾಸಿಲಸ್ ಥುರುಂಜೆನೆಸಿಸ್ ಎಂಬ ದಂಡಾಣುವಿನ ಅನುವಂಶಿಕ ಅಂಶವನ್ನು ಬದನೆಯ ಅನುವಂಶಿಕ ಅಂಶಕ್ಕೆ ಸೇರಿಸಿ ರೋಗನಿರೋಧಕ ಬದನೆ ತಳಿಯನ್ನು ಸೃಷ್ಟಿಸಲಾಗಿದೆ (ಬಿ. ಟಿ. ಬದನೆ ಇಲ್ಲಿ ಬಿ.ಟಿ. ಎಂದರೆ ಬ್ಯಾಸಿಲಸ್ ಥುರುಂಜೆನೆಸಿಸ್).

**ರೋಗಕಾರಕ ಸೂಕ್ಷ್ಮಜೀವಿಗಳು :** ಕೆಲವೊಂದು ಸೂಕ್ಷ್ಮಜೀವಿಗಳು ರೋಗಕಾರಕ ಗುಣ ಹೊಂದಿವೆ. ವಿಬ್ರಿಯೋ ಕಾಲರಾ ಕಾಲರಾ ರೋಗಕ್ಕೆ ಕಾರಣವಾದರೆ, ಕ್ಲಾಸ್ಟ್ರೀಡಿಯಮ್ ಟೆಟಾನಿ ಟೆಟಾನಸ್ (ಧನುರ್ವಾಯು)ಗೆ ಕಾರಣವಾಗಿದೆ. ಅದೇ ರೀತಿಯಲ್ಲಿ ಸ್ಟೆಫೈಲೋ ಕಾಕೈ ಚರ್ಮದ ಹುಣ್ಣಿಗೆ ಕಾರಣವಾದರೆ, ಸಾಲ್ಮೋನೆಲ್ಲಾ ಟೈಫಿ ಟೈಫಾಯಿಡ್ ಜ್ವರಕ್ಕೆ ಕಾರಣವಾಗಿವೆ. ಸೂಕ್ಷ್ಮಾಣು ಜೀವಿಗಳು ಮನುಷ್ಯರಿಗಲ್ಲದೆ ಸಸ್ಯಗಳು ಹಾಗೂ ಪ್ರಾಣಿಗಳ ಅನೇಕ ರೋಗಗಳಿಗೂ ಸಹ ಕಾರಣವಾಗಿವೆ.

## ಸೂಕ್ಷ್ಮಜೀವಿಗಳಿಂದ ಬರುವ ಕೆಲವು ರೋಗಗಳು

| ಕ್ರಮ ಸಂಖ್ಯೆ | ರೋಗ | ರೋಗಕಾರಕ ಸೂಕ್ಷ್ಮಾಣು | ರೋಗಾಣುವಿನ ವಿಧ/ಆಶ್ರಯ ಜೀವಿ |
|---|---|---|---|
| ೧. | ಹೆಪಟೈಟಿಸ್ | ಹೆಪಟೈಟಿಸ್ ವೈರಸ್ (ಎ,ಬಿ,ಸಿ,ಡಿ,ಇ ಮತ್ತು ಜಿ ಸಿರೋಟೈಪ್‌ಗಳು) | ವೈರಸ್ / ಮನುಷ್ಯ |
| ೨. | ಸರ್ಪಸುತ್ತು | ಹರ್ಪಿಸ್ ವೈರಸ್ | ವೈರಸ್ /– |
| ೩. | ಗರ್ಭಕೋಶದ ಕ್ಯಾನ್ಸರ್ | ಹ್ಯೂಮನ್ ಪ್ಯಾಪಿಲೋಮಾ ವೈರಸ್ | ವೈರಸ್ /– |
| ೪. | ಮ್ಯಾಡ್ ಕೌ ಡಿಸೀಸ್ | ಪ್ರಯಾನುಗಳು | ಪ್ರಯಾನುಗಳು / ಹಸುಗಳು |
| ೫. | ಕುರು ರೋಗ | ಪ್ರಯಾನುಗಳು | ಪ್ರಯಾನುಗಳು / ಮನುಷ್ಯ |
| ೬. | ಟ್ಯುಬರ್‌ಕ್ಯುಲೋಸಿಸ್ (ಕ್ಷಯ) | ಮೈಕೋ ಬ್ಯಾಕ್ಟೀರಿಯಮ್ ಟ್ಯುಬರ್‌ಕ್ಯುಲೋಸಿಸ್ | ಬ್ಯಾಕ್ಟೀರಿಯಾ /– |
| ೭. | ಆಂತ್ರಾಕ್ಸ್ | ಬ್ಯಾಸಿಲಸ್ ಆಂತ್ರಾಸಿಸ್ | ಬ್ಯಾಕ್ಟೀರಿಯಾ /– |
| ೮. | ಸ್ಕಾರ್ಲೆಟ್ ಜ್ವರ | ಸ್ಟ್ರೆಪ್ಟೋಕಾಕಸ್ ಸ್ಪೀಸೀಸ್ | ಬ್ಯಾಕ್ಟೀರಿಯಾ /– |
| ೯. | ಅಥ್ಲೇಟಿಸ್ ಫೂಟ್ (ಅಥ್ಲೇಟಿಸ್ ಪಾದ) | ಟ್ರೈಕೋಫೈಟಾನ್ | ಶಿಲೀಂಧ್ರ /– |
| ೧೦. | ಮಧುರಾ ಪಾದ | ಮಧುರೆಲ್ಲಾ ಮೈಸಿಟೋಮಿ | ಶಿಲೀಂಧ್ರ /– |
| ೧೧. | ಮಲೇರಿಯಾ | ಪ್ಲಾಸ್ಮೋಡಿಯಂ ವೈವಾಕ್ಸ್ ಪಾ. ವೊವ್ಯಾಲೇ, ಪಾ. ಮಲೇರಿಯೇ ಪ್ಲಾ. ಫ್ಯಾಲ್ಸಿಫಾರಂ ಮುಂತಾದವು | ಪ್ರೋಟೋಜೋವಾ /– |
| ೧೨. | ಅಮೀಬಿಕ್ ಡೀಸೆಂಟ್ರಿ | ಎಂಟಮೀಬಾ ಹಿಸ್ಟಾಲಿಟಿಕಾ | ಪ್ರೋಟೋಜೋವಾ /– |
| ೧೩. | ಸಿಟ್ರಸ್ ಎಕ್ಸೋಕಾರ್ಟಿಸ್ | ವೈರಾಯ್ಡ್ | ವೈರಾಯ್ಡ್ / ನಿಂಬೆ ಗಿಡ |
| ೧೪. | ಹುಚ್ಚುನಾಯಿ ರೋಗ | ರೇಬಿಸ್ ವೈರಸ್ | ವೈರಸ್ / ಮನುಷ್ಯ ಹಾಗೂ ಇತರೆ ಪ್ರಾಣಿಗಳು |

**ರೋಗಗಳು ಹರಡುವ ವಿಧಾನ :** ಸೂಕ್ಷ್ಮಜೀವಿಗಳಿಂದ ಬರುವ ರೋಗಗಳು ಕಲುಷಿತ ನೀರಿನಿಂದ, ಗಾಳಿಯಿಂದ, ತಿನ್ನುವ ಆಹಾರದಿಂದ, ಮನುಷ್ಯರಿಂದ ಮನುಷ್ಯರಿಗೆ, ಇಲ್ಲವೇ ಪ್ರಾಣಿಗಳಿಂದ ಮನುಷ್ಯರಿಗೆ, ಮಾನವರಿಂದ ಪ್ರಾಣಿಗಳಿಗೆ ಹರಡುತ್ತವೆ. ಮೇಲಿನ ರೇಬಿಸ್ ರೋಗವು ಹುಚ್ಚುನಾಯಿ ಕಡಿತದಿಂದ ಮನುಷ್ಯರಿಗೆ ಹರಡುತ್ತದೆ.

**ಕೊಡುವ ಲಸಿಕೆ, ಜೀವಪ್ರತಿರೋಧಕಗಳು ಮತ್ತು ಚಿಕಿತ್ಸೆ :** ಸೂಕ್ಷ್ಮಜೀವಿಗಳಿಂದ ರೋಗಗಳು ಬರದಂತೆ ತಡೆಯಲು ಮುನ್ನೆಚ್ಚರಿಕೆಯ ಕ್ರಮವಾಗಿ ವ್ಯಾಕ್ಸೀನ್ (ಲಸಿಕೆ)ಗಳನ್ನು ಬಳಸಲಾಗುತ್ತದೆ; ವ್ಯಾಕ್ಸೀನುಗಳು ನಿರ್ವೀರ್ಯಗೊಳಿಸಿದ ಸೂಕ್ಷ್ಮಜೀವಿಗಳು ಅಥವಾ ಟಾಕ್ಸಿನ್‌ಗಳು (ನಿರ್ವೀರ್ಯಗೊಳಿಸಿದ ಟಾಕ್ಸಿನ್‌ಗಳನ್ನು ಟಾಕ್ಸಾಯಿಡ್ ಎನ್ನುತ್ತೇವೆ). ವ್ಯಾಕ್ಸೀನುಗಳು ರೋಗ ನಿರೋಧಕ ಪ್ರಕ್ರಿಯೆಯನ್ನು ಉದ್ದೀಪನಗೊಳಿಸಿ ಮುಂದೆ ಎಂದಾದರೂ ರೋಗಕಾರಕ ಸೂಕ್ಷ್ಮಜೀವಿಯು ದೇಹವನ್ನು ಪ್ರವೇಶಿಸಿದರೆ ಅವುಗಳ ವಿರುದ್ಧ ಹೋರಾಡುವ ಶಕ್ತಿಯನ್ನು ಕೊಡುತ್ತವೆ. ಡಿಫ್ತೀರಿಯಾ (ಗಂಟಲುಮಾರಿ), ಪೆರ್ಟ್ಯುಸಿಸ್ (ನಾಯಿಕೆಮ್ಮು), ಟೆಟಾನಸ್ (ಧನುರ್ವಾಯು), ಪೋಲಿಯೋ ಮುಂತಾದ ರೋಗಗಳಿಗೆ ವ್ಯಾಕ್ಸೀನುಗಳನ್ನು ಕೊಡಲಾಗುತ್ತದೆ. ಅವುಗಳನ್ನು ಚುಚ್ಚುಮದ್ದುಗಳ ರೂಪದಲ್ಲಿ ಇಲ್ಲವೇ ಬಾಯಿಯ ಮುಖಾಂತರ ಕೊಡಲಾಗುತ್ತದೆ. ೨೦೧೫ರಲ್ಲಿ ಮಲೇರಿಯಾ ಜ್ವರಕ್ಕೆ ವ್ಯಾಕ್ಸೀನನ್ನು ಕಂಡುಹಿಡಿಯಲಾಗಿದೆ.

ಭಾರತದಲ್ಲಿ ಪೋಲಿಯೋ ರೋಗವನ್ನು ೨೦೧೪ರಲ್ಲಿ ಹಾಗೂ ಧನುರ್ವಾಯುವನ್ನು ೨೦೧೫ರಲ್ಲಿ ಸಂಪೂರ್ಣವಾಗಿ ನಿರ್ಮೂಲಿಸಲಾಗಿದೆ. ಅದೇ ರೀತಿಯಾಗಿ ೨೦೨೫ರಲ್ಲಿ ಕ್ಷಯರೋಗವನ್ನು ಸಂಪೂರ್ಣವಾಗಿ ನಿರ್ಮೂಲಿಸುವ ಗುರಿಯನ್ನು ಭಾರತ ಸರ್ಕಾರವು ಹೊಂದಿದೆ. ಪೋಲಿಯೋ ವ್ಯಾಕ್ಸೀನ್ ಬಾಯಿಯ ಮುಖಾಂತರ ಕೊಡುವ ವ್ಯಾಕ್ಸೀನಿಗೆ ಉದಾಹರಣೆಯಾಗಿದೆ. ೨೦೧೪ರಿಂದ ಈಚೆಗೆ ಬಾಯಿಯ ಮುಖಾಂತರ ಕೊಡುವ ವ್ಯಾಕ್ಸೀನಿನೊಂದಿಗೆ ಪೋಲಿಯೋ ಚುಚ್ಚುಮದ್ದನ್ನು ಕೊಡಲು ಸಹ ಭಾರತ ಸರ್ಕಾರ ನಿರ್ಧರಿಸಿದೆ. ಮೊದಲೇ ಹೇಳಿದಂತೆ ರೋಗಗಳನ್ನು ತಡೆಯಲು ಲಸಿಕೆಗಳನ್ನು ಕೊಡಲಾಗುತ್ತದೆ. ರೋಗಗಳು ಬಂದಾಗ ಜೀವ ಪ್ರತಿರೋಧಕಗಳನ್ನು ಬಳಸಿ ಗುಣಪಡಿಸಲಾಗುತ್ತದೆ. ಪೆನಿಸಿಲಿನ್, ಸ್ಟ್ರೆಪ್ಟೋಮೈಸಿನ್, ಕ್ಲೋರ್‍ಯಾಂಪೆನಿಕಾಲ್ ಮುಂತಾದವು ಜೀವಪ್ರತಿರೋಧಕಗಳಾಗಿವೆ. ಇವುಗಳೊಂದಿಗೆ ಇತರೆ ಚಿಕಿತ್ಸಾ ವಿಧಾನಗಳನ್ನು ಸಹ ಅಳವಡಿಸಿಕೊಳ್ಳಲಾಗುತ್ತದೆ. ಉದಾಹರಣೆಗೆ, ಜ್ವರಕ್ಕಾಗಿ ಜೀವಪ್ರತಿರೋಧಕಗಳೊಡನೆ ದೇಹದ ಉಷ್ಣತೆಯನ್ನು ಕಡಿಮೆ ಮಾಡಲು ಪ್ಯಾರಸಿಟಮಾಲ್‌ಅನ್ನು ಮಾತ್ರೆಯ ರೂಪದಲ್ಲಿ ಇಲ್ಲವೇ ಚುಚ್ಚುಮದ್ದಾಗಿ ಕೊಡಲಾಗುತ್ತದೆ. ಕಾಲರಾ ರೋಗದಲ್ಲಿ ನಿರ್ಜಲೀಕರಣ ತಡೆಯಲು ಓಆರ್‌ಎಸ್ ಇಲ್ಲವೇ ಸಲೈನನ್ನು ಕೊಡಲಾಗುತ್ತದೆ.

**ಡಾ॥ ರಾಮಲಿಂಗಪ್ಪ** ಮತ್ತು **ವಿನಯ್ ಕುಮಾರ್ ಪಿ. ಜಿ.**
ಸೂಕ್ಷ್ಮಜೀವಶಾಸ್ತ್ರ ಅಧ್ಯಯನ ವಿಭಾಗ
ದಾವಣಗೆರೆ ವಿಶ್ವವಿದ್ಯಾನಿಲಯ
ಶಿವಗಂಗೋತ್ರಿ, ದಾವಣಗೆರೆ – ೫೭೭ ೦೦೨

# ಕ್ಷ - ಕಿರಣ

- ಸಾನ್ವಿ ಪಿ.

## BJP - PDP ಮೈತ್ರಿ




## JNU ಚುನಾವಣೆಯಲ್ಲಿ ABVP ಗೆ ಸೋಲು









## ಗಡಿಯಾರದಾಟ

# ಸಿಬ್ತೇ ಹಸನ್ ಪಾಕಿಸ್ತಾನದ ಗ್ರಾಂಶಿ

ನೂರು ವರ್ಷಗಳ ಹಿಂದೆ ಜನಿಸಿದ ಸಿಬ್ತೇ ಹಸನ್ (೧೯೧೬–೧೯೮೬) ಭಾರತದ ಪ್ರಗತಿಪರ ಲೇಖಕರ ಸಂಘದಲ್ಲಿ, ನಂತರ ಪಾಕಿಸ್ತಾನದ ಕಮ್ಯುನಿಸ್ಟ್ ಪಕ್ಷದಲ್ಲಿ ಆರಂಭಿಕ ಹಂತದ ಕಾರ್ಯಕರ್ತ. ಅಮೆರಿಕಾದ ಕಾರಾಗೃಹದಲ್ಲಿ ಬಂಧಿತನಾಗಿದ್ದ ಈತ ಆಮೇಲೆ ನಾಲ್ಕಾರು ವರ್ಷ (೧೯೫೧–೫೫) ಪಾಕಿಸ್ತಾನದ ಕಾರಾಗೃಹಗಳಲ್ಲಿದ್ದ. ಅಯೂಬ್ ಖಾನ್ ಮಿಲಿಟರಿ ಆಡಳಿತ ಕಾಲದಲ್ಲಿ ಮತ್ತೆ ಸೆರೆಮನೆಗೆ ದೂಡಲ್ಪಟ್ಟ . ಉರ್ದುವಿನಲ್ಲಿ ಇವನ ಬರವಣಿಗೆ. ಬೌದ್ಧಿಕವಾಗಿ ಈತನ ಕೃಷಿ ಅಸಾಧಾರಣವಾದ್ದು. ಆದ್ದರಿಂದ ರಾಝಾ ನಯೀಂ ಎಂಬ ವಿಶ್ಲೇಷಕ ಇವನನ್ನು "ಪಾಕಿಸ್ತಾನದ ಗ್ರಾಂಶಿ" ಎಂದು ಕರೆದಿದ್ದಾನೆ. ಸೈದ್ಧಾಂತಿಕ ತತ್ವಗಳ ನಿರೂಪಣೆಗಳಿಂದಾಗಿ ಈತ ಪಾಕಿಸ್ತಾನದಲ್ಲಿ ಶ್ರೇಷ್ಠ ಮಟ್ಟದ ಚಿಂತಕನೆಂದು ಗುರುತಿಸಲ್ಪಟ್ಟಿದ್ದ.

**ಜಿ. ರಾಮಕೃಷ್ಣ**

ಸಜ್ಜಾದ್ ಝಾಹೀರ್ ಮತ್ತು ಫೈಜ್ ಅಹ್ಮದ್ ಫೈಜ್ ಇಬ್ಬರೂ ಭಾರತ ಮತ್ತು ಪಾಕಿಸ್ತಾನಗಳಲ್ಲಿ ಕಮ್ಯುನಿಸ್ಟರಾಗಿ ಮತ್ತು ಪ್ರಗತಿಪರ ಲೇಖಕರಾಗಿ ಪ್ರಸಿದ್ಧರು. ಕಮ್ಯುನಿಸ್ಟ್ ಪಕ್ಷವು ಝಾಹೀರ್‌ನನ್ನು ಪಕ್ಷವನ್ನು ಕಟ್ಟಿ ಬೆಳೆಸಲು ಪಾಕಿಸ್ತಾನಕ್ಕೆ ಕಳಿಸಿತ್ತು. ಝಾಹೀರ್, ಫೈಜ್ ಮತ್ತು ಹಸನ್ ಪಕ್ಷದ ಚಟುವಟಿಕೆಗಳನ್ನು ಆಯೋಜಿಸಿ ಕೆಲವು ಜನಾಂದೋಲನಗಳನ್ನು ನಡೆಸಿದರು. ಮೂರೂ ಜನರ ವಿರುದ್ಧ ಪಾಕಿಸ್ತಾನದ ಸರ್ಕಾರವು ಮೊಕದ್ದಮೆಗಳನ್ನು ದಾಖಲಿಸಿ ಸೆರೆಮನೆಗೆ ಅವರನ್ನು ದೂಡಿತು. ಜವಾಹರಲಾಲ್ ನೆಹರು ಮಧ್ಯಪ್ರವೇಶ ಮಾಡಿ ಸಜ್ಜಾದ್ ಝಾಹೀರರನ್ನು ಬಿಡುಗಡೆಗೊಳಿಸಿ ಭಾರತಕ್ಕೆ ಹಿಂದಿರುಗುವಂತೆ ಮಾಡಿದರು. ಇನ್ನಿಬ್ಬರು ಪಾಕಿಸ್ತಾನದಲ್ಲಿ ವೈಚಾರಿಕತೆಯ ಹರಿಕಾರರಾಗಿ ಮುಂದುವರಿದರು. ಈ ಮೂವರ ಪೈಕಿ ಸಿಬ್ತೇ ಹಸನ್ ಕುರಿತಂತೆ ಜೀವನ ಮಾಹಿತಿ ಅಷ್ಟಾಗಿ ಪ್ರಚುರವಿಲ್ಲ. ಆತ ಹುಟ್ಟಿದ್ದು ಉತ್ತರ ಪ್ರದೇಶದ ಆಜ಼ಂಗಢದಲ್ಲಿ. ಅಲಿಘರ್ ವಿಶ್ವವಿದ್ಯಾನಿಲಯದಿಂದ ಪದವಿ ಪಡೆದು ಪತ್ರಕರ್ತನಾಗಿ ಲಕ್ನೋದಲ್ಲಿ ಪಯೋನಿಯರ್, ಅಲಹಾಬಾದ್‌ನಲ್ಲಿ ನ್ಯಾಷನಲ್ ಹೆರಾಲ್ಡ್, ಮುಂಬೈನಲ್ಲಿ ಮುಂಬೈ ಕ್ರಾನಿಕಲ್ ಮತ್ತು ಹೈದರಾಬಾದಿನಲ್ಲಿ ಪಾಯಂ ಪತ್ರಿಕೆಗಳಲ್ಲಿ ಕೆಲಸ ಮಾಡಿದ ಹಸನ್ ನಂತರ ಸಾಹಿತ್ಯಿಕ ಪತ್ರಿಕೆ ನಯಾ ಅದಾಬ್‌ನ ಸಂಪಾದಕನಾಗಿದ್ದ. ಕಡೆಗೆ ಲಾಹೋರಿನ ವಾರಪತ್ರಿಕೆ ಲೈಲ್–ಒ–ನಹರ್‌ನ ಸಂಪಾದಕನಾಗಿದ್ದ. ಆತನ ಅತ್ಯಂತ ಪ್ರಸಿದ್ಧ ಗ್ರಂಥವೆಂದರೆ ಉರ್ದುವಿನಲ್ಲಿರುವ *ಮೂಸಾ ಸೇ ಮಾರ್ಕ್ಸ್ ತಕ್* (ಮೋಸೆಸ್‌ನಿಂದ ಮಾರ್ಕ್ಸ್‌ವರೆಗೆ).

ಭಾರತವು ಬ್ರಿಟಿಷರ ವಸಾಹತಾಗಿದ್ದ ಕಾಲದಲ್ಲೇ ದೆಹಲಿಯಲ್ಲಿ ಇತಿಹಾಸ ಪ್ರಾಧ್ಯಾಪಕರಾಗಿದ್ದ ಡಾ॥ ಮುಹಮ್ಮದ್ ಅಶ್ರಫ್ ಒಡನಾಟದಲ್ಲಿ ಸಿಬ್ತೇ ಹಸನ್ ಸಮಾಜವಾದದ ಪ್ರಾಥಮಿಕ ಪಾಠಗಳನ್ನು ಪಡೆದುಕೊಂಡ. ಆಗಲೇ ಬರ್ಟ್ರಂಡ್ ರಸೆಲ್, ಬರ್ನಾರ್ಡ್ ಶಾ, ಡಿ. ಎಚ್. ಕೋಲ್, ಸಿಡ್ನಿ ಹುಕ್ ಮುಂತಾದವರ ಕೃತಿಗಳನ್ನು ಪರಿಚಯಿಸಿಕೊಂಡ. ಆತನ ಜೀವನದಲ್ಲಿ ವಿಶೇಷ ಪ್ರಭಾವ ಬೀರಿದವರಿಬ್ಬರು: ಫೈಜ್ ಅಹ್ಮದ್ ಫೈಜ್ ಮತ್ತು ವಿಚಿತ್ರ ನಡೆಯ ಸಾಹಿತಿ ಡಾ॥ ರಶೀದ್ ಜಹಾನ್. ಪಾಕಿಸ್ತಾನದ ಪ್ರಗತಿಪರ ಲೇಖಕರ ಸಂಘಕ್ಕೆ ಈ ಮೂರೂ ಮಂದಿ ಆಧಾರಸ್ತಂಭಗಳಾಗಿದ್ದವರು. ೧೯೪೬ರಲ್ಲಿ ಕಮ್ಯುನಿಸ್ಟ್ ಪಕ್ಷದ ಪತ್ರಿಕೆ ನ್ಯೂ ಏಜ್‌ನ ಪತ್ರಿಕಾ ಪ್ರತಿನಿಧಿಯಾಗಿ ವಿಶ್ವಸಂಸ್ಥೆಗೆ ತೆರಳಿ ನ್ಯೂಯಾರ್ಕ್‌ನ ಕೊಲಂಬಿಯ ವಿಶ್ವವಿದ್ಯಾನಿಲಯದಿಂದ ರಾಜ್ಯಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದುಕೊಂಡ. ಅದರ ತರುವಾಯದಲ್ಲಿ ಎಡಪಂಥೀಯನೆಂಬ ಕಾರಣದಿಂದ ಸೆರೆಮನೆಗೆ ಅಟ್ಟಲ್ಪಟ್ಟ ಮತ್ತು ಆಮೇಲೆ ಅಮೆರಿಕಾದಿಂದ ಹೊರದೂಡಲ್ಪಟ್ಟ . ೧೯೪೮ರಲ್ಲಿ ಪಾಕಿಸ್ತಾನಕ್ಕೆ ತೆರಳಿ ಬೇರೆ ಕಮ್ಯುನಿಸ್ಟ್ ಕಾರ್ಯಕರ್ತರೊಂದಿಗೆ ೧೯೫೧ರಲ್ಲಿ ಸೆರೆಮನೆವಾಸ ಅನುಭವಿಸಿದ. ರಾವಲ್ಪಿಂಡಿ ಪಿತೂರಿ ಮೊಕದ್ದಮೆಯೆಂದು ಪ್ರಸಿದ್ಧವಾದ ಈ ಮೊಕದ್ದಮೆಯು ಸರ್ಕಾರದ ಪಿತೂರಿಯಾಗಿತ್ತು! ೧೯೫೫ರಲ್ಲಿ ಬಿಡುಗಡೆಯಾಗಿ ಅಯೂಬ್ ಖಾನ್ ಮಿಲಿಟರಿ ಸರ್ಕಾರ ಅಧಿಕಾರಕ್ಕೆ ಬಂದಾಗ ಮತ್ತೆ ಸೆರೆಮನೆ ಸೇರಿಕೊಂಡ. ಪಾಕಿಸ್ತಾನದ ಕಮ್ಯುನಿಸ್ಟ್ ಪಕ್ಷದ ಪ್ರಕಾಶನ ಸಂಸ್ಥೆಯಲ್ಲಿ ಅನೇಕ ವರ್ಷಗಳ ಕಾಲ ಪ್ರಬಂಧಕನಾಗಿದ್ದ ಹಸನ್ ರಚಿಸಿರುವ ಗ್ರಂಥಗಳು ಹತ್ತಾರು. ಭೂತಕಾಲದ ಸ್ಮಾರಕಗಳು (*ಮಾಜ಼ೀಕೆ ಮಜ಼ಾರ್*), *ಚಿಂತನೆಯ ಸೊಗಸು* (ನವೀದ್–ಎ–ಫ಼ಿಕ್ರ್), ಸಾಹಿತ್ಯ ಮತ್ತು ಜ್ಞಾನೋದಯ (*ಅದಬ್ ಔರ್ ರೋಶನ್ ಖಯಾಲಿ*), ಪಾಕಿಸ್ತಾನದಲ್ಲಿ



ಸಂಸ್ಕೃತಿಯ ಉಗಮ, ಇರಾನಿನ ಕ್ರಾಂತಿ, ಮಾರ್ಕ್ಸ್ ಮತ್ತು ಪೌರ್ವಾತ್ಯ ದೇಶಗಳು, (ಎಲ್ಲಾ ಉರ್ದುವಿನಲ್ಲಿ) ಅವನ ಪ್ರಮುಖ ಗ್ರಂಥಗಳು. ಅವನು ಬರೆದ ಒಂದೇ ಇಂಗ್ಲಿಷ್ ಪುಸ್ತಕ "ಪಾಕಿಸ್ತಾನದಲ್ಲಿ ವಿಚಾರ ಸಂಘರ್ಷ" (ಬ್ಯಾಟಲ್ ಆಫ್ ಐಡಿಯಾಸ್ ಇನ್ ಪಾಕಿಸ್ತಾನ್). ವಿಚಾರಪರತೆ ಮತ್ತು ಧರ್ಮನಿರಪೇಕ್ಷತೆ ಅವನ ಎಲ್ಲ ಪುಸ್ತಕಗಳ ಹೂರಣವೆಂಬುದು ಅವನ ಖ್ಯಾತಿಯಾಗಿದೆ.

ಮೂವತ್ತೆಂಟು ವರ್ಷ ಪಾಕಿಸ್ತಾನದಲ್ಲಿದ್ದ ಹಸನ್‌ಗೆ ತನ್ನದೆಂಬ ಮನೆ ಎಂದೂ ಇರಲಿಲ್ಲ, ಆದರೆ ಬಹುತೇಕ ಅವನು ವಾಸಿಸಿದ್ದು ಕರಾಚಿಯಲ್ಲಿ. ಅಲ್ಲಿ ಖ್ಯಾತ ಚಿತ್ರಕಲಾವಿದ ಶಕೀರ್ ಆಲಿ ಅವನ ಆಪ್ತಮಿತ್ರ. ಫೈಜ್ ಅಹ್ಮದ್ ಫೈಜ್‌ನ ವಾಸಸ್ಥಳವೂ ಕರಾಚಿಯಾದ್ದರಿಂದ ಹಸನ್ ಆತನ ಸಹೋದ್ಯೋಗಿಯಾಗಿದ್ದು ಸಹಜ. ಈ ತ್ರಿಮೂರ್ತಿಗಳು ಕರಾಚಿಯ ಸಾಂಸ್ಕೃತಿಕ ಜೀವನಕ್ಕೆ ದೀಪಧಾರಿಗಳು. ನೌಶಬ ಝುಬೇರಿ ಎಂಬಾಕೆ ಹಸನ್‌ನ ಮಗಳು, ಈಗಲೂ ಕರಾಚಿಯಲ್ಲೇ ಇದ್ದಾಳೆ. ೧೯೭೦ರಲ್ಲಿ ಅವಳಿಗೆ ಲಾಟರಿಯಲ್ಲಿ ದೊಡ್ಡ ನಿವೇಶನ ದೊರೆಯಿತಂತೆ! ಅಲ್ಲಿ ಕಟ್ಟಿದ ಮನೆಯಲ್ಲಿ ಹಸನ್ ಹನ್ನೊಂದು ವರ್ಷ ಇದ್ದು ಮೊಮ್ಮಕ್ಕಳ ಪ್ರೀತಿಯ ಅಜ್ಜನಾಗಿದ್ದ. ಅವನು ಗತಿಸಿದ್ದು ಅಲ್ಲೇ.

ಆ ಮನೆಯಲ್ಲಿದ್ದಾಗ ಹಸನ್ ಹೊರಹೋಗುತ್ತಿದ್ದುದು ಅಪರೂಪಕ್ಕೊಮ್ಮೆ. ಅದೂ ಯಾರಾದರೂ ಸಂಗಾತಿಯು ಅನಾರೋಗ್ಯದಿಂದಿದ್ದರೆ ಅವನನ್ನೋ ಅವಳನ್ನೋ ನೋಡಿಬರಲು, ಅಷ್ಟೆ. ಇಡೀ ದಿನ ವ್ಯಾಸಂಗ, ಬರವಣಿಗೆ ಮತ್ತು ವಿರಾಮ ಅವನ ದಿನಚರಿ. ಆತನ ಕೈಬರಹ ಬಹಳ ಸುಂದರವಾಗಿದ್ದಿತೆನ್ನುತ್ತಾರೆ. ಪುಸ್ತಕ ಭಂಡಾರಕ್ಕೆ ಹೋದರೆ ಗಂಟೆಗಟ್ಟಲೆ ಓದಿನಲ್ಲಿ ಮಗ್ನನಾಗಿರುತ್ತಿದ್ದ. ಬ್ರಿಟಿಷ್ ಕೌನ್ಸಿಲ್ ಲೈಬ್ರರಿಯಿಂದ ಕೆಲವು ಪುಸ್ತಕಗಳ ಮತ್ತು ಹಸ್ತಪ್ರತಿಗಳ ಮೈಕ್ರೋಫಿಲಂ ಪಡೆದುಕೊಳ್ಳುತ್ತಿದ್ದ. ಭೂತಕಾಲದ ಸ್ಮಾರಕಗಳು ಎಂಬ ಗ್ರಂಥ ರಚನೆಯಲ್ಲಿ ತೊಡಗಿದ್ದಾಗ ಬ್ಯಾಬಿಲೋನ್, ಜೋರ್ಡಾನ್‌ಗೆಲ್ಲಾ ಹೋಗಿ ಬಂದಿದ್ದ. ಅವನ ಇನ್ನೊಂದು ಓದಿನ ತಾಣ ಕರಾಚಿಯ ಗ್ಯೋತೆ ಇನ್‌ಸ್ಟಿಟ್ಯೂಟ್, ಇನ್ನೊಂದು ಹವ್ಯಾಸ ತೋಟಗಾರಿಕೆ. ಅದಕ್ಕೆ ತಾನೇ ಬಾವಿ ತೋಡಿ ಕೊಂಡಿದ್ದನಂತೆ. ಯಾವ ಕ್ಷಣದಲ್ಲಾದರೂ ದಸ್ತಗಿರಿ ಯಾಗಬಹುದಿತ್ತು; ಆದ್ದರಿಂದ ಸದಾ ಹಾಲು ಪುಡಿ ಮತ್ತು ಟೀ ಪುಡಿ ಸಿದ್ಧವಾಗಿ ಇಟ್ಟುಕೊಂಡಿರುತ್ತಿದ್ದ!

ಅವನ ಕಡೆಯ ವರ್ಷದಲ್ಲಿ ಪಾಕಿಸ್ತಾನ ಸಾಹಿತಿಗಳ ಸಂಘದ ಸುವರ್ಣಮಹೋತ್ಸವದ ಆಚರಣೆಯಲ್ಲಿ ಬಿರುಸಿನಲ್ಲಿ ಪಾಲ್ಗೊಂಡಿದ್ದ. ಆಗ್ಗೆ ಪಾಕಿಸ್ತಾನಿ ಅದಾಬ್ ಎಂಬ ನಿಯತಕಾಲಿಕವನ್ನು ಪ್ರಕಟಿಸುತ್ತಿದ್ದ. ಆಗಾಗ್ಗೆ ಕಾವ್ಯವಾಚನದ ಮುಷೈರಾಗಳನ್ನೂ ಆಯೋಜಿಸುತ್ತಿದ್ದ. ಅವನು ವಾಸಿಸುತ್ತಿದ್ದ ಮನೆ ಕೆಲಕಾಲ ಪುಸ್ತಕ ಭಂಡಾರವಾಗಿದ್ದಿತು. ಓದುಗರು ವಿರಳವಾಗುತ್ತಾ ಹೋಗಿ ಅದು ಮುಚ್ಚಲ್ಪಟ್ಟಿತು. ಪಾಕಿಸ್ತಾನದ ವಾಚಕರ ಅಭಿರುಚಿಗೆ ಇದೊಂದು ನಿದರ್ಶನ ಸಾಕು!

ಸೆರೆಮನೆಯಲ್ಲಿದ್ದುಕೊಂಡೇ ಅನನ್ಯವಾದ ಬರಹಗಳನ್ನು ಲೋಕಕ್ಕೆ ನೀಡಿದವರಲ್ಲಿ ಇಟಲಿಯ ಆಂಟೋನಿಯೋ ಗ್ರಾಂಶಿ ಪ್ರಸಿದ್ಧನಾಗಿದ್ದಾನೆ. ಲೆನಿನ್ ಸಹ ಅದನ್ನು ಮಾಡಿದ್ದುದುಂಟು. ಪಾಕಿಸ್ತಾನದ ಕಮ್ಯುನಿಸ್ಟರ ಪೈಕಿ ಸಿಬ್ತೇ ಹಸನ್ ಅತಿಹೆಚ್ಚು ಬಾರಿ ಮತ್ತು ಅತಿದೀರ್ಘ ಕಾಲ ಸೆರೆಮನೆವಾಸ ಅನುಭವಿಸಿದ, ಆದರೆ ಸೆರೆಮನೆಯಲ್ಲಿ ಅವನಿಗೆ ಏನನ್ನೂ ಬರೆಯುವುದು ಸಾಧ್ಯವಾಗಲಿಲ್ಲ; ಏಕೆಂದರೆ ಅದಕ್ಕೆ ಸೌಲಭ್ಯವಾಗಲಿ, ಪರವಾನಗಿಯಾಗಲಿ ಇರಲಿಲ್ಲ. ಭಗತ್ ಸಿಂಗ್ ಜೈಲಿನಲ್ಲಿ ಒಂದು ಅದ್ಭುತವಾದ ದಿನಚರಿಯನ್ನು ಬರೆದ ಮತ್ತು ಗ್ರಾಂಶಿ ಹಾಗೂ ಲೆನಿನ್ ಪರವಾನಗಿ ಮತ್ತು ಸೌಲಭ್ಯ ಇಲ್ಲದಿದ್ದಾಗ ಅವನ್ನು ಗುಟ್ಟಾಗಿ ತಾವೇ ನಿರ್ಮಿಸಿ ಕೊಂಡರು. ಸೆರೆಮನೆಯಲ್ಲಿ ದೀರ್ಘಕಾಲದ ಚಿಂತನೆ ನಡೆಸಿ, ಹೊರಗೆ ಬಂದಾಗ ಆದಷ್ಟು ಹೆಚ್ಚು ಬರವಣಿಗೆ ಮಾಡುವುದು ಹಸನ್‌ಗೆ ರೂಢಿಯಾಗಿತ್ತು. ಅವನ ಬರಹದ ವ್ಯಾಪ್ತಿ ಅಗಾಧವಾದ್ದು. ಮಾನವಶಾಸ್ತ್ರ, ಮಾರ್ಕ್ಸ್‌ವಾದದ ಮೂಲಗ್ರಹಿಕೆಗಳು, ಪಾಕಿಸ್ತಾನದ ಜನತಾ ಇತಿಹಾಸ, ಇಸ್ಲಾಂನ ಜಡ್ಡುತನದ (ಫಂಡಮೆಂಟಲಿಸಂ) ಬೇರುಗಳು, ಪಾಕಿಸ್ತಾನದಲ್ಲಿ ಧರ್ಮನಿರಪೇಕ್ಷತೆಗೆ ಇರುವ ಆತಂಕಗಳು, ಸಾಹಿತ್ಯ ಮೀಮಾಂಸೆ, ಹೀಗೆ ಅನೇಕ ವಿಷಯಗಳನ್ನು ಕುರಿತು ಆತ ಗಂಭೀರವೂ ವಿದ್ವತ್ಪೂರ್ಣವೂ ಆದ ಗ್ರಂಥಗಳನ್ನು ರಚಿಸಿದ್ದಾನೆ. ಪ್ರತಿಯೊಂದು ವಿಷಯ ವಿಸ್ತರಣೆಯೂ ಮಾರ್ಕ್ಸ್‌ವಾದದ ಮೂಲಭೂತ ಸತ್ವಗಳಾದ ಚಾರಿತ್ರಿಕ ಭೌತವಾದ ಮತ್ತು ವರ್ಗ ಹೋರಾಟದ ನೆಲೆಯನ್ನು ಹೊಂದಿದೆ. ಪಾಕಿಸ್ತಾನ ಮತ್ತು ದಕ್ಷಿಣ ಏಷ್ಯದ ವಾಸ್ತವಗಳ ಚಿತ್ರಣಕ್ಕೆ ಹಸನ್‌ನ ಕೃತಿಗಳು ಪ್ರಸಿದ್ಧವಾಗಿವೆ.

ಶೀತಲ ಯುದ್ಧದ ವಾತಾವರಣವು ಜಗತ್ತನ್ನು ಆವರಿಸಿದ್ದಾಗ ಬೇರೆಲ್ಲಿಯಂತೆ ಪಾಕಿಸ್ತಾನದಲ್ಲೂ ಕಮ್ಯುನಿಸ್ಟರು ಚೀಣಾ ಮತ್ತು ಸೋವಿಯೆತ್ ಒಕ್ಕೂಟ, ಇವೆರಡರಲ್ಲಿ ಒಂದರ ಪರವಾಗಿ ವಾದಿಸುತ್ತಿದ್ದರು. ಸಿಬ್ತೇ ಹಸನ್ ಇಂತಹ ಇಕ್ಕಟ್ಟಿಗೆ ಸಿಲುಕಿಕೊಳ್ಳದೆ ಪಾಕಿಸ್ತಾನದ ಸನ್ನಿವೇಶ ಮತ್ತು ಆರ್ಥಿಕ – ರಾಜಕೀಯಗಳನ್ನು ಕೇಂದ್ರೀಕರಿಸಿ ಮಾರ್ಕ್ಸ್‌ವಾದಿ ವಿಶ್ಲೇಷಣೆಗೆ ತನ್ನನ್ನು ಒಡ್ಡಿಕೊಂಡ. ಸೆರೆಮನೆಯಲ್ಲಿರಲಿ, ಹೊರಗಿರಲಿ, ಭೂಗತನಾಗಿರಲಿ, ಈ ಬದ್ಧತೆಯನ್ನು ಅವನು ಬಿಟ್ಟುಕೊಡಲಿಲ್ಲ. ತನ್ನ ದೇಶದ ಮಿಲಿಟರಿ ಸರ್ವಾಧಿಕಾರವನ್ನು ಎಲ್ಲ ಕಾಲಗಳಲ್ಲೂ, ಯಾವ ತೆರನ ರಾಜಿಯನ್ನೂ ಮಾಡಿಕೊಳ್ಳದೆ ವಿರೋಧಿಸುತ್ತಿದ್ದವರಲ್ಲಿ ಹಸನ್ ಅಗ್ರಮಾನ್ಯನಾಗಿದ್ದ. ಉರ್ದು ಭಾಷೆಯಲ್ಲಿ ಇದನ್ನೆಲ್ಲಾ ಪ್ರಖರವಾಗಿ ಬರೆದವರು ಆಗ್ಗೆ ಬೇರಾರೂ ಇರಲಿಲ್ಲ.

"ಪಾಕಿಸ್ತಾನದಲ್ಲಿ ಸಾಂಸ್ಕೃತಿಕ ವಿಕಾಸ" ಎಂಬ ಅವನ ಪುಸ್ತಕ ಪ್ರಕಟವಾಗಿ ನಲವತ್ತು ವರ್ಷಗಳು ಕಳೆದಿವೆ. ಅವನ ಕಟುವಿಮರ್ಶೆಯಿಂದಾಗಿ ಅದಕ್ಕೆ ದೊರೆಯಬೇಕಾದ ಮನ್ನಣೆ ದೊರೆತಿಲ್ಲ. ಎಡಪಂಥೀಯರು ಸಹ ಅದನ್ನು ಅಷ್ಟಾಗಿ ಪುರಸ್ಕರಿಸಿಲ್ಲ. ಮೌಲಾನ ಮೌದೂದಿ, ಇಶ್ತಿಯಾಕ್ ಕುರೇಶಿ, ಫೈಜ್ ಅಹ್ಮದ್ ಫೈಜ್, ಮುಂತಾದವರ ಕೊಡುಗೆಗಳನ್ನು ಅವರು ಸ್ಮರಿಸುತ್ತಾರೆ, ಆದರೆ ಹಸನ್‌ನ ಹೆಸರನ್ನು ಬಿಟ್ಟುಬಿಡುತ್ತಾರೆ. ಆರ್ಥಿಕ ಮತ್ತು ರಾಜಕೀಯ ಅಂಶಗಳನ್ನು ವಿಶ್ಲೇಷಿಸುವಾಗ ಸಹ ಗ್ರಾಂಶಿಯಂತೆ ಹಸನ್ ಸಾಂಸ್ಕೃತಿಕ ವಿವರಗಳಿಗೆ ಒತ್ತುಕೊಡುವುದು ಅದಕ್ಕೆ ಒಂದು ಕಾರಣವಿರಬಹುದು. ಸಂಸ್ಕೃತಿಯ ಚರ್ಚೆಯಲ್ಲಿ



ಮತಧರ್ಮದ ವಿಷಯ ಅನಿವಾರ್ಯವಾಗಿ ತೂರಿ ಬರುತ್ತದೆ ಮತ್ತು ಮತಧರ್ಮದ ಜಡ್ಡುತನವನ್ನು ಸಿಬ್ತೇ ಹಸನ್ ನಿರ್ದಾಕ್ಷಿಣ್ಯವಾಗಿ ಟೀಕಿಸುತ್ತಾನೆ. ಅವನ ಬರಹದ ಒಂದು ಭಾಗವನ್ನು ಉದ್ಧರಿಸುವುದು ಸೂಕ್ತವೆನಿಸುತ್ತದೆ :

"ಈಚಿನ ದಿನಗಳಲ್ಲಿ ಸಂಸ್ಕೃತಿಯ ವೈಭವೋಪೇತ ಪ್ರದರ್ಶನಗಳು ಪಾಕಿಸ್ತಾನದಲ್ಲಿ ಸಾಕಷ್ಟು ಹೆಚ್ಚಿವೆ. ಸರ್ಕಾರವು ಆಯೋಜಿಸುವ ವಿಚಾರಗೋಷ್ಠಿಗಳಿಗೇನೂ ಕೊರತೆ ಇಲ್ಲ. ಪಾಕಿಸ್ತಾನದ ಸಂಸ್ಕೃತಿಯನ್ನು ಗುರುತಿಸಲು ಮತ್ತು ಅದಕ್ಕೊಂದು ವ್ಯಕ್ತಿತ್ವ ನೀಡಲು ಪ್ರಯತ್ನಗಳು ಸಾಗಿವೆ. ದೂರದರ್ಶನ ಮತ್ತು ರೇಡಿಯೋಗಳಲ್ಲಿ ಭಾಷಣಗಳು, ಪತ್ರಿಕೆಗಳಲ್ಲಿ ಲೇಖನಗಳು, ಇವೆಲ್ಲಾ ಮಾಮೂಲಾಗಿವೆ. ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ ಸಂಸ್ಕೃತಿಯ ಪಾತ್ರ ಅಗಾಧವಾಗಿದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ, ಆದರೆ ಸಾಂಸ್ಕೃತಿಕ ಸಮಸ್ಯೆಗಳನ್ನು ಈವರೆಗೆ ನಾವು ಉಪೇಕ್ಷಿಸುತ್ತಾ ಬಂದಿದ್ದೇವೆ. ಇಂದಿನ ಚರ್ಚೆಗಳು ಆ ಉಪೇಕ್ಷೆಗೆ ಪರ್ಯಾಯ ಕಾಣುವಲ್ಲಿ ಪೂರ್ತಿಯಾಗಿ ಸೋತಿವೆ. ಆದರೂ ಸಾಹಸಕ್ಕೆ ಕೈಹಾಕಿದ್ದೇವೆ, ಅದನ್ನು ಸ್ವಾಗತಿಸೋಣ. ಈವರೆವಿಗೆ ಕಣ್ಣು ಹಾಯಿಸಿರದಿದ್ದ ಭಾಗವನ್ನು ನೋಡಹೊರಡುವುದು ಸಾಮಾನ್ಯ ವಿಷಯವೇನಲ್ಲ.

"ಪಾಕಿಸ್ತಾನದ ಸಾಂಸ್ಕೃತಿಕ ಸಮಸ್ಯೆಗಳೇನು ? ಅವಕ್ಕೆ ಪರಿಹಾರವೇನು ? ಇದನ್ನು ಕುರಿತಂತೆ ನಮ್ಮ ವಿದ್ಯಾವಂತ ವರ್ಗದಲ್ಲಿ ಬಹಳ ಭಿನ್ನಮತಗಳಿವೆ. ಕೆಲವರ ಪ್ರಕಾರ ಸಮಸ್ಯೆಗಳನ್ನೆಲ್ಲಾ ಮತಧರ್ಮದ ನಿಟ್ಟಿನಲ್ಲೇ ನೋಡಬೇಕು. ಪಾಕಿಸ್ತಾನದ ಸಾಂಸ್ಕೃತಿಕ ಅಡಿಪಾಯವೇ ಮತಧರ್ಮ ಮತ್ತು ಅದೇ ಸರಿಯಾದ ಅಡಿಪಾಯ ಎಂಬುದು ಅವರ ನಿಲುವು. ಆದ್ದರಿಂದ ಇಸ್ಲಾಂನ ಶರಿಯ ಏನಿದೆಯೋ ಅದಕ್ಕನುಗುಣವಾಗಿಯೇ ನಮ್ಮ ಸಂಸ್ಕೃತಿಯ ಎಲ್ಲ ಪ್ರಭೇದಗಳೂ ರೂಪುಗೊಂಡಿರಬೇಕು; ನೃತ್ಯ, ಸಂಗೀತ, ಚಿತ್ರಕಲೆ, ಶಿಲ್ಪಕಲೆ, ಇತ್ಯಾದಿಗಳಿಗೆಲ್ಲಾ ಶರಿಯ ಅಂತಿಮ ನಿರ್ದೇಶಕ ಸೂತ್ರ ಎಂಬುದು ಅವರ ವಾದ. ಇನ್ನು ಕೆಲವರಿದ್ದಾರೆ. ಅವರ ವಾದ ಹೀಗಿರುತ್ತದೆ : ಪಾಕಿಸ್ತಾನದ ನಿರ್ಮಾಣವಾದ್ದು 'ಎರಡು ವಿಭಿನ್ನ ರಾಷ್ಟ್ರಗಳು' ಎಂಬ ಸಿದ್ಧಾಂತದಡಿ, ಆದ್ದರಿಂದ ಅದರ ಸಂಸ್ಕೃತಿಯು ಈ ಸಿದ್ಧಾಂತದಿಂದ ನಿರ್ದೇಶಿತಗೊಳ್ಳಬೇಕು. ಅಂದರೆ, ಭಾರತೀಯ ಸಂಸ್ಕೃತಿಯ ಪ್ರತಿಫಲನವು ಎಳ್ಳಷ್ಟೂ ಇಲ್ಲದಂತೆ ನಮ್ಮ ಸಂಸ್ಕೃತಿಯನ್ನು ಶುದ್ಧೀಕರಿಸಬೇಕು.

"ಹೀಗೆ ವಾದಿಸುವ ಬಣವು ನಮ್ಮ ಸಂಸ್ಕೃತಿಯು ಎಂದೂ ಭಾರತೀಯ ಸಂಸ್ಕೃತಿಯೊಡನೆ ಸಂಬಂಧ ಹೊಂದಿರಲಿಲ್ಲವೆಂದು ಸಾಧಿಸಲು ಏನೇನೋ ಕಸರತ್ತು ಮಾಡುತ್ತದೆ. ಅವೆರಡೂ ಬೇರೆಬೇರೆಯಾಗಿದ್ದವು ಮತ್ತು ಮುಂದೆಯೂ ಹಾಗೆಯೇ ಇರುತ್ತವೆ ಎಂಬುದು ಅದರ ಗಡುಸು ಧ್ವನಿ. ಭಾರತೀಯ ಸಂಸ್ಕೃತಿಯ ಆಕ್ರಮಣ ನಡೆಯದಿರಲೆಂದು ಪಾಕಿಸ್ತಾನದ ಎಲ್ಲೆಗಳಲ್ಲಿ ಬೇಕಾದರೆ ಅವರೊಂದು ಚೀಣಾದ ಮಹಾಗೋಡೆಯನ್ನೇ ನಿರ್ಮಿಸಿಕೊಂಡುಬಿಡುತ್ತಾರೆ.

"ಇದಲ್ಲದೆ ಇನ್ನೂ ಒಂದು ಬಣವಿದೆ. ನಮ್ಮ ಸಾಂಸ್ಕೃತಿಕ ಚೇತನದ ಮಹಾನ್ ಅಭಿವ್ಯಕ್ತಿಯೆಂದರೆ ಪಾಕಿಸ್ತಾನದ ರಾಜ್ಯಪ್ರಭುತ್ವ ; ನಮಗೆ ಒಂದು ಪ್ರಭುತ್ವ, ಒಂದು ಮತಧರ್ಮ, ಒಂದು ರಾಷ್ಟ್ರೀಯ ಭಾಷೆ, ಇವೆ; ಆದ್ದರಿಂದ ನಮಗೆ ಒಂದು ಸಂಸ್ಕೃತಿ ಇದೆ; ಪ್ರಾದೇಶಿಕ ಸಂಸ್ಕೃತಿಗಳ ಸೊಲ್ಲೆತ್ತುವವರು ಪಾಕಿಸ್ತಾನದ ಐಕ್ಯತೆ ಮತ್ತು ಸಮಗ್ರತೆಗಳಿಗೆ ಅಪಾಯ ಉಂಟುಮಾಡುತ್ತಾರೆ, ಎನ್ನುವುದು ಈ ಬಣದ ಅಬ್ಬರ. (ಭಾರತದಲ್ಲಿ ಭಾರತೀಯ ಜನತಾ ಪಕ್ಷ ಮತ್ತು ಅದರ ಅಂಗಸಂಸ್ಥೆಗಳು ಇಂಥದೇ ಆದರ್ಶವನ್ನು ಪ್ರಕಟಿಸುತ್ತಿರುತ್ತವೆ. ಅವಕ್ಕೆ ಪ್ರಾದೇಶಿಕ ಭಾಷೆಗಳು ಮತ್ತು ಸಂಸ್ಕೃತಿ ಎಂದರೆ ಅಪಥ್ಯ. ಅವೆಲ್ಲವನ್ನೂ ಹೊಸಕಿಹಾಕಿ ಒಂದೇ ಭಾಷೆ, ಒಂದೇ ಮತ, ಒಬ್ಬ ವ್ಯಕ್ತಿಯ ಆಳ್ವಿಕೆ ಮತ್ತು ಒಂದೇ ದೇವರನ್ನು ಸ್ಥಾಪಿಸಿಕೊಂಡು ಬಿಟ್ಟರೆ ಅದೇ ರಾಮರಾಜ್ಯ ಎಂಬ ವಿಚ್ಛಿದ್ರಕಾರಿ ಸಿದ್ಧಾಂತದಲ್ಲಿ ಆಸಕ್ತಿಯುಂಟು.)

## ಗುಬ್ಬಚ್ಚಿ ಕತೆ !

ಈ ಮೊದಲು
ಪುಟ್ಟ ಗುಬ್ಬಚ್ಚಿ
ನಗರದಲ್ಲಿ
ಹಾರುತಿತ್ತು ರೆಕ್ಕೆ ಬಿಚ್ಚಿ
ನಗರೀಕರಣಕ್ಕೆ
ಸಿಕ್ಕಿ ಆ ಗುಬ್ಬಚ್ಚಿ
ಈಗ
ನಗರದಲ್ಲಿ ಪೂರ್ತಿ ಅಪ್ಪಚ್ಚಿ

ಗೀತಾಶಾಸ್ತ್ರಿ
ಬೆಂಗಳೂರು – ೨೮

"ಐದನೆಯ ಇನ್ನೊಂದು ಗುಂಪಿನ ದೃಷ್ಟಿಯಲ್ಲಿ ಪಾಕಿಸ್ತಾನವು ನಿಜಕ್ಕೂ ಪೂರ್ಣಾರ್ಥದಲ್ಲಿ ಒಂದು ಚಾರಿತ್ರಿಕ ಸತ್ಯ; ಆದರೆ ಅದರ ಪ್ರಜೆಗಳಿಗೆ ಒಂದು ಭಾಷೆ, ಒಂದು ಮತಧರ್ಮ ಮತ್ತು ಒಂದು ಸಂಸ್ಕೃತಿ ಇಲ್ಲ. ಪಾಕಿಸ್ತಾನವು ಐಕ್ಯತೆ ಹೊಂದಿರುವ ಪ್ರತ್ಯೇಕ ರಾಜ್ಯಗಳ ಒಕ್ಕೂಟ; ಅದರಂತೆಯೇ ಅದರ ಸಂಸ್ಕೃತಿಯಲ್ಲೂ ಒಕ್ಕೂಟದ ಛಾಯೆ ಇದೆ. ಪಾಕಿಸ್ತಾನದ ಸಂಸ್ಕೃತಿ ಎಂಬುದು ಪ್ರಾದೇಶಿಕ ಸಂಸ್ಕೃತಿಗಳನ್ನು ಮೀರಿ ನಿಲ್ಲುವ ಸ್ವರೂಪ ಹೊಂದಿಲ್ಲ, ಆದ್ದರಿಂದ ಅದಕ್ಕೆ ಪ್ರತ್ಯೇಕ ಅಸ್ಮಿತೆ ಇಲ್ಲ.

"ಇನ್ನು ಆರನೆಯ ಬಣದ ದೃಷ್ಟಿ : ಒಂದು ವರ್ಗ ಸಮಾಜದಲ್ಲಿ ಪ್ರತ್ಯೇಕ ವರ್ಗ ಸಂಸ್ಕೃತಿಗಳು ಇರುತ್ತವೆ. ಆದ್ದರಿಂದ ಪಾಕಿಸ್ತಾನದ ಇಲ್ಲವೇ ಪ್ರಾದೇಶಿಕವಾದ ಸಂಸ್ಕೃತಿಗಳ ಬಗೆಗೆ ಯೋಚಿಸುವುದಾದರೆ ಮೊದಲು ನಾವು ಯಾವ ವರ್ಗವನ್ನು ಪುಷ್ಟೀಕರಿಸಲು ಇಚ್ಛಿಸುತ್ತೇವೆಂಬುದು ತೀರ್ಮಾನವಾಗಬೇಕು: ಭಾರಿ ಭೂಮಾಲೀಕರದೋ, ನವಾಬರದೋ, ಶ್ರೀಮಂತರದೋ ಅಥವಾ ಗ್ರಾಮಾಂತರದ ರೈತಾಪಿಗಳದೋ ? ಇನ್ನೂ ಮುಂದುವರಿದು ಹೇಳುವುದಾದರೆ, ನಮಗೆ ಸಾಮ್ರಾಜ್ಯಶಾಹಿಗಳ, ಇಲ್ಲವೇ ಬಂಡವಳಿಗರ, ಇಲ್ಲವೇ ಮಧ್ಯಮ ವರ್ಗದ, ಇಲ್ಲವೇ ಸಾಮಾನ್ಯ ದುಡಿಮೆಗಾರರ ಸಂಸ್ಕೃತಿ ಬೇಕೋ ಎಂಬುದನ್ನು ಖಚಿತಪಡಿಸಿಕೊಳ್ಳಬೇಕು.

"ಏಳನೆಯ ಗುಂಪಿನ ಕಾಣ್ಕೆ ಬೇರೆ ರೀತಿಯದು : ನಾವೀಗ ವಿಜ್ಞಾನ ಮತ್ತು ತಾಂತ್ರಿಕತೆಯ ಯುಗದಲ್ಲಿ ಇದ್ದೇವೆ. ಆದ್ದರಿಂದ ದೇಶದ ಪುನರ್ನಿರ್ಮಾಣ ಮತ್ತು ಪ್ರಗತಿಗೆ ಆಧುನಿಕ ಔದ್ಯಮಿಕ ವ್ಯವಸ್ಥೆಯನ್ನು ಕಟ್ಟಿಕೊಂಡು ಅದನ್ನನುಸರಿಸಬೇಕು. ನಮ್ಮ ಸಮಾಜ ಮತ್ತು ಆರ್ಥಿಕತೆಯನ್ನು ಸಮಾಜವಾದದ ತತ್ತ್ವಗಳ ಆಧಾರದ ಮೇಲೆ ಸಂಘಟಿಸಿಕೊಳ್ಳಬೇಕು; ಇಲ್ಲವಾದರೆ ನಾವು ಬೇರೆಯವರ ಅಧೀನದಲ್ಲಿರಬೇಕಾಗುತ್ತದೆ.

"ಇಷ್ಟೊಂದು ಪರ್ಯಾಯ ವ್ಯಾಖ್ಯಾನಗಳಿರುವಾಗ ಪಾಕಿಸ್ತಾನದ ಸಂಸ್ಕೃತಿ ಯಾವುದು ಮತ್ತು ಅದು ಹೇಗಿರಬೇಕು ಎಂಬುದನ್ನು ತೀರ್ಮಾನಿಸುವ ಮುನ್ನ ಮೂಲತಃ ಸಂಸ್ಕೃತಿಯೆಂದರೆ ಏನೆಂಬ ಸ್ಪಷ್ಟವಾದ ಪರಿಕಲ್ಪನೆ ಅಗತ್ಯ. ಸಂಸ್ಕೃತಿಯನ್ನು ಸಂಮಿಶ್ರಗೊಳಿಸುವ ಅಂಶಗಳು ಯಾವುವು ? ಸಾಂಸ್ಕೃತಿಕ ವಿಕಾಸದ ನಿಯಮವೇನು ? ಪಾಕಿಸ್ತಾನದಲ್ಲಿ ಸಂಸ್ಕೃತಿಯು ಹಾದುಬಂದಿರುವ ಪರ್ವಗಳು ಯಾವುವು ಮತ್ತು ಆ ಪರ್ವಗಳ ವಿಶಿಷ್ಟ ಲಕ್ಷಣಗಳು ಏನಾಗಿದ್ದವು ? ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳದೆ ಸಮಕಾಲೀನ ಸಂದರ್ಭದ ಸಾಂಸ್ಕೃತಿಕ ಸಮಸ್ಯೆಗಳನ್ನು ನಾವು ಅರ್ಥ ಮಾಡಿಕೊಳ್ಳಲಾರೆವು. ಹೀಗಿರುವಾಗ ನಮ್ಮ ಸಾಂಸ್ಕೃತಿಕ ಪ್ರಗತಿಯ ಹಾದಿಯನ್ನು ತೀರ್ಮಾನಿಸಲು ಹೇಗೆ ಸಾಧ್ಯ ? ಸಂಸ್ಕೃತಿ ಎಂದರೇನು ? ಇಂದಿನ ಸಂದರ್ಭದಿಂದ ಅಗಾಧ ಸಾಧ್ಯತೆಗಳತ್ತ ಮಾನವನು ಸಾಗುವುದನ್ನು ಸಂಸ್ಕೃತಿ ಎನ್ನುತ್ತೇವೆ. ಭೂತಕಾಲದಲ್ಲಿ ನಮ್ಮ ಅಂದಿನ ವರ್ತಮಾನಗಳು ಏನಾಗಿದ್ದವು ? ಆ ವರ್ತಮಾನಗಳೆದುರು ಇದ್ದ ಸಾಧ್ಯತೆಗಳು ಯಾವುವು ಮತ್ತು ಆ ವರ್ತಮಾನಗಳು ಸಾಧ್ಯತೆಯ ಯಾವ ರೂಪಗಳನ್ನು ಧರಿಸಿದವು ? ನಾವು ಚರ್ಚೆಯಲ್ಲಿ ತೊಡಗಬೇಕಾದ್ದು ಇವುಗಳ ಬಗ್ಗೆ.

"ಆರ್ಯರ ಆಗಮನದಿಂದ ಹಿಡಿದು ಇಂದಿನವರೆಗೆ ಭಾರತ ಮತ್ತು ಸಿಂಧೂ ಕಣಿವೆಯ ಸಂಸ್ಕೃತಿಗಳು ಮಿಶ್ರಣಗಳಿಂದ ತುಂಬಿಹೋಗಿವೆ ಮತ್ತು ಅವು ಪರಸ್ಪರ ಪ್ರಭಾವಕ್ಕೆ ಒಳಗಾಗಿವೆ. ಹೀಗಾಗಿ, ಭಾರತೀಯ ಸಂಸ್ಕೃತಿಯನ್ನು ಹಿನ್ನೆಲೆಗೆ ಸರಿಸಿ ಪಾಕಿಸ್ತಾನದ ಸಂಸ್ಕೃತಿಯನ್ನು ಅಧ್ಯಯನ ಮಾಡಲಾಗುವುದಿಲ್ಲ. ಆದಾಗ್ಯೂ ಪ್ರಸ್ತುತ ಗ್ರಂಥದಲ್ಲಿ (ಅಂದರೆ, ಸಿಬ್ತೇ ಹಸನ್‌ನ ಪಾಕಿಸ್ತಾನದಲ್ಲಿ ಸಂಸ್ಕೃತಿಯ ವಿಕಾಸ ಎಂಬ ಗ್ರಂಥದಲ್ಲಿ) ಸಿಂಧೂ ಕಣಿವೆಯ ನಿವಾಸಿಗಳಾಗಿದ್ದವರಿಗೆ ಸಂಬಂಧಿಸಿದ ಚಾರಿತ್ರಿಕ ಘಟನೆಗಳು, ಬೆಳವಣಿಗೆಗಳು ಮತ್ತು ಸ್ವರೂಪಗಳನ್ನು ಕೇಂದ್ರೀಕರಿಸಿ ನಾವು ಚರ್ಚೆ ನಡೆಸಲಿದ್ದೇವೆ."

ಸಿಬ್ತೇ ಹಸನ್ ನೀಡಿರುವ ಸಂಸ್ಕೃತಿಯ ವ್ಯಾಖ್ಯೆಯನ್ನು ನೋಡಿ : ಗ್ರಾಂಶಿ ಮುಂತಾದವರು ಅದನ್ನು ಲಕ್ಷೀಕರಿಸುವುದಕ್ಕಿಂತಲೂ ಹೆಚ್ಚಾಗಿ ಹಸನ್ ಅದರ ಅಂಗಗಳನ್ನು ಗುರುತಿಸುತ್ತಾನೆ. ಅವನ ವ್ಯಾಖ್ಯೆ ಹೀಗಿದೆ :

"ಅರ್ಥವತ್ತಾದ ಸೃಷ್ಟ್ಯಾತ್ಮಕತೆ ಮತ್ತು ಸಾಮಾಜಿಕ ಮೌಲ್ಯಗಳ ಒಂದು ವ್ಯವಸ್ಥೆ ಎಲ್ಲ ಸಮಾಜಗಳಲ್ಲೂ



ಇದೆ. ಅದನ್ನೇ ಸಂಸ್ಕೃತಿ ಎನ್ನುತ್ತೇವೆ. ಸಮಾಜದ ಜೀವನ ವಿಧಾನವು ಸಂಸ್ಕೃತಿ; ಚಿಂತನೆ ಮತ್ತು ಭಾವನೆಯ ವಿಧಾನದ ಸತ್ವವು ಸಂಸ್ಕೃತಿ. ಆದ್ದರಿಂದ ಭಾಷೆ, ಸಾಧನೆಗಳು ಮತ್ತು ಸಲಕರಣೆಗಳು, ಉತ್ಪಾದನಾ ವಿಧಾನಗಳು ಮತ್ತು ಸಾಮಾಜಿಕ ಸಂಬಂಧಗಳು, ಜೀವನ ವಿಧಾನ, ಕಲಾವೈವಿಧ್ಯ, ಜ್ಞಾನ ಮತ್ತು ಸಾಹಿತ್ಯ, ತತ್ತ್ವಶಾಸ್ತ್ರ ಮತ್ತು ತಿಳಿವು, ನಂಬಿಕೆಗಳು ಮತ್ತು ಮಾಂತ್ರಿಕತೆ, ನಡವಳಿಕೆ ಮತ್ತು ವಾಡಿಕೆಗಳು, ಆಚರಣೆಗಳು ಮತ್ತು ಸಂಪ್ರದಾಯಗಳು, ಪ್ರೀತಿ – ಪ್ರೇಮಗಳ ಸಂವೇದನೆ, ಕೌಟುಂಬಿಕ ಸಂಬಂಧಗಳು, ಇತ್ಯಾದಿಗಳೆಲ್ಲಾ ಸಂಸ್ಕೃತಿಯ ವಿಭಿನ್ನ ಅಭಿವ್ಯಕ್ತಿಗಳು."

ಸಂಸ್ಕೃತಿಗೆ ಈ ವ್ಯಾಖ್ಯೆ ನೀಡಿ ಹಸನ್ ಸಂಸ್ಕೃತಿಯ ಅಂಶಗಳ ಸಮಿಶ್ರಣದತ್ತ ಗಮನ ಹರಿಸುತ್ತಾನೆ. ವಿಶ್ವದ ಎಲ್ಲ ಪ್ರಾಚೀನ ಮತ್ತು ಆಧುನಿಕ ಸಂಸ್ಕೃತಿಗಳ ಆಧಾರವೇ ಇದು. ಅದರಲ್ಲಿ ಭೌತಿಕ ಸನ್ನಿವೇಶಗಳು, ಸಾಧನೆಗಳು ಮತ್ತು ಉಪಕರಣಗಳು, ಚಿಂತನೆ ಮತ್ತು ಭಾವನೆಗಳ ವ್ಯವಸ್ಥೆ ಮತ್ತು ಸಾಮಾಜಿಕ ಮೌಲ್ಯಗಳು, ಎಲ್ಲಾ ಸಮ್ಮಿಳಿತವಾಗಿವೆ. ಈ ನೆಲೆಯಲ್ಲಿ ನಿಂತು ಹಸನ್ ಬಹುವಿಶಾಲವಾದ ಹರಹಿನ ಸಮೀಕ್ಷೆ ನಡೆಸುತ್ತಾನೆ: ಸಿಂಧೂ ನಾಗರಿಕತೆ, ಆರ್ಯರು, ಗ್ರೀಕರು, ಶಕರು, ಕುಶಾನರು, ಇವರೆಲ್ಲರ ಪ್ರಾಚೀನ ಸಂಸ್ಕೃತಿಗಳು ಮತ್ತು ಪ್ರಭಾವಗಳು, ಅರಬ್ಬರು, ತುರ್ಕಿಗಳು, ಇರಾನಿನವರು, ಮೊಗಲರ ಏಳಿಗೆ ಮತ್ತು ಅವನತಿ, ಇವೆಲ್ಲವುಗಳ ಪರಾಮರ್ಶೆಯು ಸಂಸ್ಕೃತಿಯ ಅಧ್ಯಯನದ ಅವಿಚ್ಛಿನ್ನ ಭಾಗ. ಇದರ ನಂತರ ಸಮಕಾಲೀನ ಪಾಶ್ಚಾತ್ಯ ಸಂಸ್ಕೃತಿಯ ಕನ್ನಡಿಯಲ್ಲಿ ಮೊಗಲ್ ಸಂಸ್ಕೃತಿಯ ಬಗೆಗಿನ ಆಲೋಚನೆಗಳನ್ನು ಬೆಳೆಸುವುದು, ಇದೆಲ್ಲಾ ಪಾಕಿಸ್ತಾನದ ಸಂಸ್ಕೃತಿಯ ಅಧ್ಯಯನಕ್ಕೆ ಪರಿಕರಗಳು.

ಪಾಕಿಸ್ತಾನ ಸಂಸ್ಕೃತಿಯ ವಿಕಾಸ ಎಂಬ ಹಸನ್‌ನ ಗ್ರಂಥ ಹೊರಬಂದಿದ್ದು ೧೯೭೦ರ ದಶಕದ ಮಧ್ಯಭಾಗದಲ್ಲಿ. ಆಗ ಝುಲ್ಫಿಕರ್ ಆಲಿ ಭುಟ್ಟೋ ನೇತೃತ್ವದ ಪ್ರಜಾಪ್ರಭುತ್ವವಾದಿ ಸರ್ಕಾರ ಅಸ್ತಿತ್ವದಲ್ಲಿತ್ತು. ಎಡ ಮತ್ತು ಬಲಪಂಥಗಳೆರಡರಲ್ಲೂ ಪಾಕಿಸ್ತಾನಿ ಸಂಸ್ಕೃತಿಯ ವ್ಯಾಖ್ಯೆಯ ಬಗ್ಗೆ ಅಪಾರ ಚರ್ಚೆಗಳು ನಡೆಯುತ್ತಿದ್ದ ಕಾಲ ಅದು. ಆ ಸಂದರ್ಭದಲ್ಲಿ ಪಾಕಿಸ್ತಾನದ ಸಂಸ್ಕೃತಿಯ ವಿಕಾಸವನ್ನು ಕುರಿತು ಪಂಥವನ್ನು ಮೀರಿದ ಮಾನಸಿಕ ಸಮತೋಲನದಿಂದ ಹಸನ್ ಬರೆದ. ಯಾವ ಭಾವೋದ್ರೇಕವೂ ಇಲ್ಲದೆ ಐದು ಸಾವಿರ ವರ್ಷಗಳ ನಾಗರಿಕತೆಯು ಬೆಳೆದುಬಂದ ಬಗೆಯನ್ನು ವೈಜ್ಞಾನಿಕವಾಗಿ ಮತ್ತು ವಿಕಾಸ ಪದ್ಧತಿಗನುಗುಣವಾಗಿ ಅವನು ವಿವರಿಸಿ ಹೇಳಿದ. ಅವನ ಈ ಪದ್ಧತಿಯಿಂದಾಗಿ ಪಾಕಿಸ್ತಾನದ ಮತ್ತು ಭಾರತದ ಸಾಂಸ್ಕೃತಿಕ ವಿಕಾಸದ ಚರಿತ್ರೆಯು ಕೆಳಸ್ತರದವರ ಕಣ್ಣಲ್ಲಿ ಕಂಡ ಆಖ್ಯಾನವಾಗುತ್ತದೆ, ಜನತೆಯ ಇತಿಹಾಸವಾಗುತ್ತದೆ. ರಾಜರ ಮತ್ತು ಸಾಮಂತರ ಆಳ್ವಿಕೆ ಮತ್ತು ಸಾಹಸಗಳು, ಅರಮನೆಗಳೊಳಗಿನ ಕಿತಾಪತಿಗಳು, ಇವು ಸಾಮಾನ್ಯವಾಗಿ ಬೋಧಿಸಲಾಗುವ ಇತಿಹಾಸದ ಹುರುಳು. ಹಸನ್ ಬರೆದ ಇತಿಹಾಸವು ಇವನ್ನು ಗೌಣವಾಗಿಸಿ ವಿಕಾಸವನ್ನು ಜನಸಾಮಾನ್ಯರ ಇತಿಹಾಸವನ್ನಾಗಿಸಿದೆ. ಸಿಬ್ತೇ ಹಸನ್ ಮಾರ್ಕ್ಸ್‌ವಾದಿ ಚೌಕಟ್ಟನ್ನು ಬಳಸಿಕೊಂಡನೆಂಬುದು ನಿಜ; ಆದರೆ ಶತಮಾನಗಳುದ್ದಕ್ಕೂ ಆಗಿಂದಾಗ್ಗೆ ಆವಿಷ್ಕಾರಗೊಂಡ ಸಾಂಸ್ಕೃತಿಕ ಸೂಕ್ಷ್ಮಗಳನ್ನು ವಿವರಿಸುವಾಗ ಎಲ್ಲೂ ಸ್ವೀಕೃತ ಗೊಡ್ಡು ಅಭಿಪ್ರಾಯಗಳಿಗೆ ಕಟ್ಟು ಬೀಳಲಿಲ್ಲ. ಮೊಹೆಂಜೊದಾರೊ ನಾಗರಿಕತೆಯ ಕಾಲದಿಂದ ನಮ್ಮ ಇಂದಿನ ಕಾಲದವರೆಗೆ ವರ್ಗ ಸಮಾಜವು ನಿರಂತರವಾಗಿ ಹೆಚ್ಚು ಕಡಿಮೆ ಏಕಪ್ರಕಾರವಾಗಿ ಹೇಗೆ ಸಾಗಿಬಂದಿದೆ ಎಂಬುದನ್ನು ಸರಳವಾಗಿ ಮತ್ತು ಅಧಿಕಾರಯುತವಾಗಿ ಹಸನ್ ಗಟ್ಟಿಧ್ವನಿಯಲ್ಲಿ ನಿರೂಪಿಸಿದ್ದಾನೆ. ಎರಡನೆಯದಾಗಿ, ನಮ್ಮ ಉಪಖಂಡದ ಚರಿತ್ರೆಯಲ್ಲಿ ಮತಧರ್ಮ ಮತ್ತು ರಾಜಕೀಯ ಬೇರ್ಪಡಿಸಲಾಗಿದೆ ಎಂಬುದನ್ನು ಹಸನ್ ಸ್ಥಾಪಿಸಲು ಶ್ರಮಿಸಿದ್ದಾರೆ. ಉದಾಹರಣೆಗೆ, ದೆಹಲಿಯಲ್ಲಿ ಮಾಮ್ಲುಕ್ ಸಂತತಿಯ ಪ್ರಬಲ ದೊರೆ ಘಿಯಾಸುದ್ದೀನ್ ಬಾಲ್ಬನ್ ತನ್ನ ನೀತಿಯಾಗಿಸಿಕೊಂಡಿದ್ದುದು ಪ್ರಭುತ್ವದ ಸಂಗತಿಗಳು ದೇಶೀಯ ಅವಶ್ಯಕತೆಗಳನ್ನಾಧರಿಸಬೇಕೇ ವಿನಾ ಯಾವುದೋ ದೇವತಾಶಾಸ್ತ್ರದ ನಿಯಮಗಳನ್ನಲ್ಲ ಎಂದು. ಹಸನ್ ಹೇಳುವಂತೆ, "ಆಳುವ ಜನ ಮತಧರ್ಮವನ್ನು ತಮ್ಮ ವರ್ಗದ ಏಳಿಗೆಗೆ ಬಳಸಿಕೊಂಡರು. ಅದಕ್ಕೆ ಮೌಲ್ವಿಗಳು, ಪಂಡಿತರು, ಪಾದ್ರಿಗಳು, ಹೀಗೆ ಯಾರ ಸೇವೆಯನ್ನು ಬೇಕಾದರೂ ಪಡೆಯಲು ಸಿದ್ಧರಿರುತ್ತಿದ್ದರು. ಆದರೆ ಮತಧರ್ಮದ ಪ್ರತಿನಿಧಿಗಳನ್ನು ತಮ್ಮ ಯಜಮಾನರನ್ನಾಗಿ ಸ್ವೀಕರಿಸಲು ಅವರು ಸಿದ್ಧರಿರಲಿಲ್ಲ."

ಸಿಬ್ತೇ ಹಸನ್‌ನ ಕೃತಿಯ ನಿರೂಪಣೆಯ ಮೂರನೆಯ ವೈಶಿಷ್ಟ್ಯವೇನೆಂದರೆ ನಮ್ಮ ಉಪಖಂಡದ ಜನಪ್ರಿಯ ಚಳುವಳಿಗಳನ್ನು ಕುರಿತ ಚರ್ಚೆಗೆ ಅದು ಮೀಸಲಾಗಿರುವುದು. ಸಾಮಾನ್ಯವಾಗಿ ಭಕ್ತಿ ಚಳುವಳಿಯನ್ನು 'ಹಿಂದು ಚಳುವಳಿ' ಎಂದು ಹೆಸರಿಸಿ ಅದನ್ನು ತಳ್ಳಿಹಾಕುವುದುಂಟು. ಹಸನ್ ತೋರಿಸಿರುವಂತೆ ಅದು ಹಿಂದು–ಮುಸಲ್ಮಾನರ ಕೆಳವರ್ಗಗಳು ನಡೆಸಿದ ಜಂಟಿ ಚಳುವಳಿ. ಅದರ ಪ್ರವರ್ತನಕಾರರು ಮುಸಲ್ಮಾನ ಸೂಫಿಗಳು. ಹಸನ್‌ನ ಮಾತುಗಳಿವು: "ಇದು ಶರಿಯಾದ ಉಲ್ಲಂಘನೆ. ಅದಕ್ಕೆ ಎದೆಗಾರಿಕೆ ಬೇಕು, ತಮ್ಮದೇ ಹಾದಿಯನ್ನು ಕಂಡುಕೊಂಡಿದ್ದ ಸೂಫಿಗಳು ಅದನ್ನು ಮಾಡಬಲ್ಲವರಾಗಿದ್ದರು. 'ಏಳು ನಂಬುಗೆಗಳ ಪಂಥ'ವೆಂಬ ಭಕ್ತಿ ಚಳುವಳಿಯ ಸ್ಥಾಪಕ ಸೈಯಿದ್ ಇಮಾಂ–ಉದ್–ದಿನ್ ಇಸ್ಮೈಲಿ. ಜನರು ಪ್ರೇಮದ ಆರಾಧಕರಾದರೆ ಎಲ್ಲ ಆಚರಣೆಗಳ ಪ್ರದರ್ಶನವನ್ನೂ ನಿಲ್ಲಿಸಿ ದೇವ–ಮಾನವರ ನಡುವೆ ಸಾಮರಸ್ಯವನ್ನು ಕಾಣಬಹುದು. ... ಆಶಯವೇನೋ ಮಹತ್ತರವಾದ್ದು, ಆದರೆ ಈ ಭಕ್ತರಿಗೆ ಜಾತಿ ವಿಭಜನೆಯ ಹಿಂದಿನ ಆರ್ಥಿಕ ಸಂರಚನೆಯ ತಿಳಿವು ಇರಲಿಲ್ಲ. ಉಚ್ಚ ಮತ್ತು ನೀಚ ಎಂಬುದರ ವ್ಯತ್ಯಾಸವು ಅವರಿಗೆ ಗಣನೀಯ ಪ್ರಮಾಣದಲ್ಲಿ ಅರಿವಾಗಲಿಲ್ಲ. ಅಂದಂದಿನ ಆಳ್ವಿಕೆ ನಡೆಸುತ್ತಿದ್ದವರ ವಿರುದ್ಧ ಹೋರಾಡಬೇಕೆಂಬುದಾಗಲಿ, ಸಾಮಾಜಿಕ ಸುಧಾರಣೆಯಾಗಬೇಕಾದರೆ ಉನ್ನತ ವರ್ಗಗಳ ವಿರುದ್ಧ ಸೆಣಸಬೇಕೆಂದಾಗಲಿ ಇವರು ಆಶಿಸಲಿಲ್ಲ. ಅವರಿಗೆ ಹೃದಯ ಪರಿವರ್ತನದ ಹಾದಿ ಸಾಕಾಗಿತ್ತು ಮತ್ತು ಅದು ಪ್ರೇಮ ಹಾಗೂ ಭಕ್ತಿಯಿಂದ ಲಭಿಸುತ್ತದೆಂದು ಅವರು ಭಾವಿಸಿದ್ದರು. ಉನ್ನತ ಮತ್ತು ಮಧ್ಯಮ ವರ್ಗಗಳು ಇದಕ್ಕೆ ಬೆಂಬಲ ನೀಡಲಿಲ್ಲ."

ಭಕ್ತಿ ಚಳುವಳಿ ಮತ್ತು ಉರ್ದು ಭಾಷೆಯ ಬೆಳವಣಿಗೆ ಸಾಗಿದ್ದು ಈ ಹಾದಿಯಲ್ಲಿಯೇ. ಅದು ಹಿಂದು–ಮುಸಲ್ಮಾನರ ಐಕ್ಯತೆಯ ಒಂದು ಸಂಕೇತವಾಗಿತ್ತು. ಉರ್ದು ಎಂದೂ ಕೇವಲ ಭಾರತೀಯ ಮುಸಲ್ಮಾನರ ಭಾಷೆಯಾಗಲಿಲ್ಲ. ಹಸನ್ ಚರ್ಚಿಸುವ ಇನ್ನೊಂದು ಚಳುವಳಿ "ರೋಶನೀಯ" ಎಂಬುದು. ಅದರ ಸ್ಥಾಪಕ 'ಪೀರ್–ಎ–ರೋಶನ್' ಬಯಾಸಿದ್ ಅನ್ಸಾರಿ. ಅಕ್ಬರನ ಕಾಲದವನಾದ ಅವನು ಸಮಾನತೆಗಾಗಿ ಚಳುವಳಿ ಆರಂಭಿಸಿದ್ದವನು. ಅವನನ್ನು ಚಿತ್ರಿಸುವಾಗಲೂ ಇತಿಹಾಸಕಾರರು ಎಡವಿದ್ದಾರೆ. ಅವನೊಬ್ಬ ಪಾಷಂಡಿ, ಧರ್ಮರಹಿತ, ಡಕಾಯಿತ ಎಂದೆಲ್ಲಾ ಅವನ ಬಗ್ಗೆ ಹೇಳಲಾಗಿದೆ. ಮೊಗಲರ ಮತ್ತು ಪಖ್ತೂನರ ನಡುವಣ ಸತತ ವೈರುಧ್ಯದಿಂದಾಗಿ ಅವನಿಗೆ ಇಂತಹ "ಬಿರುದು" ಸಿಕ್ಕಿತ್ತು. ಪಖ್ತೂನರು ಮೊಗಲರ ಆಧಿಪತ್ಯವನ್ನು ನಿರಾಕರಿಸಿದ್ದರು. ಅವಕಾಶವಿದ್ದಾಗಲೆಲ್ಲ ಅದರ ವಿರುದ್ಧ ಬಂಡೆದ್ದಿದ್ದರು. ಪೀರ್ ರೋಶನ್‌ನದು ಮತಧಾರ್ಮಿಕ ಚಳುವಳಿಯ ರೂಪ ಹೊಂದಿತ್ತು. ಆದರೆ ಉತ್ತರದ ಗಡಿಭಾಗದವರ ಮೊದಲ ಸ್ವಾತಂತ್ರ್ಯ ಆಂದೋಲನ ಅದಾಗಿತ್ತು. ಅದೊಂದು ಜನಯುದ್ಧ, ಪಖ್ತೂನರ ಮೇಲಿನ ಮೊಗಲ್ ಆಳ್ವಿಕೆಯನ್ನು ನಿರಾಕರಿಸುವ ಯುದ್ಧ, ಪಖ್ತೂನರ ಬುಡಕಟ್ಟುಗಳ ಸ್ವತಂತ್ರ, ಸ್ವಾಯತ್ತ ಜೀವನದ ಹಳವಳಿಕೆ. ಈ ರೀತಿ ವ್ಯಾಖ್ಯಾನಿಸಿರುವುದನ್ನು ನೋಡಿದರೆ ಹಸನ್ ಏನಾದರೂ ಇಂದಿನ ತಾಲಿಬಾನರ ಪ್ರಚೋದಕನೋ ಎನಿಸೀತು, ಆದರೆ ವಾಸ್ತವ ಅದಲ್ಲ. ಪಶ್ತೋ ಸಾಹಿತ್ಯ ಮತ್ತು ಸಂಗೀತದಲ್ಲಿ ಪೀರ್ ರೋಶನ್‌ಗೆ ಉಚ್ಚಸ್ಥಾನವಿದೆ. ಅವನಿಗೆ ಮುಂಚೆ ಕಸೀದ, ಗಜ಼ಲ್, ಕತಾಅ, ಮಸ್ನವಿ ಮುಂತಾದ

ಸಂಪ್ರದಾಯಗಳು ಪಶ್ತೋ ಭಾಷೆಯಲ್ಲಿ ಇರಲಿಲ್ಲ. ಪೀರ್ ರೋಶನ್ ಈ ಎಲ್ಲ ಪ್ರಕಾರಗಳಲ್ಲೂ ಪದ್ಯಗಳನ್ನು ರಚಿಸಿ ಹಾಡಿದ್ದಾನೆ.

ಇಸ್ಮೈಲಿ ಮತ್ತು ಪೀರ್ ರೋಶನ್‌ರ ಎರಡು ಚಳುವಳಿಗಳೂ ಧರ್ಮನಿರಪೇಕ್ಷ ಹಾಗೂ ಜನಪ್ರಿಯವಾಗಿದ್ದಾಗ್ಯೂ ಅವು ನೆಲೆ ನಿಲ್ಲಲಿಲ್ಲ. ಒಂದು ವಿಚಾರದ ಸಂಘರ್ಷದಲ್ಲಿ ಸೋತಿತು ಮತ್ತು ಇನ್ನೊಂದು ರಣಾಂಗಣದಲ್ಲಿ ನೆಲಕಚ್ಚಿತು.

ಸಿಬ್ತೇ ಹಸನ್‌ನ ಪ್ರತಿಪಾದನೆಗಳಲ್ಲಿ ಮತ್ತು ಇತಿಹಾಸ ರಚನೆಯಲ್ಲಿ ಮಹಿಳೆಗೆ ಗಹನವಾದ ಸ್ಥಾನವಿದೆ. ಇಂದಿನ ಮುಸಲ್ಮಾನ ಗುಂಪುಗಳಲ್ಲಿ ಮಹಿಳೆಯ ಸ್ಥಾನವನ್ನು ನೋಡಿದರೆ ಹಸನ್ ನಿರೀಕ್ಷೆ ಗುಣಾತ್ಮಕವಾಗಿ ಹೇಗೆ ಭಿನ್ನವೆಂದು ಚೆನ್ನಾಗಿ ಮನದಟ್ಟಾಗುತ್ತದೆ. "ಉಚ್ಚ ಮತ್ತು ಮಧ್ಯಮ ವರ್ಗದ ಮಹಿಳೆಯರು ಬುರ್ಖಾದ ಹಿಂದೆ ಚೈತನ್ಯರಹಿತರಾಗಿದ್ದರು" ಎನ್ನುತ್ತಾನೆ ಹಸನ್. ಹಿಂದು ಸಮಾಜದಲ್ಲಿ ನೃತ್ಯ ಮತ್ತು ಸಂಗೀತ ಎರಡೂ ಪ್ರಾರ್ಥನೆ ಮತ್ತು ಪುಣ್ಯ ಎರಡಕ್ಕೂ ಪ್ರಶಸ್ತ; ಮುಸಲ್ಮಾನರಲ್ಲಿ ಅವು ವಿಷವೃಕ್ಷಗಳಂತೆ ಪರಿಗಣನೆಗೆ ಬಂದವು. ಅದಕ್ಕೆ ಮುಲ್ಲಾಗಳ ಫತ್ವಾಗಳು ಕಾರಣ. ಮುಸಲ್ಮಾನರಲ್ಲಿ ಶ್ರೀಮಂತರು ನೃತ್ಯ ಮತ್ತು ಸಂಗೀತದ ಪೋಷಕರಾದ್ದು ಆರಂಭದಲ್ಲಿ ಕದ್ದು ಮುಚ್ಚಿಯೇ. ಅದು ಪರ್ಯವಸಾನವಾದ್ದು ಕಾಮಕೇಳಿಗಳ ಆಗರವಾಗಿ !

ಸಿಬ್ತೇ ಹಸನ್ ಮೊಗಲರ ಯುಗವನ್ನು ಸಾರಾಸಗಟಾಗಿ ನಿಂದಿಸಿ ತಳ್ಳಿಹಾಕುವುದಿಲ್ಲ ; ಬದಲಾಗಿ, ಅದರ ಪ್ರಭಾವವನ್ನು ಗುರುತಿಸುತ್ತಾನೆ. ಔರಂಗಜೇಬನ ಬಗೆಗೆ ಅವನು ಬರೆದಿರುವುದು ಈ ದೃಷ್ಟಿಯಿಂದ ಗಮನಾರ್ಹವಾದ್ದು. ಇತಿಹಾಸಕಾರರು ಅವನನ್ನು ಹಿಂದಿನ ನಾಲ್ಕು ಕಲೀಫರ ಪರಂಪರೆಯವನೆಂದು ಪರಿಗಣಿಸಿ ಜಡ್ಡು ಮನಸ್ಸಿನವನೆಂದು ದೂರುತ್ತಾರೆ, ಇಲ್ಲವೇ ತಂದೆಯನ್ನು ಹಾಗೂ ಸಹೋದರರನ್ನು ಕೊಂದು ಸಿಂಹಾಸನವನ್ನೇರಿದ ಕ್ರೂರಿ ಎಂದು ತೆಗಳುತ್ತಾರೆ. ಸಿಬ್ತೇ ಹಸನ್ ಅಪ್ಪಟ ಧರ್ಮನಿರಪೇಕ್ಷತೆಯ ಪರವಾದವನು. ಆದಾಗ್ಯೂ ಅವನು ಕಡ್ಡಿ ಮುರಿದಂತೆ ಔರಂಗಜೇಬನನ್ನು ಒಂದು ನಿರ್ದಿಷ್ಟ ಛಾಯೆಯವನೆಂದು ತೀರ್ಮಾನಿಸುವುದಿಲ್ಲ. ಔರಂಗಜೇಬ್ ಮತ್ತು ವೈಚಾರಿಕತೆಗೆ ಹೆಸರಾಗಿದ್ದ ಅವನ ಸೋದರ ದಾರಾ ಶಿಕೋ ಇವರ ಬಗ್ಗೆ ಹಸನ್‌ನ ಮಾತುಗಳನ್ನು ಗಮನಿಸಿ : "ಅಂತರ್ಯುದ್ಧದಲ್ಲಿ ಔರಂಗಜೇಬ್ ಗೆದ್ದ ಮತ್ತು ದಾರಾ ಶಿಕೋ ಸೋತ. ಅದಕ್ಕೆ ಅವರ ಸಮಕಾಲೀನ ಸನ್ನಿವೇಶಗಳೂ ಒಂದು ಕಾರಣ. ಯಾವಾಗಲೂ ಶರಿಯಾ ಎತ್ತಿಹಿಡಿದ ಔರಂಗಜೇಬ್ ತನ್ನ ಸೋದರರನ್ನು ಮತ್ತು ತಂದೆಯನ್ನು ಸೆರೆಮನೆಗೆ ದೂಡಿದ, ವೈಯ್ಯಕ್ತಿಕ ಸರ್ವಾಧಿಕಾರವನ್ನು ಮೆರೆದ. ಶರಿಯಾ ಆರಾಧಕನೊಬ್ಬ ಹಾಗೆ ಮಾಡಬಹುದಿತ್ತೆ ? ಇಲ್ಲ, ಆದರೆ ಪಾಶ್ಚಾತ್ಯ ಮತ್ತು ಪೌರ್ವಾತ್ಯ ದೇಶಗಳಲ್ಲಿ ಅಂತಹ ಅನೇಕ ಘಟನೆಗಳು ನಡೆದುಹೋದವು. ಸಿಂಹಾಸನ ಮತ್ತು ಕಿರೀಟ ಗಳಿಸಿಕೊಳ್ಳಲು ರಕ್ತಪಾತ ಮಾಡುವುದರಲ್ಲಿ ಹೊಸತೇನೂ ಇರಲಿಲ್ಲ. ದಾರಾ ಶಿಕೋ ಗೆದ್ದಿದ್ದರೆ ಔರಂಗಜೇಬನಿಗೆ ಅವನು ಮಾಡಿರುತ್ತಿದ್ದುದೂ ಅಂಥದೇ !"

ಮೊಗಲರ ಪತನ ಮತ್ತು ಬ್ರಿಟಿಷರ ವಸಾಹತುಶಾಹಿ ಆಳ್ವಿಕೆ ಉಂಟಾದದ್ದು ಹೇಗೆ ? ಸಿಬ್ತೇ ಹಸನ್ ಇದಕ್ಕೆ "ಮೊಗಲರ ವೈಜ್ಞಾನಿಕ ಮತ್ತು ವ್ಯಾಪಾರಸಂಬಂಧಿ ಅಲ್ಪದೃಷ್ಟಿಯು" ಕಾರಣವೆನ್ನುತ್ತಾನೆ. ಅಂದರೆ, ಮೊಗಲರ ಕಾಲದಲ್ಲಿ ಪ್ರಚಲಿತವಾಗಿದ್ದ ಊಳಿಗಮಾನ್ಯ ಉತ್ಪಾದನಾ ಪದ್ಧತಿ ಅದಕ್ಕೆ ಕಾರಣ. ತನಗೆ ತಾನು ಸ್ವಾವಲಂಬಿ ಎಂಬ ಭಾವನೆ ಇದರಿಂದ ಮೂಡಿತ್ತು. ಟರ್ಕಿಯ ಆಟೋಮನ್ ಸಾಮ್ರಾಜ್ಯವು ಸಹ ಹೀಗೆಯೇ ನಶಿಸಿಹೋದದ್ದು. ದೂರದೃಷ್ಟಿಯುಳ್ಳವನೆಂದು ಹೇಳಲಾಗುತ್ತಿದ್ದ ಅಕ್ಬರ್ ಆಧುನಿಕ ಮುದ್ರಣಾಲಯಗಳ ಸ್ಥಾಪನೆಯನ್ನು ವಿರೋಧಿಸಿದ. ಅದರ ತಿಳಿವಳಿಕೆ ಪಡೆಯುವ ಸಹನೆಯೂ ಅವನಿಗಿರಲಿಲ್ಲ. ಅದೊಂದು ಚಾರಿತ್ರಿಕ ಪ್ರಮಾದ. ಅದಕ್ಕೆ ಅವನು ಕೊಟ್ಟ ಕಾರಣ "ನನ್ನ ಹಸ್ತಪ್ರತಿ ಲೇಖಕರ ಮುದ್ದಾದ ಅಕ್ಷರಗಳೆದುರು ಈ ಮುದ್ರಣಾಲಯ ಏನು ಮಹಾ", ಎಂಬುದು. ಈ ಅಮಾಯಕ ಲೇಖಕರು ನಿರುದ್ಯೋಗಿಗಳಾಗಿ ಬಿಡುತ್ತಾರೆಂಬ ಆಂತಕ ಅವನದಾಗಿದ್ದಿತಂತೆ !

"ಆವಿಷ್ಕಾರ ಮತ್ತು ನವೀಕರಣ ಪ್ರಕ್ರಿಯೆ ಇಲ್ಲದೆ ಸ್ವಯಂಪೂರ್ಣವೆಂದು ಭ್ರಮಿಸಿದ್ದ ಮೊಗಲ್ ಸಂಸ್ಕೃತಿ ಅವನತಿ ಹೊಂದಿದ್ದು ಸಹಜ. ಶತಮಾನಗಳ ಕಾಲ ಬದಲಾಗದೆ ಉಳಿದಿದ್ದ ಸಲಕರಣೆಗಳು ಮತ್ತು ಸಾಧನಗಳು ಆ ಊಳಿಗಮಾನ್ಯ ಪದ್ಧತಿಯಲ್ಲಿ ಪ್ರಗತಿಗೆ ಅವಕಾಶ ಕಲ್ಪಿಸುವಂತಿರಲಿಲ್ಲ. ಸರ್ವಾಧಿಕಾರದಂತಿದ್ದ ಅಂದಿನ ವ್ಯಕ್ತಿಕೇಂದ್ರಿತ ಆಡಳಿತದಲ್ಲಿ ರಾಜ ಮತ್ತು ಅವನ ಊಳಿಗದ ಪ್ರತಿಷ್ಠಿತರು ದೇಶದ ಭವಿಷ್ಯವನ್ನು ನಿರ್ಧರಿಸುತ್ತಿದ್ದರು; ಯಾವ ಹಂತದಲ್ಲೂ ಆಳ್ವಿಕೆಗೊಳಗಾದವರಿಗೆ ಪ್ರಾತಿನಿಧ್ಯ ವಿರಲಿಲ್ಲ, ಪ್ರಭುತ್ವದ ವಿಷಯಗಳಲ್ಲಿ ಅವರು ಮಧ್ಯಪ್ರವೇಶ ಮಾಡುವಂತಿರಲಿಲ್ಲ. ವಿದ್ಯಾವಂತರು ಸಹ ಕೂಪಮಂಡೂಕ ಗಳಾಗಿ ಬಿಟ್ಟಿದ್ದರು, ವಿಚಾರ ಮಾಡುವ ಸ್ವಭಾವವೇ ಕಳೆದು ಹೋಗಿತ್ತು. ಆ ಕಾಲಕ್ಕೆ ಬ್ರಿಟಿಷರೇನಾದರೂ ಬಾರದಿದ್ದರೆ ಏಷ್ಯದ ನಮ್ಮ ರೋಗಿ ದೇಶ ಚೀಣಾದಂತೆ ಇನ್ನೂ ನೂರಿನ್ನೂರು ವರ್ಷ ಹಾಗೇ ತೆವಳುತ್ತಿರುತ್ತಿತ್ತು. ಈ ವೃದ್ಧ ರೋಗಿಗೆ ಕಣ್ಣುಗಳಿದ್ದವು. ಆದರೆ ಕೈಕಾಲು ಸೇದಿಹೋಗಿದ್ದವು. ತಾನೇ ಏನನ್ನೂ ಮಾಡಲಾರ, ಆದರೆ ದೃಷ್ಟಿ ಮಾತ್ರ ಕಾಮುಕನದು.

"ಅಂದರೆ, ಸಾಮಾಜಿಕ ನಿಷ್ಕ್ರಿಯೆ ಅಂದಿನ ಚಿಂತನೆ ಮತ್ತು ನಂಬಿಕೆಗಳಲ್ಲಿ ತುಂಬಿಹೋಗಿತ್ತು. ಸ್ಥಗಿತ ಸಮಾಜದಲ್ಲಿ ಹೊಸ ಚಿಂತನೆಯ ಪರಿಮಳ ಹೇಗೆ ಸಾಧ್ಯ ! ಭಾವಿಯಲ್ಲಿ ಇನ್ನೆಂತಹ ಅಲೆಗಳು ಮೂಡಿಯಾವು ! ಅಂತೆಯೇ ತಹತಹಿಕೆ, ಆಕಾಂಕ್ಷೆ, ವಿಚಾರಪ್ರಿಯತೆ, ಬದಲಾವಣೆಗೆ ತುಡಿತ, ಎಲ್ಲವೂ ಕಮರಿ ಹೋಗಿದ್ದವು. ಹಿಂದು ಆಗಲಿ, ಮುಸಲ್ಮಾನನಾಗಲಿ, ೧೭–೧೮ನೆಯ ಶತಮಾನದ ಭಾರತದಲ್ಲಿ ಹಣೆಬರಹದ ಗಾಳಕ್ಕೆ ಸಿಲುಕಿಬಿಟ್ಟಿದ್ದ. ಮತಧರ್ಮದ ಪಂಡಿತ, ಸೂಫ಼ಿ, ಸನ್ಯಾಸಿ, ಭಕ್ತ, ಎಲ್ಲರೂ ಪ್ರಪಂಚವು ನಶ್ವರವೆಂಬ ಗಾನ ಹಾಡುತ್ತಲಿದ್ದರು. ಪರಲೋಕದ ಚಿಂತನೆಯೇ ಸಾರಸರ್ವಸ್ವವಾಗಿಹೋಗಿತ್ತು. ಪ್ರಪಂಚದ ಸಂಗತಿಗಳ ಬದಲಾವಣೆಯ ಮಾತು ಕೇಳಿಬರಲಿಲ್ಲ; ಎಲ್ಲೆಲ್ಲೂ ಒಂದೇ ಉಪದೇಶ : ಸಹನೆಯಿಂದಿರು, ತೃಪ್ತಿಯನ್ನು ತಾಳು, ಸರಳವಾಗಿರು, ಅಲ್ಪಭೋಗದಿಂದ ಸಮಾಧಾನ ಪಡೆ. ಮೊಗಲ್ ಸಂಸ್ಕೃತಿಯ ಬೃಹತ್ ಸೌಧಕ್ಕೆ ಗೆಜ್ಜಲು ಹಿಡಿದಿತ್ತು. ಅದರ ಅಡಿಪಾಯವು ಕುಸಿಯುತ್ತಾ ಬಂದಿತ್ತು. ಇಂಗ್ಲಿಷಿನವರನ್ನು ಎದುರಿಸಬೇಕಾಗಿ ಬಂದಾಗ ಆ ಸಮಾಜದ ಬೌದ್ಧಿಕ ಮತ್ತು ಭೌತಿಕ ಇಂದ್ರಿಯಗಳು ನಿತ್ರಾಣಗೊಂಡಿದ್ದವು. ದೃಢವಾಗಿ ಮತ್ತು ಕೆಚ್ಚಿನಿಂದ ಹೆಜ್ಜೆ ಹಾಕುವುದು ಎಲ್ಲ ಕ್ಷೇತ್ರಗಳಲ್ಲೂ ಇಲ್ಲವಾಗಿತ್ತು."

ಇಂತಹ ವಿಶ್ಲೇಷಣೆಗಳನ್ನು ನೀಡಿದ ಸಿಬ್ತೇ ಹಸನ್‌ನ ಪುಸ್ತಕ ಹೊರಬಂದಿದ್ದು ೧೯೭೫ರಲ್ಲಿ. ದಕ್ಷಿಣ ಏಷ್ಯದ ಮಾರ್ಕ್ಸ್‌ವಾದಿ ಬಣಗಳನ್ನು ಹೊಡೆದೆಬ್ಬಿಸಿದ ಈ ಪುಸ್ತಕ ಅವರನ್ನು ಚಿಂತನೆಗೆ ಹಚ್ಚಿತು. ಬ್ರಿಟಿಷರು ಭಾರತಕ್ಕೆ ಕಾಲಿಡುವ ಮುನ್ನ ಇಲ್ಲಿಯ ಸಾಮಾಜಿಕ ಸನ್ನಿವೇಶಗಳು ಏನಾಗಿದ್ದವು ಮತ್ತು ಉತ್ಪಾದನಾ ವಿಧಾನದ ಮೇಲೆ ಅದರ ಪ್ರಭಾವ ಏನಾಗಿದ್ದಿತು ? ಉರ್ದುವಿನಲ್ಲಿ ಆವರೆಗೆ ಇಂತಹ ಪ್ರಶ್ನೆಗಳನ್ನೆತ್ತುವ ಪುಸ್ತಕಗಳೇ ಇರಲಿಲ್ಲ. ಪಾಕಿಸ್ತಾನದ ವಿದ್ವಾಂಸರಾದ ಸಫ್‌ದರ್



ಮೀರ್, ಮುಹಮ್ಮದ್ ಆಲಿ ಸಿದ್ದಿಕಿ ಮತ್ತು ಬ್ರಿಟನ್ – ಅಮೇರಿಕಾಗಳಲ್ಲಿ ನೆಲೆಸಿದ್ದ ಹಂಝಾ ಅಲಾವಿ, ಐಜಾಝ್ ಅಹ್ಮದ್, ಮುಂತಾದವರು ಈ ಪ್ರಶ್ನೆಗಳನ್ನೆತ್ತಿಕೊಂಡು ಅಧ್ಯಯನಗಳನ್ನು ಆರಂಭಿಸಿದರು. *ಪಾಕಿಸ್ತಾನದಲ್ಲಿ ಸಂಸ್ಕೃತಿಯ ವಿಕಾಸ* ಎಂಬ ಈ ಗ್ರಂಥವು ಅವಗಣನೆಗೆ ಗುರಿಯಾಗಬಾರದು. ಮುಕ್ತ ಚಿಂತನೆಗೆ ಸುತರಾಂ ಅವಕಾಶವಿಲ್ಲದಂತಿರುವ ಪಾಕಿಸ್ತಾನದಲ್ಲಿ ಅಸಹನೆ ಮತ್ತು ಛಿದ್ರೀಕರಣ ಸದಾ ಹೆಚ್ಚುತ್ತಲೇ ಬಂದಿವೆ. ಅಲ್ಲಿಯ ಬೌದ್ಧಿಕ ವಾತಾವರಣ ಎಷ್ಟು ದಿಕ್ಕು ತಪ್ಪಿದೆಯೆಂದರೆ ಇತ್ತೀಚೆಗೆ ಡಾ|| ಸಫ್ದರ್ ಮಹಮೂದ್ ಎಂಬ ವಿದ್ವಾಂಸ *ಜಂಗ್* (ಯುದ್ಧ) ಎಂಬ ಪತ್ರಿಕೆಯಲ್ಲಿ ಬರೆದ, ತುರ್ಕಿಯ ಶಹಾಬುದ್ದೀನ್ ಘೌರಿ ಎಂಬ ಆಕ್ರಮಣಕಾರನು ಪಾಕಿಸ್ತಾನದ ಆದ್ಯಪ್ರವರ್ತಕ, ಎಂದು. ಅವನು ೧೨ನೆಯ ಶತಮಾನದಲ್ಲಿ ಪೃಥ್ವೀರಾಜ ಚೌಹಾನನನ್ನು ತರೇನ್‌ನಲ್ಲಿ ಸೋಲಿಸಿರದಿದ್ದರೆ ಬೇರಾವ ಮುಸಲ್ಮಾನ ಆಕ್ರಮಣಕಾರನೂ ಭಾರತಕ್ಕೆ ಕಾಲಿರಿಸಲು ಸಾಧ್ಯವೇ ಇರುತ್ತಿರಲಿಲ್ಲವಾದ್ದರಿಂದ ಈ ಘೌರಿಯೇ ಪಾಕಿಸ್ತಾನದ ಸ್ಥಾಪಕನೆಂದು "ವಿದ್ವಾಂಸ" ಮಹಮೂದ್ ಬರೆದಿದ್ದಾನೆ! ಇದೆಂತಹ ಮೌಢ್ಯ ಮತ್ತು ಅಪಾಯಕಾರಿ ಮಾನಸಿಕ ಪ್ರವೃತ್ತಿ ಎಂದು ಯೋಚಿಸಬೇಕು. ಸಿಬ್ತೇ ಹಸನ್ ಪ್ರಶ್ನಿಸಿ ಪುಡಿಗುಟ್ಟುವುದು ಇಂತಹ ಅನೈತಿಹಾಸಿಕ ದುಷ್ಪ್ರವೃತ್ತಿಯನ್ನು. ವೈದಿಕ ಸಾಹಿತ್ಯದ ಕಾಲದಿಂದ ಹಿಡಿದು ಮೊಗಲ್ ಸಾಮ್ರಾಜ್ಯದ ಪತನದವರೆಗೆ ಇತಿಹಾಸವನ್ನು ಕಟ್ಟಿಕೊಳ್ಳಬೇಕಾದ್ದು ಸಿಂಧು ನಾಗರಿಕತೆಯ ಮಡಿಲಲ್ಲಿ ಎಂಬುದನ್ನು ಹಸನ್ ತನ್ನ ವಿಶ್ಲೇಷಣೆಗಳಲ್ಲಿ ತೋರಿಸಿಕೊಟ್ಟಿದ್ದಾನೆ. ಅತಿಸಾಮಾನ್ಯನಿಗೆ ಈ ಇತಿಹಾಸದುದ್ದಕ್ಕೂ ಆದದ್ದೇನು? ಕಾವ್ಯ, ಸಾಹಿತ್ಯ, ನೃತ್ಯ, ಸಂಗೀತ, ಚಿತ್ರಕಲೆ, ಶಿಲ್ಪ, ಜ್ಞಾನಸಾಧನೆ, ದಂಡಯಾತ್ರೆಗಳು, ರಾಜ್ಯಗಳ ಬೇಟೆ, ಇವೆಲ್ಲಾ ಸಹಸ್ರಾರು ವರ್ಷಗಳ ಘಟನೆಗಳು ಮತ್ತು ಸಾಧನೆಗಳು.

ಸಿಬ್ತೇ ಹಸನ್‌ನ ಜನ್ಮ ಶತಮಾನೋತ್ಸವದ ವರ್ಷ ೨೦೧೬. ಇಡೀ ಜೀವನವನ್ನು ಈ ತೆರೆಮರೆಯ ವಿದ್ವಾಂಸ ಭಾರತದ ಇತಿಹಾಸದ ಅಧ್ಯಯನದಲ್ಲಿ ಕಳೆದ. ನ್ಯಾಯಯುತವಾದ ಧರ್ಮನಿರಪೇಕ್ಷ ಸಮಾಜ ಅವನ ಗುರಿ, ಸಮಾನತೆಯ ಸಮಾಜ ಅವನ ಕನಸು, ವರ್ಗ ಸಮಾಜದಲ್ಲಿ ತುಳಿತಕ್ಕೆ ಸಿಕ್ಕಿದವರ ವಿಮೋಚನೆಗಾಗಿ ಅವನ ಹೋರಾಟ. ಅವನ ಕೃತಿಗಳು ಬಹುತೇಕ ಉರ್ದುವಿನಲ್ಲಿದ್ದು ಅವು ಬೇರೆ ಭಾಷೆಗಳಿಗೆ ಅನುವಾದಗೊಂಡಿಲ್ಲ. ಇಟಲಿಯ ಆಂಟೋನಿಯೋ ಗ್ರಾಂಶಿ ಗತಿಸಿದ ನಂತರ ಅವನ ಅಮೋಘ ಚಿಂತನೆ ವಿಶ್ವದೆಲ್ಲೆಡೆ ಪ್ರಚುರಗೊಂಡಿತು. ಅವನ ಸಾವಿನ ೪೦ ವರ್ಷಗಳ ನಂತರ ಅವನ ಬರಹಗಳು ಬೇರೆ ಭಾಷೆಗಳಲ್ಲಿ ದೊರಕಿದುವು. ಸಿಬ್ತೇ ಹಸನ್ ಗತಿಸಿ ೩೦ ವರ್ಷಗಳಾಗಿವೆ. ಈಗಲಾದರೂ ವಿಶ್ವದ ವಿದ್ವಾಂಸರು, ವಿಶೇಷತಃ ಮಾರ್ಕ್ಸ್‌ವಾದಿ ವಿದ್ವಾಂಸರು, ಅವನ ಕೃತಿಗಳನ್ನು ಆಸ್ಥೆಯಿಂದ ಪರಾಮರ್ಶಿಸಿಕೊಳ್ಳಬೇಕಾಗಿದೆ.

ಪಾಕಿಸ್ತಾನದಲ್ಲಿ ವಿದ್ವಾಂಸರು ಖಾಲಿ ಕೊಡಗಳಾಗಿಬಿಟ್ಟಿದ್ದಾರೆ: ಸಫ್ದರ್ ಮಹಮೂದ್, ಓರ್ಯ ಮಕ್ಬೂಲ್ ಜಾನ್, ಜೈದ್ ಹಮೀದ್, ಹಸನ್ ನಿಸಾರ್, ಇವರೆಲ್ಲಾ ಪಾಕಿಸ್ತಾನದಲ್ಲಿ ಇಂದಿನ ಚಿಂತಕರು. ಅವರು ಪಾಕಿಸ್ತಾನದ ಯುವಕರಿಗೆ ಹಾದಿ ತೋರಲು ಸಮರ್ಥರೆ? ಸಿಬ್ತೇ ಹಸನ್ ನೀಡಿದ್ದ ಸವಾಲನ್ನು ಎದುರಿಸಲು ಅವರೆಲ್ಲಾ ಸಶಕ್ತರಾಗಬಲ್ಲರೆ? ಹಸನ್‌ನ ಸವಾಲು ಇದಾಗಿತ್ತು:

"ನಮ್ಮ (ಅಂದರೆ, ಪಾಕಿಸ್ತಾನದ) ರಾಷ್ಟ್ರೀಯ ಮತ್ತು ಪ್ರಾದೇಶಿಕ ಸಂಸ್ಕೃತಿಗಳ ಭವಿಷ್ಯವೇನು? ಔದ್ಯಮಿಕ ಸಂಸ್ಕೃತಿಯಡಿ ಅವು ಭಗ್ನವಾಗಿ ಹೋದಾವೇನು? ನಾವಿನ್ನೂ ರಾಷ್ಟ್ರೀಯ ಸಂಸ್ಕೃತಿ ಎಂಬುದೊಂದನ್ನು ಕಂಡುಕೊಂಡೇ ಇಲ್ಲ. ಸಂಸ್ಕೃತಿ ಸಚಿವಾಲಯವು ರಾಷ್ಟ್ರೀಯ ಸಂಸ್ಕೃತಿಯ ಸಮಸ್ಯೆಯನ್ನು ಕುರಿತ ದೊಡ್ಡ ಗೋಷ್ಠಿಯನ್ನು ಆಯೋಜಿಸಿತ್ತು. ಗೋಷ್ಠಿಯು ಸತ್ವವಿಲ್ಲದ ಮಂಥನವಾಗಿಹೋಯಿತು. ನಾವು ಪ್ರಾದೇಶಿಕ ಸಂಸ್ಕೃತಿಗಳನ್ನು ಸಾಹಿತ್ಯ, ಕಲೆ, ಭಾಷೆ ಮತ್ತು ಕೌಶಲಗಳಲ್ಲಿ ಗುರುತಿಸಬಲ್ಲೆವು; ಆದ್ದರಿಂದ ಅವುಗಳ ಭವಿಷ್ಯವು ನಿಚ್ಚಳವಾಗಿ ತಿಳಿಯುತ್ತದೆ. ಆದರೆ ಪ್ರಾದೇಶಿಕ ಸಂಸ್ಕೃತಿಗಳು ಔದ್ಯಮಿಕ ಸಂಸ್ಕೃತಿಯ ಉಪಟಳವನ್ನು ಮೆಟ್ಟಿ ನಿಲ್ಲಬಲ್ಲವೆ? ಬೇರೆ ದೇಶಗಳ ಇತಿಹಾಸವನ್ನು ನೋಡಿದರೆ ಅದು ಸಾಧ್ಯವಿಲ್ಲವೆಂಬ ಉತ್ತರ ನಮ್ಮೆದುರಿಗಿದೆ. ಪ್ರಾದೇಶಿಕ ಸಂಸ್ಕೃತಿಗಳನ್ನು ಔದ್ಯಮಿಕ ಸಂಸ್ಕೃತಿಗೆ ಥಳುಕು ಹಾಕಬಹುದೇನೋ; ಆಗ ಪ್ರಾದೇಶಿಕ ಸಂಸ್ಕೃತಿಗಳು ಔದ್ಯಮಿಕ ಸಂಸ್ಕೃತಿಯ ಹಿಡಿತದಲ್ಲಿ ಬೆಳೆಯುತ್ತವೋ ಅಥವಾ ಸೊರಗುತ್ತವೋ? ಪ್ರಾದೇಶಿಕ ಸಂಸ್ಕೃತಿಯ ಬರಡು ಕೊಂಬೆಗಳನ್ನು ಕತ್ತರಿಸಿ ಔದ್ಯಮಿಕ ಸಂಸ್ಕೃತಿಯು ಅದಕ್ಕೆ ನೀರು, ಗೊಬ್ಬರ, ಕೊಟ್ಟು ಬೆಳೆಸುತ್ತದೆಂದು ನಿರೀಕ್ಷಿಸೋಣವೆ? ಭೂಮಿಯ ಗಂಧ ಮತ್ತು ಮಾನವನ ಕೌಶಲ ಅದರಲ್ಲಿ ಪ್ರದರ್ಶಿತವಾಗಿ ಪುಷ್ಪಗಳು ಕಂಗೊಳಿಸಿಯಾವೆ?"

(ಸಮಾಜ ವಿಜ್ಞಾನಿ, ವಿಮರ್ಶಕ, ಭಾಷಾಂತರಕಾರ, ಕಮ್ಯುನಿಸ್ಟ್ ಕಾರ್ಯಕರ್ತ ರಾಜಾ ನಯೀಂನ ಲೇಖನವನ್ನು ಆಧರಿಸಿದ್ದು. ಸಾದತ್ ಹಸನ್ ಮಾಂಟೋ, ಕೃಷ್ಣಚಂದರ್, ರಾಜಿಂದರ್ ಸಿಂಗ್ ಬೇಡಿ, ಇಸ್ಮತ್ ಚುಗ್ತೈ, ಮುಂತಾದವರ ಕೃತಿಗಳನ್ನು ಅವನು ಆಂಗ್ಲಭಾಷೆಗೆ ಅನುವಾದಿಸಿದ್ದಾನೆ.)

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

Statement about ownership and other particulars about newspaper

**FORM IV**

| | | |
|---|---|---|
| **1. Place of publication** | : | **Bengaluru** |
| **2. Periodicity of its publication:** | | **Monthly** |
| **3. Printer's Name** | : | **R. S. Rajaram** |
| **Nationality** | : | **Indian** |
| **Address** | : | **Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001** |
| **4. Publisher's Name** | : | **R. S. Rajaram** |
| **Nationality** | : | **Indian** |
| **Address** | : | **Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001** |
| **5. Editor's Name** | : | **Dr. Siddanagouda Patil** |
| **Nationality** | : | **Indian** |
| **Address** | : | **Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001** |
| **6. Name and address of individuals who own the newspaper and partners and shareholders holding more than one percent of the total capital** | : | **Navakarnataka Publications (P) Ltd., Embassy Centre, Crescent Road P. B. No. 5159 Bengaluru - 560 001 (Sole Proprietors)** |

**I, R. S. Rajaram, hereby declare that the particulars given above are true to the best of my knowledge and belief.**

Sd/-
R. S. Rajaram
Publisher

Date : 28-2-2016

ತಿಂಗಳ ಕಥೆ

# ಪರಂಪರಾರ್ಜಿತ

ಮೂಲ (ಒರಿಯಾ) : **ಸುರೇಂದ್ರ ಮಿಶ್ರಾ**
ಕನ್ನಡಕ್ಕೆ : **ಡಾ॥ ಬಸವರಾಜ ಸಾದರ**

ಹಲವಾರು ವರ್ಷಗಳಿಂದ ಹಾಕಲಾಗಿದ್ದ ಆ ನೆಲಹಾಸಿಗೆಯ ಬಣ್ಣ ಮಾಸಿಹೋಗಿತ್ತು. ಕೆಳಗೆ ಹಾಕಿದ್ದ ನೆಲಹಾಸು ಎಣ್ಣೆಗಸಿಯಿಂದ ಕೂಡಿತ್ತು ಹಾಗೂ ಗಟ್ಟಿಯಾಗಿತ್ತು. ಆದರೆ ಆ ಕೋಣೆ, ಆ ಹಾಸಿಗೆ ಮತ್ತು ಆ ನೆಲಹಾಸು, ಇವೆಲ್ಲವೂ ಇಡೀ ಮನೆಯ ಪ್ರತಿಷ್ಠೆಯನ್ನು ಎತ್ತಿ ತೋರಿಸುತ್ತಿದ್ದವು. ಆ ಹಾಸಿಗೆ ಮೂರು ತಲೆಮಾರುಗಳಿಂದಲೂ ಪರಂಪರಾಗತ ಆಸ್ತಿಯಾಗಿ ಬಂದಿತ್ತು. ತಂದೆ, ಅವನ ತಂದೆ ಮತ್ತು ಅವನ ತಂದೆಯ ತಂದೆಯ ಹಾಸಿಗೆಯಾಗಿ ತಲೆತಲಾಂತರಗಳ ಕ್ರಮದಲ್ಲಿ ಅದು ಅವರೆಲ್ಲರ ಸೇವೆ ಮಾಡಿತ್ತು. ಆದ್ದರಿಂದ, ಯಾವಾಗ ಅವನ ತಂದೆಯ ತಂದೆ ತೀರಿಕೊಂಡರೋ ಆಗ ಅಲಿಖಿತ ಕಾನೂನಿನ ಮೇರೆಗೆ ಆ ಹಾಸಿಗೆಯು, ನೆಲಹಾಸು ಸಹಿತ ಇಡೀ ಕೋಣೆಯೊಂದಿಗೆ ಪರಂಪರಾರ್ಜಿತ ಆಸ್ತಿಯಾಗಿ ತಂದೆಯ ಕೈಗೆ ವರ್ಗವಾಗಿತ್ತು.

ನಾನು ಹುಟ್ಟಿದಾಗ ನನ್ನ ತಂದೆ ಹಾಗೂ ತಾಯಿಯೊಂದಿಗೆ ಆ ಹಾಸಿಗೆಯನ್ನು ಹಂಚಿಕೊಂಡೆ. ಯಾವಾಗ ನನ್ನ ತಮ್ಮ ರವಿ ಹುಟ್ಟಿದನೋ ಆಗ ನಾನು ಆ ಕೋಣೆಯಿಂದ ಹೊರದೂಡಲ್ಪಟ್ಟೆ. ನಾನು ಆ ಮೊದಲು ಮಲಗುತ್ತಿದ್ದ ತಂದೆ–ತಾಯಿಯರ ನಡುವಿನ ಜಾಗೆಯಲ್ಲಿ ರವಿ ಮಲಗಿದ. ಆತ ಪ್ರತಿ ರಾತ್ರಿ ಆ ಹಾಸಿಗೆಯನ್ನು ಒದ್ದೆ ಮಾಡುತ್ತಿದ್ದ. ಅದಕ್ಕೆ ತಂದೆ ಸಿಟ್ಟು ಮಾಡುತ್ತಿದ್ದ ಕಾರಣ, ತಾಯಿಯು ಪ್ರತಿ ಮುಂಜಾನೆಯೂ ಆ ಹಾಸಿಗೆಗಳನ್ನು ಸೂರ್ಯನ ಬಿಸಿಲಿನಲ್ಲಿ ಒಣಗಿಸುತ್ತಿದ್ದಳು. ಹೀಗಿದ್ದರೂ ಅವರು ಅವನಿಗೆ ತಮ್ಮ ಹಾಸಿಗೆಯಲ್ಲಿ ಮಲಗಲು ಅವಕಾಶ ಮಾಡಿಕೊಡುತ್ತಿದ್ದರು. ಇದನ್ನೆಲ್ಲ ನೋಡಿ ನಾನು ಅಸೂಯೆಯಿಂದ ಹೊಟ್ಟೆಯುರಿಸಿಕೊಳ್ಳುತ್ತಿದ್ದೆ. ಆ ಹಾಸಿಗೆಗಳೊಂದಿಗೆ ಅಷ್ಟೊಂದು ಗಾಢವಾದ ಸಂಬಂಧವನ್ನಿಟ್ಟುಕೊಂಡು ಬೆಳೆಯುತ್ತಿದ್ದಾಗಲೇ ನಾನು ಆ ಕೋಣೆಯಿಂದ ನಿಷೇಧಿತನಾದೆ.

ನನ್ನ ನಂತರ ರವಿ ಕೂಡ ನಾನು ಅನುಭವಿಸಿದ ಗತಿಯನ್ನೇ ಅನುಸರಿಸಬೇಕಾಯಿತು. ಯಾವಾಗ ನನ್ನ ತಂಗಿ, ಕುನಿ ಹುಟ್ಟಿದಳೋ ಆಗ ರವಿ ಕೂಡ ನನ್ನೊಂದಿಗೆ ನನ್ನ ಕೋಣೆಯಲ್ಲಿ ಮಲಗ ಬೇಕಾಯಿತು. ನಮ್ಮ ಮನೆಯಲ್ಲಿ ಬೇರೆ ಹಾಸಿಗೆಗಳೇ ಇರಲಿಲ್ಲ. ಹಾಗಾಗಿ ನಾವಿಬ್ಬರೂ ನೆಲದ ಮೇಲೆ ಚಾಪೆ ಹಾಕಿ, ಅದರ ಮೇಲೊಂದು ದಪ್ಪನೆಯ ದುಪ್ಪಟಿ ಹಾಕಿಕೊಂಡು, ತಂದೆ–ತಾಯಿ ಹಾಗೂ ಕುನಿಯ ಮೇಲಿನ ಸಿಟ್ಟಿನಿಂದ, ಗುಟ್ಟಾಗಿ ಬೈದುಕೊಳ್ಳುತ್ತ ಅದರ ಮೇಲೆ ಮಲಗಿಕೊಳ್ಳುತ್ತಿದ್ದೆವು. ಆ ಕೋಣೆ, ಆ ನೆಲಹಾಸು ಹಾಗೂ ಆ ಹಾಸಿಗೆ – ಇವುಗಳ ಬಗ್ಗೆ ನನಗೇಕೆ ಅಷ್ಟು ಹುಚ್ಚು ಹಿಡಿದಿತ್ತೋ ಗೊತ್ತಿಲ್ಲ. ಆದರೆ, ಕುನಿ ಯಾವಾಗ ಒಂದಿಷ್ಟು ಬೆಳೆದು ದೊಡ್ಡವಳಾದಳೋ ಆಗ ಅವಳೂ ಆ ಕೋಣೆಯಿಂದ ಹೊರತಳ್ಳಲ್ಪಟ್ಟಳು.

ನಮ್ಮ ತಂದೆಯವರಿಗೆ ನಾವು ಭಯಂಕರ ಹೆದರುತ್ತಿದ್ದೆವು. ಅವರ ಮುಖದೆದುರು ನಿಂತು ಏನನ್ನಾದರೂ ಮಾತನಾಡುವ ಧೈರ್ಯ ನನಗಿರಲಿಲ್ಲ ವಾದರೂ ಅವರ ವಿರುದ್ಧ ನಿರಂತರವಾಗಿ ನಾನು ಒಂದು ಬಗೆಯ ದ್ವೇಷವನ್ನು ಸಾಧಿಸುತ್ತಿದ್ದೆ. ಅವರು ನಮ್ಮ ತಾಯಿಯನ್ನು ತೀರ ಕ್ಷುಲ್ಲಕ ಕಾರಣಗಳಿಗಾಗಿ ಮತ್ತೆ ಮತ್ತೆ ಬೈಯ್ಯುತ್ತಿದ್ದರು. ಆದರೂ ನಮ್ಮ ತಾಯಿ ನಮಗೆ ಗೊತ್ತಾಗದ ಹಾಗೆ, ಕದ್ದು ಅವರಿಗೆ ರುಚಿಕರವಾದ ಆಹಾರ ಪದಾರ್ಥಗಳನ್ನು ತಯಾರಿಸಿ ಕೊಡುತ್ತಿದ್ದರು. ಗುಲಾಮಗಿರಿಯಂಥ ಮನೆಗೆಲಸ ಹಾಗೂ ನಮ್ಮನ್ನು ಸಾಕುವ ಹೊಣೆ ಇವೆರಡರ ನಡುವೆ ಅಷ್ಟಿಷ್ಟು ಸಮಯ ಸಿಕ್ಕಾಗ ಅವರು ತಂದೆಯೊಂದಿಗೆ ಗುಟ್ಟಾಗಿ ಪಿಸುಗುಡುತ್ತ ಏನನ್ನೋ ಮಾತಾಡುತ್ತಿದ್ದರು.

ಕುನಿಯನ್ನೂ ಕೋಣೆಯಿಂದ ಅಷ್ಟೊಂದು ನಿರ್ದಯವಾಗಿ ಹೊರದಬ್ಬಿದ ನಂತರ, ತಂದೆ–ತಾಯಿ ಇಬ್ಬರೇ ಆ ಕೋಣೆಯಲ್ಲಿ ಬಹಳ ದಿನಗಳ ವರೆಗೆ ಮಲಗುತ್ತಿದ್ದರು. ಮತ್ತೆ ನಾವು ಮೂವರೂ ಮಕ್ಕಳು ಯಥಾಪ್ರಕಾರ ನೆಲದ ಮೇಲೆ ಹಾಸಿದ ದುಪ್ಪಟಿಯ ಮೇಲೆಯೇ ಮಲಗುತ್ತಿದ್ದೆವು. ಆದರೆ, ಮತ್ತೂ ಒಂದು ಸಮಯ ಬಂತು; ಆಗ ತಾಯಿ ಯವರೂ ಆ ಕೋಣೆಯಿಂದ ಹೊರಬೀಳ ಬೇಕಾಯ್ತು. ಈಗ ತಂದೆಯವರು ತಾವೊಬ್ಬರೆ ಕೋಣೆ, ಹಾಸಿಗೆ ಮತ್ತು ನೆಲಹಾಸು ಎಲ್ಲವನ್ನೂ ಉಪಯೋಗಿಸುವ ಏಕಸ್ವಾಮ್ಯದ ಹಕ್ಕನ್ನು ಸಂಪಾದಿಸಿಕೊಂಡರು.

ಕ್ರಮೇಣ ನಾವೆಲ್ಲ ಬೆಳೆದ ಹಾಗೆ, ಯಾಕೆ ನಾವು ಆ ಕೋಣೆಯಿಂದ ಹೊರತಳ್ಳಲ್ಪಟ್ಟೆವೆಂಬುದು ನಮ್ಮ ಅರಿವಿಗೆ ಬರತೊಡಗಿತು. ಆದರೆ, ಮನೆಯಲ್ಲಿದ್ದ ಒಂದೇ ಹಾಸಿಗೆ ಮತ್ತು ಆಕರ್ಷಕವಾದ ನೆಲಹಾಸು ಗಳಿಂದ ಕೂಡಿದ ಆ ಕೋಣೆಯನ್ನು ತಂದೆಯವರು ಅಷ್ಟೊಂದು ಸ್ವಾರ್ಥಿಯಾಗಿ ತಾವೊಬ್ಬರೇ ಉಪಯೋಗಿಸುತ್ತಿದ್ದ ರೀತಿ ಮಾತ್ರ ನನಗೆ ಸರಿ ಬರಲಿಲ್ಲ. ಅವರು ತಿಂಗಳಿಗೆ ಒಂದು ಬಾರಿ ಮನೆತನಕ್ಕೆ ಸಂಬಂಧಿಸಿದಂತೆ ಸಭೆಯನ್ನು ನಡೆಸು ತ್ತಿದ್ದರು. ಆಗ ಮಾತ್ರ ನಾವೆಲ್ಲ ಆ ಕೋಣೆಯಲ್ಲಿ ಸೇರುತ್ತಿದ್ದೆವು. ಆಗಲೂ ತಂದೆಯವರೊಬ್ಬರೇ ಹಾಸಿಗೆಯ ಮೇಲೆ ಕುಳಿತುಕೊಳ್ಳುತ್ತಿದ್ದರು. ತಾಯಿಯವರನ್ನೊಳಗೊಂಡ ಹಾಗೆ ನಾವೆಲ್ಲರೂ ನೆಲದ ಮೇಲೆಯೇ ಕೂಡುತ್ತಿದ್ದೆವು. ಆಗ ಅವರು ನಮಗೆಲ್ಲ ಗದರಿಸುತ್ತಿದ್ದರು, ಆಜ್ಞಾಪಿಸುತ್ತಿದ್ದರು ಮತ್ತು ಉಪದೇಶ ಕೊಡುತ್ತಿದ್ದರು. ಅಲ್ಲದೆ, ಅದನ್ನು ಮಾಡು, ಇದನ್ನು ಮಾಡು ಎಂದು ಆದೇಶಿಸುತ್ತಿದ್ದರು.

ಆದರೆ ತಂದೆಯವರ ಆ ಅಧಿಕಾರ ನಿಧಾನವಾಗಿ ಕರಗತೊಡಗಿತು. ಒಂದು ದಿನ ರವಿಯು ಗಾಂಜಾ ಸೇದಿ ಅಮಲಿನಲ್ಲಿ ಮನೆಗೆ ಬಂದಾಗ ಅವರು ಆಕ್ಷೇಪಿಸುತ್ತ ಅವನನ್ನು ತರಾಟೆಗೆ ತೆಗೆದುಕೊಂಡರು. ಆದರೆ ರವಿಯು ಅವರ ಆಕ್ಷೇಪಣೆಯನ್ನು ಅವರ ಮುಖದೆದುರೇ ಧಿಕ್ಕರಿಸಿದನು. ಅದನ್ನು ನೋಡಿದ ತಂದೆಯವರು ಅವಾಕ್ಕಾದರು. ತಂಗಿ ಕುನಿಯು

## ಕಪ್ಪು ಕಲೆ

ಅಲೆಗಳು ನಿಲ್ಲುವುದಿಲ್ಲ
ಕಲೆಗಳು ಮಾಯವಾಗುವುದಿಲ್ಲ
ಅಂದು ಬಾಬ್ರಿ ಪ್ರಕರಣ
ಇಂದು ದಾದ್ರಿ ಪ್ರಕರಣ

**ಕಾಸರಗೋಡು ಅಶೋಕ್ ಕುಮಾರ್**
ಮಂಗಳೂರು

---

ಲೋಫರನೊಬ್ಬನ ಜೊತೆ ಮುಕ್ತವಾಗಿ ತಿರುಗಾಡುತ್ತಿದ್ದುದರ ವಿಚಾರವಾಗಿ ತಾಯಿ ಜಗಳ ತೆಗೆದರೂ ಅವರು ಮೌನಿಯಾಗಿಬಿಟ್ಟರು. ಮನೆತನ ಸರಿಯಾಗಿ ನಡೆಯದೆ ಏರುಪೇರಾಗತೊಡಗಿತು. ಊಟ–ಬಟ್ಟೆಗಳ ವಿಷಯವಾಗಿ ಮನೆಯಲ್ಲಿ ಮತ್ತೆ ಮತ್ತೆ ಜಗಳಗಳು ಸುರುವಾದವು. ಇದನ್ನೆಲ್ಲ ಗಮನಿಸಿದ ತಂದೆಯವರು ದಿನದಿಂದ ದಿನಕ್ಕೆ ಕ್ಷೀಣಿಸತೊಡಗಿದರು. ಅವರು ಹಾಗೆ ಕ್ಷೀಣಿಸುತ್ತಿದ್ದುದನ್ನು ನೋಡಿದ ತಾಯಿಯವರು, ಕುನಿಯ ಮದುವೆಯ ವಿಚಾರವನ್ನು ಪ್ರಸ್ತಾಪಿಸುತ್ತ ಮತ್ತೆ ಮತ್ತೆ ಜಗಳ ತೆಗೆಯತೊಡಗಿದರು. ಹೀಗಿದ್ದಾಗಲೂ ತಂದೆಯವರು ಆ ಕೋಣೆಗೇ ಅಂಟಿಕೊಂಡುಬಿಟ್ಟರು. ಹಗಲು–ರಾತ್ರಿ ಹೀಗೆ ಯಾವಾಗಲೂ ಅವರು ಹಾಸಿಗೆಯ ಮೇಲೆ ಮಲಗಿಕೊಂಡೇ ಇರುತ್ತಿದ್ದುದನ್ನು ನಾನು ಸಹಿಸದಾದೆ. ಒಳಗೊಳಗೇ ನಾನು ಸಿಟ್ಟಿನಿಂದ ಕುದಿಯುತ್ತಿದ್ದೆ. ಏನನ್ನೂ ಮಾಡಲು ಆಗದಷ್ಟು ಅಸಮರ್ಥರಾದ ಅವರು ಆ ಪರಿಯ ದುರಾಶೆಯಿಂದ ಏನೆಲ್ಲದಕ್ಕೂ ಅಂಟಿಕೊಳ್ಳಬಹುದೆ ?

ತಮ್ಮ ಸಾವಿನ ಹಿಂದಿನ ದಿನದವರೆಗೂ ತಂದೆಯವರು ಆ ಹಾಸಿಗೆಯ ಮೇಲೆಯೇ ಮಲಗಿದ್ದರು. ಯಾವಾಗ ಅವರು ಕೊನೆಯುಸಿರೆಳೆಯುವ ಗಳಿಗೆ ಸನ್ನಿಹಿತವಾಯಿತೋ ಆಗ ತಾಯಿಯವರು ತಮ್ಮ ಕಣ್ಣೀರನ್ನೊರೆಸಿಕೊಳ್ಳುತ್ತ, "ಈ ಕೂಡಲೇ ನಿಮ್ಮ ತಂದೆಯವರನ್ನು ನೆಲದ ಮೇಲೆ ಮಲಗಿಸಿರಿ" – ಎಂದು ಹೇಳಿದರು. ಮುಂದುವರಿದು ಅವರು, "ನೀವೆಲ್ಲ ತಕ್ಷಣ ಹೋಗಿ ಈಗಲೇ ಹೊಟ್ಟೆ ತುಂಬ ಊಟ ಮಾಡಿಬಿಡಿರಿ" ಎಂದೂ ಉಪದೇಶಿಸಿದರು.

ತಂದೆ ತೀರಿಕೊಂಡಾಗ ಎಲ್ಲರೂ ಅತ್ತರು. ನಾನೂ ಅಳಬೇಕೆಂದು ಯೋಚಿಸಿದೆ. ಆದರೆ, ಪ್ರಾಮಾಣಿಕವಾಗಿ ಹೇಳಬೇಕೆಂದರೆ, ಅಳಬೇಕೆಂದು ನನಗೆ ಅನಿಸಲೇ ಇಲ್ಲ. ಹತ್ತನೆಯ ದಿನದ ಶ್ರಾದ್ಧ ಮತ್ತಿತರ ಸಂಸ್ಕಾರದ ಆಚರಣೆಗಳು ಮುಗಿಯುವವರೆಗೂ ಮನೆಯಲ್ಲಿ ಮುಂದುವರಿದ ಅಶಾಂತಿ–ಅವ್ಯವಸ್ಥೆಗಳು ಮನೆಯವರಿಗೆಲ್ಲ ಕಿರಿಕಿರಿ ಕೊಟ್ಟವು.

ಯಾವಾಗ ಎಲ್ಲ ಸಂಬಂಧಿಕರು ಮತ್ತು ಹತ್ತಿರದವರು ತಮ್ಮ ತಮ್ಮ ಮನೆಗಳಿಗೆ ಹೋದರೋ, ಆಗ ತಾಯಿಯವರು ನಮ್ಮೆಲ್ಲರೊಂದಿಗೆ ಸಭೆ ನಡೆಸಿದರು. "ಈ ದಿನದಿಂದಲೇ ನೀನು ಆ ಕೋಣೆಯಲ್ಲಿ ಮಲಗಬೇಕು. ನೋಡು, ಈಗ ನಿನ್ನ ತಂದೆಯವರಿಲ್ಲ, ಮನೆಯ ಜವಾಬ್ದಾರಿ ಈಗ ನಿನ್ನ ಹೆಗಲ ಮೇಲಿದೆ" ಎಂದು ನನಗೆ ಸೂಚಿಸಿದರು.

ಕೋಣೆ ಈಗ ಎಲ್ಲ ಕಡೆಯೂ ಗಲೀಜಾಗಿತ್ತು.

"ಕೋಣೆಯ ಕಸವನ್ನೆಲ್ಲ ಗುಡಿಸಿ, ನೆಲವನ್ನು ನೀರಿನಿಂದ ತೊಳೆ" ಎಂದು ನಾನು ಕುನಿಗೆ ಸೂಚಿಸಿದೆ. ಅವಳು ಆ ಕೆಲಸಕ್ಕೆ ತೊಡಗುವ ಮುನ್ನ ನೆಲಹಾಸಿನ ಮೇಲೆ ಹಾಕಿದ್ದ ಮೇಲ್ಹಾಸನ್ನು ತೆಗೆದೆ. ನೆಲಹಾಸನ್ನೂ ಹೊರತೆಗೆದು ಧೂಳನ್ನು ಝಾಡಿಸಿ ಸ್ವಚ್ಛ ಮಾಡಿದೆ. ಅನಂತರ ಹೊಸ ಮೇಲ್ಹಾಸನ್ನು ಹಾಕಿ ನೆಲಹಾಸನ್ನು ಮುಚ್ಚಿದೆ. ತಂದೆಯವರು ಸತ್ತ ನಂತರ ಆಚರಿಸಲಾದ ಶೋಕಾಚರಣೆಯ ಹತ್ತು ದಿನಗಳ ಪರ್ಯಂತ ನಾನು ಚೆನ್ನಾಗಿ ನಿದ್ದೆಯನ್ನೇ ಮಾಡಿರಲಿಲ್ಲ. ಅದರ ಜೊತೆಗೇ ನಾನು ಈ ಹಿಂದಿನ ಹಲವಾರು ದಿನಗಳಿಂದ ಅನುಭವಿಸುತ್ತಿದ್ದ ತಳಮಳವು ಇತ್ತೀಚೆಗೆ ತಾಳ್ಮೆಯನ್ನು ಮೀರಿ ಹೋಗಿತ್ತು. ಇವೆಲ್ಲವುಗಳಿಂದ ಮುಕ್ತವಾಗಿ ನಿರಾಳನಾಗಿದ್ದ ನಾನು ಆ ದಿನ ಮನಸ್ಸು ಹಗುರವಾಗುವ ಹಾಗೆ ದೀರ್ಘಕಾಲ ನಿದ್ದೆ ಮಾಡಿದೆ.

ಆ ದಿನ ಮಧ್ಯಾಹ್ನ ನಾನು ಮನೆಯವರೆಲ್ಲರೊಡನೆ ಒಂದು ಸಭೆ ನಡೆಸಿದೆ. ಮನೆಯ ಆರ್ಥಿಕ ಪರಿಸ್ಥಿತಿ ತುಂಬ ಹದಗೆಟ್ಟಿತ್ತು. ಆದ್ದರಿಂದ ಮನೆತನವನ್ನು ಹೇಗೆ ನಿಭಾಯಿಸಬೇಕು ಹಾಗೂ ಯಾರ್ಯಾರು ಏನೇನು ಜವಾಬ್ದಾರಿಯನ್ನು ಹೊರಬೇಕೆಂಬುದರ ಬಗ್ಗೆ ಒಂದು ಸಂಕ್ಷಿಪ್ತ ಭಾಷಣವನ್ನು ಮಾಡಿದೆ. ರವಿಯ ಕುಡಿತದ ವ್ಯಸನದ ಬಗ್ಗೆ ನಿಷ್ಠುರವಾದ ಎಚ್ಚರವನ್ನು ಕೊಟ್ಟೆ. ತನ್ನ ಜೀವನವನ್ನು ತಾನು ತೂಗಿಸಿಕೊಳ್ಳಲು ಹಾಗೂ ಮನೆತನದ ಆರ್ಥಿಕ ನಿರ್ವಹಣೆಗೆ ಸಾಧ್ಯವಾದಷ್ಟು ನೆರವು ನೀಡಲು ಎಷ್ಟು ಸಾಧ್ಯವೋ ಅಷ್ಟು ಬೇಗ ಹೇಗಾದರೂ ಮಾಡಿ ಸಂಪಾದನೆಗೆ ತೊಡಗುವ ಬಗ್ಗೆ ಅವನಿಗೆ ಸೂಚನೆ ನೀಡಿದೆ. ಕುನಿಗೂ ಎಚ್ಚರಿಸಿದೆ. ಆ ಲೋಫರ್ ಹುಡುಗನ ಜೊತೆ ಮತ್ತೊಮ್ಮೆ ಮಾತನಾಡುವುದನ್ನು ನಾನೇನಾದರೂ ನೋಡಿದರೆ, ನೀನು ದೊಡ್ಡ ಗಂಡಾಂತರವನ್ನೇ ಎದುರಿಸಬೇಕಾದೀತೆಂದು ಭಯ ಹುಟ್ಟಿಸಿದೆ. "ಇಲ್ಲಿಯವರೆಗೆ ಏನು ಮಾಡಿದೆಯೋ ಅದು ನಡೆದುಹೋಯಿತು. ಆದರೆ ಇನ್ನು ಮೇಲೆ ಏನಾದರೂ ಇಂಥ ಹುಚ್ಚಾಟ ನಡೆಸಿದರೆ ನಾನು ಸಹಿಸಿಕೊಳ್ಳುವುದಿಲ್ಲ" ಎಂದು ಅತ್ಯಂತ ಕಠಿಣವಾದ ಹಾಗೂ ನಿರ್ದಾಕ್ಷಿಣ್ಯದ ಮಾತುಗಳನ್ನು ಹೇಳಿ ಆ ಸಭೆಯನ್ನು ಮುಕ್ತಾಯಗೊಳಿಸಿದೆ.

ರವಿ ಹಾಗೂ ಕುನಿ ಹೊರಗೆ ಹೋದ ನಂತರ ತಾಯಿಯವರು, "ಕುನಿಯ ಮೇಲೆ ಕಟ್ಟುನಿಟ್ಟಾದ ಒಂದು ಕಣ್ಣಿರಲಿ. ಅವಳು ಆ ಮಂಗ ಹುಡುಗನ ಜೊತೆ ಓಡಿಹೋಗುವ ನಿರ್ಧಾರ ಮಾಡಿದ ಹಾಗಿದೆ" ಎಂದು ಬಹಳ ಗಂಭೀರವಾದ ಸಮಾಚಾರವೊಂದನ್ನು ನನ್ನ ಕಿವಿಯಲ್ಲಿ ಉಸುರಿದಳು.

* * *

ತುಂಬ ರಾತ್ರಿಯಾಗಿತ್ತು. ರವಿ ಇನ್ನೂ ಮನೆಗೆ ಹಿಂದಿರುಗಿರಲಿಲ್ಲ. ತಾಯಿಯವರು ಬಹಳ ಆತಂಕಗೊಂಡಿದ್ದರು. ನನಗೆ ಭಯಂಕರ ಹಸಿವಾಗಿತ್ತು. ಆದರೆ ನನ್ನ ಪಾಲಕತ್ವದ ಸತ್ವಪರೀಕ್ಷೆಯೇ ನಡೆಯುತ್ತಿರುವ ಹಾಗಿದ್ದ ಕಾರಣ ಅವನು ಮನೆಗೆ ಹಿಂದಿರುಗಿ ಬರುವವರೆಗೂ ನಾನು ಊಟವಿಲ್ಲದೆ ಕಾಯಲೇಬೇಕಾಗಿತ್ತು. ತಾಯಿಯವರು ಕೂಡ ಊಟ ಮಾಡಿರಲಿಲ್ಲ. ಸಮಯ ಓಡುತ್ತಲೇ ಇತ್ತು. ರಾತ್ರಿಯ ಹನ್ನೊಂದು... ಹನ್ನೆರಡು... ಒಂದು... ಎರಡು... ಹಾಗೆಯೇ ಅದು ಸರಿಯುತ್ತಿತ್ತು.

ಕೊನೆಗೂ ಆ ಮಹಾಶಯ ತೂಗಾಡುತ್ತ ಮನೆಗೆ ಬಂದ. ಅವನನ್ನು ನೋಡಿ ನನ್ನ ಶರೀರವೆಲ್ಲ ಸಿಟ್ಟಿನಿಂದ ಕಂಪಿಸತೊಡಗಿತು. ಹಿಂದೆಮುಂದೆ ನೋಡದೆ ನಾನು ಅವನ ಮುಖಕ್ಕೊಂದು ಬಲವಾದ ಏಟು ಕೊಟ್ಟೆ. ಒಂದು ಕ್ಷಣ ಕೂಡ ತಡಮಾಡದೆ ರವಿಯೂ ತಿರುಗಿ ನನಗೂ ಅಷ್ಟೇ ಬಿರುಸಾದ ಹೊಡೆತ ಬಿಟ್ಟ. ನನ್ನನ್ನು ಹೊಡೆದ ಅವನು ಜೋಲಿ ಹೋಗಿ ಕೆಳಗೆ ಬಿದ್ದ. ಇದನ್ನು ನೋಡಿದ ತಾಯಿಯವರು ತಮ್ಮ ತಾಳ್ಮೆಯನ್ನೇ ಕಳೆದುಕೊಂಡರು. ನನಗೋ ದೊಡ್ಡ ಆಘಾತ ! ರವಿಯ ಬಾಯಿಂದ ಕೆಟ್ಟ ವಾಸನೆ ಬರುತ್ತಿತ್ತು. ಅವನು ಮಿತಿಮೀರಿ ಕುಡಿದಿದ್ದ. "ನಾನು... ನಾನು, ನಿಮ್ಮಿಂದ ಬೇರೆ ಇರುತ್ತೇನೆ" ಎಂದು ಸನ್ನಿ ಹಿಡಿದವರಂತೆ ಹುಚ್ಚುಚ್ಚಾ ಬಡಬಡಿಸಿದ.

ಅವರೆಲ್ಲ ಮಲಗಿದರು. ನಾನು ಹಾಸಿಗೆಯನ್ನು ಮತ್ತೊಮ್ಮೆ ಸ್ವಚ್ಛ ಮಾಡಿ, ದೀಪ ಆರಿಸಿ ಮಲಗಲು ಯತ್ನಿಸಿದೆ. ಆದರೆ ನನಗೆ ಮಲಗಲಾಗಲಿಲ್ಲ. ನಾನು ಹಾಗೆಯೇ ಹಾಸಿಗೆಯಲ್ಲಿ ಹೊರಳಾಡುತ್ತಿದ್ದಂತೆ ನನ್ನ ಮೊಳಕೈ ಹತ್ತಿರ ಏನೋ ಕಚ್ಚಿತು. ಅನಂತರ ಅದು ಹಾಗೆಯೇ ನನ್ನ ಮೈಮೇಲೆಲ್ಲ ಕಚ್ಚುತ್ತಲೇ ಹೋಯಿತು. ಅದು ಕಚ್ಚಿದ ಭಾಗಗಳನ್ನೆಲ್ಲ ಕೆರೆದು ಕೆರೆದು ನಾನು ದಣಿದು ಹೋದೆ. ನಿದ್ದೆ ಮಾಡಲಾಗದೆ ಎದ್ದು ಕುಳಿತು ದೀಪ ಹಚ್ಚಿದೆ. ನೋಡುತ್ತೇನೆ !! ಇಡೀ ಹಾಸಿಗೆ ತಗಣಿಗಳಿಂದ ತುಂಬಿಹೋಗಿದೆ !! ಅವುಗಳನ್ನು ನಾನು ಒಂದೊಂದಾಗಿ ಒರೆಯತೊಡಗಿದೆ. ಒರೆದಷ್ಟೂ ಅವುಗಳ ಸಂಖ್ಯೆ ಹೆಚ್ಚಾಗತೊಡಗಿತು...!!!

ಅಷ್ಟರಲ್ಲಿ ತಾಯಿಯವರು ನನ್ನ ಗಮನಕ್ಕೆ ಬಾರದ ಹಾಗೆ ಒಳಗೆ ಬಂದು ಪಕ್ಕಕ್ಕೆ ನಿಂತಿದ್ದರು. ಅವರು "ಯಾಕೋ, ನೀನಿನ್ನೂ ಮಲಗಿಲ್ಲವೇ ?" ಎಂದು ಆತಂಕದಿಂದ ಕೇಳುವಷ್ಟರಲ್ಲಿಯೇ ನಾನು ಅವರತ್ತ ನೋಡಿದೆ. ಅವರು ಬಿಕ್ಕಿ ಬಿಕ್ಕಿ ಅಳುತ್ತಿದ್ದರು !! ತಡೆಯಲಾಗದೆ ನನ್ನ ಕಣ್ಣುಗಳೂ ಸಹ ತೇವಗೊಂಡಿದ್ದವು.

ಅಳುತ್ತಲೇ ನಾನು, "ಅಮ್ಮಾ ಈ ಹಾಸಿಗೆಯ ತುಂಬ ಎಲ್ಲೆಂದರಲ್ಲಿ ತಗಣಿಗಳ ಹಿಂಡೇ ತುಂಬಿದೆ. ತಂದೆಯವರು ಅದ್ಹೇಗೆ ಜೀವನಪೂರ್ತಿ ಈ ಹಾಸಿಗೆಯ ಮೇಲೆ ಮಲಗುತ್ತಿದ್ದರಮ್ಮಾ ?" – ಎಂದು ವಿಸ್ಮಯಭರಿತ ಪ್ರಶ್ನೆ ಕೇಳಿದೆ.

ನನ್ನ ಪ್ರಶ್ನೆಗೆ ಅಮ್ಮನಲ್ಲಿ ಉತ್ತರವಿರಲಿಲ್ಲ !!

ಮೂಲ : **ಸುರೇಂದ್ರ ಮಿಶ್ರಾ**
ನಯಪಲ್ಲಿ, ಭುವನೇಶ್ವರ, ಒರಿಸ್ಸಾ
ಕನ್ನಡಕ್ಕೆ : **ಡಾ॥ ಬಸವರಾಜ ಸಾದರ**
(ಆಕಾಶವಾಣಿಯ ನಿವೃತ್ತ ನಿರ್ದೇಶಕ)
ನಂ. ೨೨೭/ಎ, ಮೊದಲನೆಯ ಮಹಡಿ, ೩೭ನೆಯ ಕ್ರಾಸ್
೨ನೆಯ ಬ್ಲಾಕ್, ರಾಜಾಜಿನಗರ, ಬೆಂಗಳೂರು – ೫೬೦ ೦೧೦



ಒಂದು ಹವ್ಯಾಸಿ ರಂಗತಂಡವನ್ನು ಕಟ್ಟಿ ಬೆಳೆಸುವುದೇ ಹರಸಾಹಸದ ಕೆಲಸವಾಗಿರುವಾಗ, ಇನ್ನು ವೃತ್ತಿ ನಾಟಕ ಕಂಪನಿಗಳನ್ನು ಕಟ್ಟಿ ನಡೆಸಿಕೊಂಡು ಹೋಗುವುದು ಎಂಥ ಕಷ್ಟಕರ ವಿಚಾರ ಎಂಬುದನ್ನು ಹೇಳಬೇಕಾಗಿಯೇ ಇಲ್ಲ. ಹವ್ಯಾಸಿ ತಂಡಗಳಲ್ಲಿ ಖುಷಿಗಾಗಿ ದುಡಿಯುವವರೂ ಇರುತ್ತಾರೆ, ಜೀವನ ನಿರ್ವಹಣೆಗಾಗಿ ಅವರಿಗೆ ಬೇರೊಂದು ಉದ್ಯೋಗವಿರುತ್ತದೆ. ಆದರೆ ವೃತ್ತಿಕಂಪನಿಯಲ್ಲಿ ಹಾಗಲ್ಲ. ವೃತ್ತಿನಟರಿಗೆ ಊಟ, ವಸತಿ, ವೇತನ – ಇಡೀ ಬದುಕು ಕಂಪನಿಯಿಂದಲೇ ಸಿಗಬೇಕು. ಕಂಪನಿ ಮಾಲೀಕರು, ನಾಟಕ ನಡೆಯಲಿ – ನಡೆಯದಿರಲಿ, ಕಲೆಕ್ಷನ್ ಇರಲಿ – ಇಲ್ಲದಿರಲಿ, ನೂರಾರು ಜನರಿಗೆ ಊಟ–ವಸತಿ–ವೇತನವನ್ನು ನೀಡಬೇಕು. ಜೊತೆಗೆ, ಕಲಾವಿದರನ್ನು ಕಂಪನಿಯೊಳಗೇ ಹಿಡಿದಿಡುವ ಕಷ್ಟ ಬೇರೆ. ಊರಿಂದೂರಿಗೆ ಪ್ರಯಾಣಿಸುವ ಪ್ರಯಾಸ. ಇವಿಷ್ಟನ್ನೂ ಸಾಧಿಸಿದ ಅನೇಕ ಮಂದಿ ಪುರುಷರಿದ್ದಾರೆ. ಆದರೆ, ಹಲವಾರು ಮಹಿಳೆಯರು ಕಂಪನಿ ಕಟ್ಟಿ ನಡೆಸಿದ್ದು ವಿಸ್ಮಯಕಾರಿ ಸಂಗತಿ. ಅಂತಹವರಲ್ಲಿ ಹೆಸರಿಸಬೇಕಾದವರು – ಬಚ್ಚಾಸಾನಿ, ಗಂಗೂಬಾಯಿ ಗುಳೇದ ಗುಡ್ಡ, ಸೋನುಬಾಯಿ ದೊಡ್ಡಮನಿ, ಕುಕನೂರ ರೆಹಮಾನವ್ವ, ಸುಮಿತ್ರಮ್ಮ ಕುಂದಾಪುರ, ಚಿಂದೋಡಿ ಲೀಲಾ, ನ್ಯಾಮತಿ ಕಮಲವ್ವ, ಪ್ರೇಮಾ ಗುಳೇದಗುಡ್ಡ, ಮಾಲತಿ ಸುಧೀರ, ಸುಮತಿಶ್ರೀ ನವಲಿ ಹಿರೇಮಠ ಮತ್ತು ರೇಣುಕಾ ಅಕ್ಕಲ ಕೋಟೆ.



ವೃತ್ತಿಕಂಪನಿ ಕಟ್ಟಿದ ಮಹಿಳೆಯರಲ್ಲಿ ಮೊದಲಿಗಳು ಬಚ್ಚಾಸಾನಿ. ೧೯೦೮ರಲ್ಲಿಯೇ ತನ್ನ ೭ ಸಹೋದರಿಯರೊಂದಿಗೆ 'ಸ್ತ್ರೀ ಸಂಗೀತ ನಾಟಕ ಮಂಡಳಿ'ಯನ್ನು ಕಟ್ಟಿದಳು. ಗೇಟ್‌ಕೀಪರ್ ಕೆಲಸದಿಂದ ಹಿಡಿದು ನಾಟಕದ ನಟ – ನಟಿಯರೆಲ್ಲ ಇವೇ ಸೋದರಿಯರು. ಬಚ್ಚಾಸಾನಿ ಹೆಚ್ಚಾಗಿ ಪುರುಷಪಾತ್ರಗಳನ್ನು ಮಾಡುತ್ತಿದ್ದಳು. ಸುಮಾರು ೧೭ ವರ್ಷಗಳಷ್ಟು ಕಾಲ ಕಂಪನಿಯನ್ನು ಯಾವ ಪುರುಷನ ಸಹಾಯವೂ ಇಲ್ಲದೆ, ಸತತವಾಗಿ ನಡೆಸಿದ ದಿಟ್ಟೆ ಇವಳು. ಬಚ್ಚಾಸಾನಿ ಅಭಿನಯಿಸುತ್ತಿದ್ದ ಭಕ್ತ ಮಾರ್ಕಂಡೇಯನ ಪಾತ್ರವನ್ನು ಮರೆಯಲಸಾಧ್ಯ ಎಂದು ನೋಡಿದವರು ಹೇಳುತ್ತಾರೆ. ಏಣಗಿ ಬಾಳಪ್ಪನವರು ೧೯೩೦ರಲ್ಲಿ ಬಚ್ಚಾಸಾನಿಯ ಕಂಪನಿಯಲ್ಲಿದ್ದರು.

# ವೃತ್ತಿಕಂಪನಿಗಳ ಮಾಲೀಕರಾಗಿ ಮಹಿಳೆಯರು



ಗಂಗೂಬಾಯಿ ಗುಳೇದಗುಡ್ಡ ಯಲ್ಲೂಬಾಯಿ ಗುಳೇದಗುಡ್ಡಳ ಸಾಕುಮಗಳು. ಯಲ್ಲೂಬಾಯಿ ಕನ್ನಡ ರಂಗಭೂಮಿಯ ಪ್ರಪ್ರಥಮ ನಟಿ. ಗಂಗೂಬಾಯಿ, ವಾಮನರಾವ್ ಮಾಸ್ತರರ ವಿಶ್ವಗುಣಾದರ್ಶ ನಾಟಕ ಮಂಡಳಿಯಲ್ಲಿ ಮೊದಲು ಬಣ್ಣ ಹಚ್ಚಿದಳಾದರೂ, ೧೯೨೫ರಲ್ಲಿ 'ಶ್ರೀಕೃಷ್ಣ ನಾಟಕ ಮಂಡಳಿ ಗುಳೇದಗುಡ್ಡ' ಎಂಬ ನಾಟಕ ಕಂಪನಿ ಕಟ್ಟಿದಳು. ಓದು – ಬರಹ ಬಾರದ ಈ ಹುಡುಗಿ ಖ್ಯಾತಿಯ ಉತ್ತುಂಗಕ್ಕೇರಿದಳು. ಕಂಪನಿ ಚೆನ್ನಾಗಿ ನಡೆಯುತ್ತಿದ್ದ ಕಾಲದಲ್ಲಿ ನಾಯಕನಟ ಗುರುರಾವ ದೇಶಪಾಂಡೆ ಕಂಪನಿ ತೊರೆದರು. ತಲ್ಲಣಿಸಿಹೋದ ಗಂಗೂಬಾಯಿ ಎದೆಗುಂದದೆ ಬಸವರಾಜ ಮನ್ಸೂರರನ್ನು ನಾಯಕ ನಟನನ್ನಾಗಿ ಬರಮಾಡಿಕೊಂಡರು. ಇವರಿಬ್ಬರ ಜೋಡಿ ತಮ್ಮ ಸಂಗೀತ ಮತ್ತು ಅಭಿನಯಗಳಿಂದ, ಪ್ರೇಕ್ಷಕರಿಂದ ದಿನವೂ 'ಒನ್ಸ್ ಮೋರ್' ಹೇಳಿಸಿಕೊಳ್ಳುತ್ತಿತ್ತು.



ಬೆಂಗಳೂರು, ಮೈಸೂರು, ಮಹಾರಾಷ್ಟ್ರಗಳಲ್ಲಿ ಕಂಪನಿ ಜಯಭೇರಿ ಬಾರಿಸಿತು. ಬಿಜಾಪುರದಲ್ಲಿ ಗಂಗೂಬಾಯಿಗೆ 'ಗಾನರತ್ನ' ಎಂಬ ಬಿರುದು ನೀಡಿ ಗೌರವಿಸಲಾಯಿತು.

ಕಂಪನಿ ಕಟ್ಟಿದ ಇನ್ನೊಬ್ಬ ಮಹಿಳೆ ಸೋನುಬಾಯಿ ದೊಡ್ಡಮನಿ. ಈಕೆ ನಾಟಕ ಕಂಪನಿ ಕಟ್ಟಿದ ಮೊದಲ ಮಹಿಳೆ ಬಚ್ಚಾಸಾನಿಯ ತಂಗಿ ಪೀರವ್ವನ ಮಗಳು. ಬಾಲ್ಯದಲ್ಲಿ ಬಚ್ಚಾಸಾನಿಯಿಂದಲೇ ಸಂಗೀತಾಭ್ಯಾಸ ಮಾಡಿದಳು. ಬಾಲ್ಯದಲ್ಲೇ ಅಬ್ಬಿಗೇರಿ ಕಂಪನಿಯಲ್ಲಿ, ಅಂಬಾಪ್ರಸಾದಿಕಾ ಕಂಪನಿಯಲ್ಲಿ ಬಾಲನಟಿಯಾಗಿ ಹೆಸರು ಮಾಡಿದ ಸೋನುಬಾಯಿ, ಅನಂತರ ನಾಯಕ ನಟಿಯಾಗಿ ಖ್ಯಾತಿ ಪಡೆದಳು. ಸೋನುಬಾಯಿ ಮತ್ತು ವೆಂಕಟರಾವ್ ಅವರ ಪಾಲುದಾರಿಕೆಯಲ್ಲಿ ೧೯೩೭ರಲ್ಲಿ 'ನೂತನ ಸಂಗೀತ ನಾಟಕ ಮಂಡಳಿ' ಹುಟ್ಟಿಕೊಂಡಿತು. ಸೋನುಬಾಯಿ ಅತ್ಯುತ್ತಮ ನಟಿಯಾಗಿದ್ದಳು, ವ್ಯವಹಾರ ಕುಶಲಿಯಾಗಿದ್ದಳು, ಕಂಪನಿಯಲ್ಲಿ ಎಲ್ಲರೂ ಆಕೆಯನ್ನು ಗೌರವಿಸುತ್ತಿದ್ದರು. ಎಲ್ಲವೂ ಚೆನ್ನಾಗಿ ನಡೆಯುತ್ತಿದ್ದಾಗ, ಪಾಲುದಾರ ವೆಂಕಟರಾವ್ ಕಂಪನಿ ಬಿಟ್ಟರು. ಸೋನುಬಾಯಿಗೆ ದಿಕ್ಕೇ ತೋಚದಂತಾಯಿತು. ಆದರೆ, ಶ್ರೀನಿವಾಸ ಕಲಕೋಟಿಯವರ ಸಹಾಯದಿಂದ ಮತ್ತೆ ಕಂಪನಿ ಮರುಜೀವ ಪಡೆಯಿತು.

**ಎಸ್. ಮಾಲತಿ**



ಕಂಪನಿಗೆ 'ವಿಶ್ವೇಶ್ವರ ಸಂಗೀತ ನಾಟಕ ಮಂಡಳಿ' ಎಂದು ಮರುನಾಮಕರಣ ಮಾಡಿದರು. ಕಾಲೇಜ್ ಗರ್ಲ್, ಹೇಮರೆಡ್ಡಿ ಮಲ್ಲಮ್ಮ, ಅಕ್ಕಮಹಾದೇವಿ ಯಂತಹ ನಾಟಕಗಳು ಹೌಸ್‌ಫುಲ್ ಆಗಿ ನಡೆಯುತ್ತಿದ್ದವು. ಕ್ರಮೇಣ ಬೇರೆ ಕಂಪನಿಗಳ ಸ್ಪರ್ಧೆ, ಸೋನುಬಾಯಿಯ ಅನಾರೋಗ್ಯಗಳಿಂದ ಕಂಪನಿ ಕಳೆಗುಂದಿತು.

ರೆಹಮಾನವ್ವ ಕುಕನೂರ ೧೯೫೦ರಲ್ಲಿ ತನ್ನದೇ ಮಾಲೀಕತ್ವದಲ್ಲಿ 'ಶ್ರೀ ಲಲಿತ ಕಲಾ ನಾಟ್ಯ ಸಂಘ' ಎಂಬ ಕಂಪನಿ ಕಟ್ಟಿದಳು. ರೆಹಮಾನವ್ವ ಅದ್ಭುತ ನಟಿ ಹಾಗೂ ಆಕರ್ಷಕ ವ್ಯಕ್ತಿತ್ವದವಳು. ಹರಿಶ್ಚಂದ್ರ ನಾಟಕದಲ್ಲಿ ತಾರಾಮತಿಯ ಪಾತ್ರ ಮಾಡುತ್ತಿರುವಾಗಲೇ ಮಗುವಿಗೆ ಜನ್ಮಕೊಟ್ಟ ಮಹಾತಾಯಿ ಇವಳು. ತಾಯಿ ಕರುಳು, ಚಿತ್ರಾಂಗದಾ, ರಾಜಾ ಹರಿಶ್ಚಂದ್ರ, ಕುರುಕ್ಷೇತ್ರ, ಹೇಮರೆಡ್ಡಿ ಮಲ್ಲಮ್ಮ, ಇವು ಈ ಕಂಪನಿಯ ಜನಪ್ರಿಯ ನಾಟಕಗಳು. ಕಂಪನಿ ಉತ್ತುಂಗದಲ್ಲಿರುವಾಗ, ೧೯೬೬ರಲ್ಲಿ ಶಾರ್ಟ್ ಸರ್ಕ್ಯೂಟ್‌ನಿಂದಾಗಿ ಬೆಂಕಿಯ ಅವಘಡಕ್ಕೆ ತುತ್ತಾಯಿತು. ಆದರೂ, ರೆಹಮಾನವ್ವ ಕಂಪನಿಗೆ ಮರುಜೀವನ ಕೊಡಲು ಹೆಣಗಾಡಿದಳು. ಆ ಕಾಲಕ್ಕೇ ರೆಹಮಾನವ್ವ ಎರಡು ಕಾರುಗಳ ಒಡತಿ. ಎರಡೂ ಕಾರುಗಳನ್ನು, ಮೈಮೇಲಿನ ಒಡವೆಗಳನ್ನೂ ಮಾರಿ ಕಂಪನಿಗೆ ಹಾಕಿದರೂ, ಹಿಂದಿನ ವೈಭವ ಮರುಕಳಿಸಲಿಲ್ಲ. ಒಪ್ಪತ್ತಿನ ಊಟಕ್ಕೂ ಪರದಾಡುವಂತಾಯಿತು. ಇದರ ನಡುವೆ, ತನ್ನ ಮೂರು ಮಕ್ಕಳನ್ನು ಅಪಘಾತದಲ್ಲಿ ಕಳೆದುಕೊಂಡಳು. ಅಪಘಾತದ ಸ್ಥಳಕ್ಕೆ ಧಾವಿಸಲು ಮನೆಯಲ್ಲಿದ್ದ ಪಾತ್ರೆ ಪಡಗಗಳನ್ನು ಮಾರಬೇಕಾಯ್ತು. ಹೀಗೆ ಹೀನಾಯಸ್ಥಿತಿ ತಲುಪಿದಳು ರೆಹಮಾನವ್ವ.

ಮಧ್ಯಮವರ್ಗದಿಂದ ಬಂದಿರುವ ಸುಮಿತ್ರಮ್ಮ ಕುಂದಾಪುರ ಅವರಿಗೆ ಈಗ ೭೭ರ ಹರಯ. ತನ್ನ ೧೬ನೇ ವಯಸ್ಸಿನಲ್ಲೇ ಬಣ್ಣಕ್ಕೆ ಮಾರುಹೋಗಿ, ತನ್ನ ಊರಲ್ಲಿ ಕ್ಯಾಂಪ್ ಹಾಕಿದ್ದ ಗುಬ್ಬಿ ಕಂಪನಿಯೊಂದಿಗೆ, ಮನೆಯಲ್ಲಿ ಹೇಳದೆ ಕೇಳದೆ ಓಡಿ ಹೋದವಳು.

ಗುಬ್ಬಿಕಂಪನಿಯಲ್ಲಿ ಮೊದಮೊದಲು ಸಣ್ಣ ಪುಟ್ಟ ಪಾತ್ರಗಳನ್ನು ಮಾಡಿದರೂ, ಮುಂದೆ ಡಾ॥ ರಾಜ್ ಅವರ ಮೊದಲ ನಾಯಕಿ ಎಂಬ ಹೆಗ್ಗಳಿಕೆಗೆ ಪಾತ್ರರಾದರು. ರಾಜಾಗೋಪಿಚಂದ, ಧರ್ಮರತ್ನಾಕರ,




ಕಾಳಿದಾಸ ಮುಂತಾದ ಇಪ್ಪತ್ತಕ್ಕೂ ಹೆಚ್ಚು ನಾಟಕಗಳಲ್ಲಿ ಈ ಜೋಡಿ ಪ್ರೇಕ್ಷಕರಿಗೆ ಮೋಡಿ ಮಾಡಿತ್ತು.

ನಂತರ ಹಲವಾರು ಕಂಪನಿಗಳಲ್ಲಿ ದುಡಿದು ೧೯೫೨ರಲ್ಲಿ 'ವಿಜಯ ಮಾಲಾ ನಾಟ್ಯ ಸಂಘ ಕುಂದಾಪುರ' ಎಂಬ ಕಂಪನಿಯನ್ನು ಶಿವಯ್ಯಸ್ವಾಮಿ ಲಕ್ಷ್ಮೇಶ್ವರರ ಜೊತೆಗೂಡಿ ಕಟ್ಟಿದಳು. ಅದಾದ ಮೇಲೆ ೧೯೬೧ ಮತ್ತು ೧೯೮೨ – ಹೀಗೆ ಮೂರು ಸಲ ಕಂಪನಿ ಕಟ್ಟಿದವಳೀಕೆ.

ಇವರಿಗೆ ಪ್ರಫುಲ್ಲಾ, ಮಾಲಾ ಎಂಬ ಎರಡು ಹೆಣ್ಣು ಮಕ್ಕಳಿದ್ದಾರೆ. ಮಾಲಾ ರಂಗಭೂಮಿಯ ನಟಿಯಾಗಿ ಹೆಸರು ಮಾಡಿದ್ದಾರೆ.

ಕಂಪನಿ ಮಾಲೀಕರಾಗಿ ಹೆಸರು ಮಾಡಿದವರಲ್ಲಿ ಚಿಂದೋಡಿ ಲೀಲಾ ಪ್ರಮುಖರು. ತಂದೆ ಚಿಂದೋಡಿ ವೀರಪ್ಪ ಪ್ರಖ್ಯಾತ ಸಂಗೀತಗಾರರಾಗಿ, 'ಶರಣಶ್ರೇಷ್ಠ ಗಾನವಿಶಾರದ' ಎಂಬ ಬಿರುದು ಪಡೆದಿದ್ದರು. ಇವರು ೧೯೨೮ರಲ್ಲಿಯೇ 'ಕರಿಬಸವೇಶ್ವರ ಸಂಗೀತ ನಾಟಕ ಮಂಡಳಿ' ಎಂಬ ಕಂಪನಿಯನ್ನು ಕಟ್ಟಿದರು. ವೀರಪ್ಪ – ಶಾಂತಮ್ಮ ದಂಪತಿಗೆ ಎಂಟು ಜನ ಮಕ್ಕಳು. ಮೂರು ಜನ ಹೆಣ್ಣುಮಕ್ಕಳಲ್ಲಿ ಲೀಲಾ ಒಬ್ಬರು. ಇವರ ಹುಟ್ಟುಹೆಸರು ವೀರಮ್ಮ. ೧೯೪೩ರಲ್ಲಿ ಜನಿಸಿ ೧೯೪೮ರಲ್ಲೇ ರಂಗಪ್ರವೇಶ ಮಾಡಿದಳು ಲೀಲಾ.

ಜನಪ್ರಿಯ ನಾಟಕಗಳಾದ 'ಹಳ್ಳಿ ಹುಡುಗಿ', 'ಪೊಲೀಸನ ಮಗಳು'ಗಳಲ್ಲಿ ಲೀಲಾಳದು ಅಮೋಘ ಅಭಿನಯ.

೧೯೭೯ರಲ್ಲಿ ಕೆ. ಬಿ. ಆರ್. ಡ್ರಾಮಾ ಕಂಪನಿಯ ಶಾಖೆಯ ಮಾಲೀಕರಾದರು. ೧೯೮೦ರಲ್ಲಿ ಬೆಳಗಾವಿಗೆ ಕಂಪನಿ ಬಂದ ಮೇಲೆ ಅವರು ಅಲ್ಲಿ ನಡೆಸಿದ ಹೋರಾಟ ಅವಿಸ್ಮರಣೀಯವಾದದ್ದು. ಬೆಳಗಾವಿಯ ಶಿವಾನಂದ ಥಿಯೇಟರಿನಲ್ಲಿ ನಾಟಕವಾಡಲು ಆರಂಭಿಸಿದ ಮೇಲೆ ಎಂ.ಇ.ಎಸ್.ನ ಕಿಡಿಗೇಡಿಗಳು ಲೀಲಾ ಅವರಿಗೆ ಸಾಕಷ್ಟು ತೊಂದರೆ ಕೊಟ್ಟರು. ಥಿಯೇಟರ್ ಮೇಲೆ ಕಲ್ಲೆಸೆಯುವುದು, ಬಾಗಿಲು ಮುರಿಯುವುದು, ಅಶ್ಲೀಲ ಕರಪತ್ರಗಳನ್ನು ಹಂಚುವುದು ಮುಂತಾದ ಕಿರಿಕಿರಿಗೆ ಲೀಲಾ ದಿಟ್ಟವಾಗಿ ಉತ್ತರ ಕೊಟ್ಟರು. ನಾಟಕಗಳು ಭರದಿಂದ ಸಾಗಿದವು.

ವೃತ್ತಿಕೌಶಲದ ಜೊತೆಗೆ ವ್ಯವಹಾರ ಕುಶಲತೆಯೂ ಅವರಲ್ಲಿತ್ತು. ನಾಟಕ ಅಕಾಡೆಮಿ ಅಧ್ಯಕ್ಷರಾಗಿ ಹಲವಾರು ಅಭಿವೃದ್ಧಿ ಕೆಲಸಗಳನ್ನೂ ಮಾಡಿದ್ದಾರೆ. ಪದ್ಮಶ್ರೀ ಪ್ರಶಸ್ತಿ ಪಡೆದ ಮೊದಲ ರಂಗಕಲಾವಿದೆ ಎಂಬ ಗೌರವಕ್ಕೂ ಪಾತ್ರರು.

ನ್ಯಾಮತಿ ಕಮಲವ್ವ, 'ಮಹೇಶ ನಾಟ್ಯ ಸಂಘ ನ್ಯಾಮತಿ' ಕಂಪನಿಯ ಮಾಲೀಕ ಶಾಂತಪ್ಪನವರ ತಾರಾಪತ್ನಿ. ತನ್ನ ಅದ್ಭುತ ನಟನೆಯಿಂದ ಕಂಪನಿಯ ಬಂಪರ್ ಕಲೆಕ್ಷನ್‌ಗೆ ಕಾರಣಳಾದವಳು. ಈಕೆ 'ಮೂಲಾ ನಕ್ಷತ್ರ' ಎಂಬ ನಾಟಕವನ್ನೂ ರಚಿಸಿದ್ದಾಳೆ. ಕಂಪನಿಯೇನೋ ಚೆನ್ನಾಗಿ ನಡೆಯುತ್ತಿತ್ತು. ಆದರೆ ೧೯೭೭ರಲ್ಲಿ ಶಾಂತಪ್ಪ – ಕಮಲವ್ವರ ನಡುವೆ ಕಲಹವುಂಟಾಗಿ ಇಬ್ಬರೂ ಬೇರೆಯಾಗುತ್ತಾರೆ. ಕಮಲವ್ವ ಆಗ ಸುಮ್ಮನೇ ಕೂರಲಿಲ್ಲ. ತನ್ನದೇ ಒಂದು ಕಂಪನಿ ಕಟ್ಟಿ ಹಲವು ವರ್ಷ ನಡೆಸಿದಳು. ಈ ಕಂಪನಿಯ ಬಗ್ಗೆ ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲ.

ಪ್ರೇಮಾ ಗುಳೇದಗುಡ್ಡ ೧೯೮೨ರಲ್ಲಿ ಕಂಪನಿ ಕಟ್ಟಿದವರು. ಇವರ ತಾಯಿ ಸೊಲ್ಲಾಪುರದ ತಮಾಷಾ ಕಲಾವಿದೆ ಸುಲೋಚನಾ. ಸುಲೋಚನಾ ತಮಾಷಾ ಪ್ರದರ್ಶನಕ್ಕೆಂದು ಗುಳೇದಗುಡ್ಡಕ್ಕೆ ಬಂದಿದ್ದಾಗ, ಚಿತ್ರಮಂದಿರದ ಮಾಲೀಕರಾಗಿದ್ದ ಬಸಪ್ಪಾ ಕರೀಗೂಳನ್ನನವರ ಇವರ ಆಕರ್ಷಣೆಗೆ ಒಳಗಾಗಿ ಮದುವೆ ಮಾಡಿಕೊಂಡರು. ಈ ದಂಪತಿಗಳ ಕೂಸೇ ಪ್ರೇಮಾ. ತಾಯಿ ಸುಲೋಚನಾ ಪ್ರೇಮಾಳ ಗುರು. ಪ್ರೇಮಾ ಒಳ್ಳೇ ನೃತ್ಯಪಟುವಾಗಿ ಬೆಳೆದಳು. ಇದಕ್ಕಿದ್ದಂತೆ ಬಸಪ್ಪನವರಿಗೆ ವೈರಾಗ್ಯ ಬಂದಾಗ ಸಂಸಾರದಲ್ಲಿ ಸಮಸ್ಯೆಗಳು ಧುತ್ತೆಂದು ಎದ್ದು ನಿಂತವು. ಪ್ರೇಮಾ ಹತ್ತು ವರ್ಷದವಳಿದ್ದಾಗಿನಿಂದಲೇ ಹವ್ಯಾಸಿ ತಂಡಗಳಲ್ಲಿ ಅಭಿನಯಿಸ ತೊಡಗಿದಳು. ಹೇಗೋ ಎಸ್.ಎಸ್.ಎಲ್.ಸಿ. ಮುಗಿಸಿ ಕಂಪನಿ ನಾಟಕಗಳಲ್ಲಿ ತೊಡಗಿಕೊಂಡಳು. ಅಭಿನಯದಲ್ಲಿ ಹೆಸರು ಮಾಡಿದ ಈಕೆಗೆ ಕಂಪನಿ

## ಸಮೇತನಹಳ್ಳಿ ರಾಮರಾಯರ ಹೆಸರಿನಲ್ಲಿ ಬಹುಮಾನ

ಬೆಂಗಳೂರಿನ ಸಿಂಧುಭೈರವಿ ಕಲಾ ಕುಟೀರವು ಸಮೇತನಹಳ್ಳಿ ರಾಮರಾಯರ ಹೆಸರಿನಲ್ಲಿ 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾಗುವ ಎರಡು ಉತ್ತಮ ಲೇಖನಗಳಿಗೆ ತಲಾ ರೂ. ೫೦೦೦/– ಬಹುಮಾನ ಕೊಡಲು ತೀರ್ಮಾನಿಸಿದೆ. ಪುರುಷರು ಬರೆದ ಉತ್ತಮ ಮಹಿಳಾಪರ ಲೇಖನ, ಮಹಿಳೆಯರು ಬರೆದ ಉತ್ತಮ ಸಣ್ಣಕತೆಗೆ ಈ ಬಹುಮಾನಗಳನ್ನು ಕೊಡಲು ಸಿಂಧುಭೈರವಿ ಕುಟೀರದ ಅಧ್ಯಕ್ಷರಾದ ಭಾರತಿ ಕಾಸರಗೋಡು ಅವರು ಕೋರಿದ್ದಾರೆ. ಪ್ರತಿ ವರ್ಷ ನವೆಂಬರ್ ತಿಂಗಳಲ್ಲಿ ಈ ಬಹುಮಾನಗಳನ್ನು ಘೋಷಿಸಿ, ಕೊಡಲಾಗುವುದು.

– ಸಂ.

ಒಡತಿಯಾಗಬೇಕೆಂಬ ಮಹತ್ವಾಕಾಂಕ್ಷೆ. ಅದನ್ನರಿತ ಆಶಾಪುರ ಗೌಡರೆಂದೇ ಪ್ರಸಿದ್ಧರಾಗಿದ್ದ ಬಸವರಾಜ ಪಾಟೀಲರು ಸಹಾಯ ಮಾಡಿದರು. ೧೯೮೨ರಲ್ಲಿ ಪ್ರೇಮಾ, 'ಶ್ರೀ ಸಂಗಮೇಶ್ವರ ನಾಟ್ಯ ಸಂಘ ಆಶಾಪುರ' ಎಂಬ ಕಂಪನಿಯನ್ನು ಆರಂಭಿಸಿದರು. ೯೦ರ ದಶಕದಲ್ಲಿ ಇದರ ಇನ್ನೊಂದು ಶಾಖೆಯೂ ಆರಂಭವಾಯಿತು. ಕರ್ನಾಟಕದಾದ್ಯಂತ ಇವರ ಕಂಪನಿ ಜಯಭೇರಿ ಬಾರಿಸಿತು.

೨೦೦೭ರಲ್ಲಿ ಆಶಾಪುರ ಗೌಡರು ಅಗಲಿದರು. ಆದರೂ ಪ್ರೇಮಾ ಒಬ್ಬಂಟಿಯಾಗಿ ಕಂಪನಿಯನ್ನು ನಡೆಸಿಕೊಂಡು ಬರುತ್ತಿದ್ದಾರೆ. ಮಗಳು ಸೀಮಾ ಮತ್ತು ಅಳಿಯ ಅಶೋಕರ ಜೊತೆ ಸಂತೃಪ್ತ ಜೀವನ ನಡೆಸುತ್ತಿದ್ದಾರೆ.

'ಕರ್ನಾಟಕ ಕಲಾವೈಭವ ಸಂಘ' ಕಂಪನಿಯ ಒಡತಿ ಮಾಲತಿ ಸುಧೀರ್ ಹುಟ್ಟಿದ್ದು ಆಂಧ್ರದ ಅನಂತಪುರದಲ್ಲಿ. ತಂದೆ ಕೆ.ಎಸ್.ಆರ್.ಟಿ.ಸಿ.ಯಲ್ಲಿ ನೌಕರ. ವರ್ಗವಾಗಿ ಹುಬ್ಬಳ್ಳಿಗೆ ಬಂದರು. ೧೯೭೬ರಲ್ಲಿ ಹುಬ್ಬಳ್ಳಿಯಲ್ಲಿ ಗಣರಾಜ್ಯೋತ್ಸವ ಕಾರ್ಯಕ್ರಮದಂದು ಮಾಲತಿ ಡ್ಯಾನ್ಸ್ ಮಾಡಿದರು. ಮೆಚ್ಚಿದ ಪ್ರೇಕ್ಷಕರು ಬಾಲಕಿಯಿಂದ ಐದು ಡ್ಯಾನ್ಸ್ ಮಾಡಿಸಿದರು. ಅದರ ಮರುದಿನವೇ ಇವರನ್ನು 'ಕವಳೇಕರ ಮ್ಯೂಸಿಕಲ್ ಪಾರ್ಟಿ'ಯವರು ಕರೆದುಕೊಂಡು ಹೋದರು.

೧೯೭೭ರಲ್ಲಿ ಹುಬ್ಬಳ್ಳಿಗೆ 'ಮಿನುಗುತಾರೆ ಮಿತ್ರ ಮಂಡಳಿ' ಬಂದಿತ್ತು. 'ಮನೆಮಗಳು' ನಾಟಕ ವಾಡುತ್ತಿದ್ದರು. ಈ ನಾಟಕದಲ್ಲಿ ಮಾಲತಿಯ ಡ್ಯಾನ್ಸ್ ಇತ್ತು. ಪಿ.ಯು.ಸಿ. ಎರಡನೇ ವರ್ಷಕ್ಕೆ ಓದು ನಿಲ್ಲಿಸಿದಳು. 'ಮನೆ ಮಗಳು' ನಾಟಕದಲ್ಲಿ ರಾಜಶ್ರೀ ಎಂಬ ಹಾಸ್ಯಪಾತ್ರ ಮಾಡಿದಳು. ಚಿತ್ರನಟ ಸುಧೀರ್ ಅದೇ ಕಂಪನಿಯಲ್ಲಿದ್ದರು. ಇಬ್ಬರೂ ಪ್ರೀತಿಸಿ ಮದುವೆ ಯಾದರು. ಈ ಮದುವೆಯನ್ನು ಮಾಡಿಸಿದವರು ಚಿತ್ರನಟಿ ಕಲ್ಪನಾ.

ಮದುವೆಯಾದ ಮೇಲೆ ಒಂದೆರಡು ವರ್ಷ ರಂಗಭೂಮಿಯಿಂದ ಹಿಂದೆ ಸರಿದರು. ಅನಂತರ ಮತ್ತೆ ಗುಡಗೇರಿ ಕಂಪನಿಯಲ್ಲಿ ಅಭಿನಯ. ೧೯೮೮ರಲ್ಲಿ ಸುಧೀರ್ 'ಕರ್ನಾಟಕ ಕಲಾವೈಭವ ಸಂಘ' ಕಂಪನಿ ಆರಂಭಿಸಿದರು. ೨೦೦೦ರಲ್ಲಿ ಸುಧೀರ್ ಇನ್ನಿಲ್ಲವಾದಾಗ ಕಂಪನಿ ಮುಚ್ಚುವ ಸ್ಥಿತಿಗೆ ತಲುಪಿತ್ತು. ಆದರೆ, ಮಾಲತಿ ಎದೆಗುಂದಲಿಲ್ಲ. ಧೈರ್ಯದಿಂದ ಕಂಪನಿಯ ಜವಾಬ್ದಾರಿ ಹೊತ್ತು ಅದನ್ನು ಈಗಲೂ ಮುನ್ನಡೆಸಿಕೊಂಡು ಬರುತ್ತಿದ್ದಾರೆ. ನಾಟಕ ಅಕಾಡೆಮಿ ಅಧ್ಯಕ್ಷೆಯಾಗಿಯೂ ಕಾರ್ಯ ನಿರ್ವಹಿಸಿದ್ದಾರೆ.

೧೯೮೩ರಲ್ಲಿ 'ಕುಮಾರೇಶ್ವರ ಪ್ರಸಾದಿತ ಸಂಗೀತ ನಾಟಕ ಮಂಡಳಿ' ಕಂಪನಿಯನ್ನು ಕಟ್ಟಿದವರು ಸುಮತಿಶ್ರೀ ನವಲಿ ಹಿರೇಮಠ. ತನ್ನ ೭ನೇ ವಯಸ್ಸಿಗೇ ರಂಗವನ್ನೇರಿದ ಈಕೆ ಸತ್ಯಹರಿಶ್ಚಂದ್ರ ನಾಟಕದಲ್ಲಿ ಲೋಹಿತಾಶ್ವನ ಪಾತ್ರ ಮಾಡಿದ್ದಳು. ನಂತರ ಶ್ರೀ ಕುಮಾರೇಶ್ವರ ನಾಟ್ಯ ಸಂಘ ಚಿತ್ರಗಿ, ಗುಡಗೇರಿ ಕಂಪನಿ, ಬಿ. ಆರ್. ಅರಿಶಿನಗೋಡಿ ಅವರ ಕಂಪನಿಗಳಲ್ಲಿ ಅಭಿನಯಿಸಿ ಖ್ಯಾತಿ ಪಡೆದಳು. ನಂತರ ತಾನೇ ಒಂದು ಕಂಪನಿ ಕಟ್ಟಿ, ಹನ್ನೊಂದು ವರ್ಷಗಳ ಕಾಲ ಉತ್ತರ ಕರ್ನಾಟಕದಾದ್ಯಂತ ಸಂಚರಿಸಿದಳು.

೧೯೭೬ರಲ್ಲಿ 'ಆದಿಶಕ್ತಿ ಕಲಾ ನಾಟ್ಯ ಸಂಘ ಚಿತ್ರದುರ್ಗ' ಎಂಬ ಇನ್ನೊಂದು ಕಂಪನಿ ಕಟ್ಟಿದಳು. ಮಾತನಾಡುವಾಗ ಪುರುಷರ ಬಗ್ಗೆ ಕಹಿಮಾತು ಗಳನ್ನಾಡುವ ಸುಮತಿಶ್ರೀ ಪುರುಷಪ್ರಧಾನ ಸಮಾಜದಿಂದ ಬಹಳ ನೊಂದಿರಬೇಕು ಎಂದು ಸಂದರ್ಶಕರೊಬ್ಬರು ಹೇಳುತ್ತಾರೆ. ಇವರ ಕಂಪನಿಯ 'ದೇವಿ ಮಹಾತ್ಮೆ' ಮತ್ತು 'ಇಟಗಿಯ ಭೀಮಾಂಬಿಕೆ ಮಹಾತ್ಮೆ' ನಾಟಕಗಳು ಸಾವಿರಾರು ಪ್ರಯೋಗಗಳನ್ನು ಕಂಡಿವೆ.

ಇವರಿಗೆ 'ಕರುನಾಡು ಕುವರಿ' ಎಂಬ ಪ್ರಶಸ್ತಿ, ನಾಟಕ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿಗಳು ಸಂದಿವೆ.

೨೦೦೭ರಲ್ಲಿ 'ಶ್ರೀ ಸ್ವಾಮಿ ಸಮರ್ಥ ಕಲಾ ಸಂಘ ಅಕ್ಕಲಕೋಟೆ' ಎಂಬ ಕಂಪನಿಯನ್ನು ಕಟ್ಟಿದವಳು ರೇಣುಕಾ ಅಕ್ಕಲಕೋಟೆ. ೧೯೭೮ರಲ್ಲಿ ಮಹಾರಾಷ್ಟ್ರದ ಅಕ್ಕಲಕೋಟೆಯಲ್ಲಿ ಜನಿಸಿದ ರೇಣುಕಾ, ತಾಯಿ ಯಂತೆಯೇ ತಾನೂ ಕೂಡ ನಟಿಯಾದಳು. ಕರ್ನಾಟಕ ಮಹಾರಾಷ್ಟ್ರ ಗಡಿಭಾಗದಿಂದ ಬಂದ ಈ ರೇಣುಕಾ ಕಲಿತದ್ದು ಮರಾಠಿ ೫ನೇ ತರಗತಿ. ಕನ್ನಡ ಮಾತನಾಡಲು ಬರದಿದ್ದ ಇವಳು ಉತ್ತರ ಕರ್ನಾಟಕದಲ್ಲಿ ಕಂಪನಿ ಮಾಲೀಕಳಾಗಿ ಮೆರೆದಳು. ಕನ್ನಡ ಕಲಿತು ಕರ್ನಾಟಕದಲ್ಲೇ ಶಾಶ್ವತವಾಗಿ ನೆಲೆಸಿದಳು. ಮೊದಲ ಕಂಪನಿ ಆರಂಭಿಸಿದ ಮೂರು ವರ್ಷಗಳಲ್ಲೇ ಇನ್ನೊಂದು ಕಂಪನಿ ಕಟ್ಟಿ, ಎರಡು ಕಂಪನಿಗಳ ಮಾಲೀಕಳಾಗುತ್ತಾಳೆ. ಹಲವಾರು ವರ್ಷಗಳಿಂದ ಕಂಪನಿಗಳನ್ನು ನಡೆಸಿಕೊಂಡು ಹೋಗುತ್ತಿರುವ ರೇಣುಕಾ ನಿಗರ್ವಿ ಇತ್ತೀಚೆಗೆ, 'ಕಿನ್ನರಿ', 'ಆ ಊರು ಈ ಊರು' ಧಾರವಾಹಿಗಳಲ್ಲಿ ಅಭಿನಯಿಸಿದ್ದಾಳೆ.

ಒಂದು ಉದ್ಯಮವನ್ನು ನಡೆಸಲು ಬೇಕಾದ ಎದೆಗಾರಿಕೆ, ಛಲ, ಜೀವನೋತ್ಸಾಹ, ವ್ಯವಹಾರ ಕುಶಲತೆಗಳೆಲ್ಲವನ್ನೂ ಈ ಮಹಿಳೆಯರು ನಮಗೆ ತೋರಿಸಿಕೊಟ್ಟಿದ್ದಾರೆ. ಇವರ ದಿಟ್ಟತನ ನಮ್ಮೆಲ್ಲರಿಗೂ ಸ್ಫೂರ್ತಿಯಾಗಲಿ.

*ಆಕರಗ್ರಂಥ : 'ವೃತ್ತಿರಂಗಭೂಮಿಗೆ ಉತ್ತರ ಕರ್ನಾಟಕದ ಮಹಿಳೆಯರ ಕೊಡುಗೆ' – ಡಾ॥ ದೇವಕನ್ನಿಕಾ ಡಿ. ನಗರಕರ್*


**ಎಸ್. ಮಾಲತಿ**
ಮಹಾಲಸ ನಿಲಯ, ಜೋಗ ರಸ್ತೆ
ಸಾಗರ – ೫೭೭ ೪೦೧
ಶಿವಮೊಗ್ಗ ಜಿಲ್ಲೆ


ಕಾವ್ಯಲೋಕ

# ಗಜ಼ಲ್

ಕಫ಼್ನ್ ಹೊದ್ದ ನನ್ನ ಡೋಲಿ ಎತ್ತುವ ಹೆಗಲೆಲ್ಲವು ಒಂದೇ
ಅಳುವ ಕಂಬನಿಗೆ ಯಾವ ಜಾತಿಯ ಹೆಸರು

ಆಡಿದ ಮಾತು ತಿಂದ ತುತ್ತು ನಡೆದ ಜಾಗಕ್ಕೆಲ್ಲ ನಾನು ಋಣಿ
ಮೊಹಬತ್ತಿನ ಕರೆಯಿಂದ ಅಪ್ಪುಗೆಯ ಮುತ್ತೊಂದು ಸಾಕು ಸಖಿ

ನಾನು ಇತ್ತೀಚೆಗೆ ಆಕೆಯ ನಶೆಯಲ್ಲಿದ್ದೇನೆ
ಸೂರ್ಯ ಚಂದ್ರರನ್ನ ಬೇರ್ಪಡಿಸಿ ಹೆಸರಿಸಲಾರದಷ್ಟು ಸಖಿಯ ಅಮಲು

ಬಾ ಸಂಭೋಗಿಸು ಎಲ್ಲ ದರ್ದ್ ಮರೆತು ಸಂಭವಿಸಲಿ
ಮೊಹಬತ್ತಿನ ಹೊಸ ಬೀಜಗಳು ಬಿತ್ತಿ ಹರಡಲಿ ನನ್ನೆದೆಯಲಿ

ದಸ್ತರ್‌ಖಾನ್ ಹಾಸಿದ್ದೇನೆ ಶರೀಫನ ಮನೆಯಲ್ಲಿ
ಒಂದೇ ಬರ್ತಾನ್ ಇಟ್ಟು ಆಜಾನ್ ಕೂಗಿದ್ದೇನೆ ಜಂಗಮ ಫಕೀರರ ಊಟಕ್ಕೆ...


**ಶರೀಫ್ ಹಸಮಕಲ್**
ಸಂಶೋಧನ ವಿದ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬

# ‘ಶದಕ್ರಿ’ ಯೋಗದ ಹಿಂದೆ ಮುಂದೆ



**ಕೆ. ಎಸ್. ರವಿಕುಮಾರ್**

“ಗುರುಗಳೇ, ಶರೀರ ದಹನ ಕ್ರಿಯಾ (‘ಶದಕ್ರಿ’) ಯೋಗದ ಬಗ್ಗೆ ಒಂದಿಷ್ಟು ತಿಳಿಸಿಕೊಡಿ” ಎಂದು ವಿನಂತಿಸಿಕೊಂಡರು. ಗುರುಗಳು ಈಗ ನಿಜಕ್ಕೂ ಕಕ್ಕಾಬಿಕ್ಕಿಯಾದರು. ಅವರಿಗೆ ಈ ತನಕ ಆಲಿಸಿದ ಬೋಧೆಗಳಲ್ಲಾಗಲಿ, ಓದಿದ ಪ್ರಾಚೀನ ಸಾಹಿತ್ಯದಲ್ಲಾಗಲಿ ಇಂತಹುದೊಂದು ಶಬ್ದಸಮೂಹದ ಪರಿಚಯವೇ ಆಗಿರಲಿಲ್ಲ. ಇಪ್ಪತ್ತೈದು ವರ್ಷಗಳ ಸನ್ಯಾಸಾವಸ್ಥೆಯಲ್ಲಿ ಇಂತಹದೊಂದು ಯೋಗದ ಬಗ್ಗೆ ಅಪ್ಪಿತಪ್ಪಿಯೂ ಕಲ್ಪಿಸಿಕೊಂಡವರಲ್ಲ. ಪಾಪ, ಇದೆಲ್ಲ ಅವರ ಪಟ್ಟ ಶಿಷ್ಯನ ಸೃಷ್ಟಿ ಎಂದು ಅವರಿಗೆ ಮೊದಲೇ ತಿಳಿದಿದ್ದರೆ...

“ನಾವು ಒಳ ಹೋಗಿ ಆಸೀನರಾಗಬಹುದೇ ?”

ಗೆಳೆಯನ ಜೊತೆ ಸೆಲ್‌ಫೋನ್ ಸಂಭಾಷಣೆಯ ಸಲ್ಲಾಪದಲ್ಲಿದ್ದ ಸ್ವಾಗತಕಾರಿಣಿ ಅನುಮತಿ ಕೇಳಿದ ಮಹಿಳೆಯ ನಿಷ್ಕಲ್ಮಷ ಮುಗುಳುನಗೆಯಿಂದ ಕೊಂಚ ವಿಚಲಿತಗೊಂಡು ಗೋಡೆ ಗಡಿಯಾರದ ಕಡೆಗೊಮ್ಮೆ ನೋಡಿ ಒಳಹೋಗಬಹುದೆಂದು ತಲೆಯಾಡಿಸಿದಳು.

ಎಂಟ್ಹತ್ತು ಜನರ ಗುಂಪು ಪ್ರವಚನದ ಹಜಾರವನ್ನು ಪ್ರವೇಶಿಸಿತು. ಪಾದ ಪೂಜಾನಂದ ಸ್ವಾಮಿ ಹುಬ್ಬೇರಿಸಿ ಒಳಬಂದವರನ್ನು ಈಗಲೇ ಯಾಕೆ ಬಂದರು ಎಂಬಂತೆ ನೋಡಿದನು. ಗುರುಗಳ ಪ್ರವಚನ ಶುರುವಾಗಲು ಇನ್ನೂ ಹತ್ತು ನಿಮಿಷ ಬಾಕಿ ಇತ್ತು. ತಮ್ಮವರೇ ಆಗಿದ್ದರೆ ‘ಹೊರಹೋಗಿ, ಆಮೇಲೆ ಬನ್ನಿ’ ಎಂದು ಮುಲಾಜಿಲ್ಲದೆ ತಾಕೀತು ಮಾಡಬಹುದಾಗಿತ್ತು. ಆದರೆ ಈಗ ಬಂದಿರುವವರೆಲ್ಲ ವಿದೇಶಿ ಭಕ್ತರು, ದೇಶೀಯರಂತೆ ದೇಣಿಗೆ ನೀಡಲು ಹಿಂದೆ ಮುಂದೆ ನೋಡುವವರಲ್ಲ. ನೀಡುವ ಪ್ರಮಾಣವೂ ಹೆಚ್ಚು. ಈ ವ್ಯತ್ಯಾಸ ನೆನಪಾದ ಕೂಡಲೇ ಅವನು ಹುಬ್ಬುಗಂಟನ್ನು ಮುಗುಳುನಗೆಗೆ ಬದಲಿಸಿದನು.

“ಕುಳಿತುಕೊಳ್ಳಿ, ದಯಮಾಡಿ ಹತ್ತು ನಿಮಿಷ ನಿರೀಕ್ಷೆ ಮಾಡಿ.”

“ಗುರುಗಳೀಗ ಎಲ್ಲಿದ್ದಾರೆ ?” ಒಂದು ಲೋಕಾಭಿರಾಮದ ಪ್ರಶ್ನೆ ತೂರಿಬಂತು. ಪ್ರಶ್ನಿಸಿದವರು ಪರ್ಡ್ಯೂ ವಿ.ವಿ.ಯ ಪ್ರೊಫೆಸರ್ ರಾಬರ್ಟ್ ಗೋಟಾಗ್ಯೂ.

ಪಾದ ಪೂಜಾನಂದ ತನಿಖೆ ಮಾಡುವವನಂತೆ ಅವರ ಮುಖವನ್ನೇ ದಿಟ್ಟಿಸಿದನು. ಅಲ್ಲೇನೂ ಕುಚೇಷ್ಟೆ ಕಾಣಬರಲಿಲ್ಲ. ಕೆಲವು ನಿಮಿಷಗಳ ನಿರೀಕ್ಷೆಯನ್ನು ಮಾತಿನಿಂದ ಸಾಗಹಾಕುವ ಉದ್ದೇಶ ಮಾತ್ರ ಇರುವಂತಿತ್ತು.

“ಅವರೀಗ ಶದಕ್ರಿ ಯೋಗ ಅಥವಾ ಶರೀರ ದಹನ ಕ್ರಿಯಾ ಯೋಗದಲ್ಲಿ ತಲ್ಲೀನರಾಗಿರುವಂತಿದೆ.” ಸಂಸ್ಕೃತದ ಪಾರಿಭಾಷಿಕ ಶಬ್ದಗಳು ಇನ್ನಷ್ಟು ಸಂಭಾವ್ಯ ಪ್ರಶ್ನೆಗಳಿಗೆ ಬ್ರೇಕ್ ಹಾಕಬಹುದು ಎಂಬ ಲಘು ತೀರ್ಮಾನ ಪಾದ ಪೂಜಾನಂದನದು. ಆದರೆ ಪ್ರೊಫೆಸರ್ ಸುಮ್ಮನಿದ್ದಾರೆಯೆ ? ಭಾರತಕ್ಕೆ ಬರುವ ಮುನ್ನ ಅವರು ಒಂದಿಷ್ಟು ಸನಾತನ ಸಾಹಿತ್ಯವನ್ನು ಓದಿಕೊಂಡು ಬಂದಿದ್ದರು. ಅವರದು ಸಹಜ ಕುತೂಹಲ.

“ಅದ್ಯಾವ ಬಗೆಯ ಯೋಗ ?”

“ಅದು ನಮ್ಮ ಗುರುಗಳದೇ ಆವಿಷ್ಕಾರ. ದೇಹ ತಾಪದ ಮೇಲೆ ಹಿಡಿತ ಸಾಧಿಸಿ ಮನಸ್ಸಿನ ತಾಪವನ್ನು ತಣಿಸಿಕೊಳ್ಳುವ ವಿಶಿಷ್ಟ ವಿಧಾನ. ಮೋಕ್ಷಕ್ಕೆ ದೇಹ ಮತ್ತು ಮನಸ್ಸುಗಳು ಕೂಡಿ ಕೆಲಸ ಮಾಡುತ್ತವೆ ಎಂದು ಅವರು ತಮ್ಮ ಮೇಲೇ ನಡೆಸಿಕೊಂಡ ಪ್ರಯೋಗಗಳಿಂದ ಕಂಡುಕೊಂಡಿದ್ದಾರೆ.” ಉಡಾಫೆಯ ಕಾರಣ ನೀಡಿದರೆ ಶಂಕೆಯನ್ನು ತಣಿಸುವುದು ಕಷ್ಟವೆಂದು ಅವನಿಗೆ ತಿಳಿದಿಲ್ಲವೇ ? ಅನಿರೀಕ್ಷಿತ ಕಸಿವಿಸಿಯನ್ನು ಸಮಯಸ್ಫೂರ್ತಿಯ ‘ಕ್ರಿಯೇಟಿವ್’ ಕಾರಣಗಳಿಂದ ನಿಭಾಯಿಸುವುದರಲ್ಲೂ ಅವನು ಚಾಣಾಕ್ಷ. ಶರೀರ ಸುಖಕ್ಕೆ ಹೆಚ್ಚು ಮಹತ್ವ ಕೊಡುವ ಪಾಶ್ಚಿಮಾತ್ಯರಿಗೆ ತಾನು ಕೊಟ್ಟ ಕಾರಣ ಒಮ್ಮೆಲೆ ಒಪ್ಪಿತವಾಗಬಹುದು ಎಂಬ ಲೆಕ್ಕಾಚಾರವೂ ಅವನದು.

ಕೊರತೆಗಳಿಗೆಂದೂ ಮುಖಾಮುಖಿಯಾಗದ ಪಶ್ಚಿಮದ ನಿರುಮ್ಮಳ ಜೀವಿಗಳಿಗೆ ‘ಎಲ್ಲ ಸುಖಗಳ ಒಟ್ಟು ಮೊತ್ತ ನಿರಾಸೆ’ ಎಂಬ ‘ಸತ್ಯ’ ಮನದಟ್ಟಾಗಿಬಿಟ್ಟಾಗ ಸನಾತನ ಮೌಲ್ಯಗಳು ಥಟ್ಟನೆ ಇಷ್ಟವಾಗುವುದು ಈ ಬಗೆಯ ವಾದಸರಣಿ ಮತ್ತು ಅರ್ಥೈಸುವಿಕೆಯ ಚಾತುರ್ಯಗಳಿಂದ.

ಆದರೆ ಔಪಚಾರಿಕತೆ ನೆನಪಾಗಿ ಪ್ರೊಫೆಸರ್ ಸುಮ್ಮನಾದರು. ನಿಮಿಷಗಳು ಸರಿದವು. ಎಲ್ಲರ ದೃಷ್ಟಿ ಗುರುಗಳ ಬರವಿನ ಕಡೆಗಿತ್ತು. ನಿಗದಿತ ಸಮಯಕ್ಕೆ ಒಂದು ನಿಮಿಷ ಇರುವಂತೆಯೇ ಗುರುಗಳು ಕಾಣಿಸಿಕೊಂಡರು. ಅವರ ಹಿಂದೆ ಅರೆ ತೆರೆದ ಬೃಹತ್ ಕದ. ಅದರ ಹಿಂದೆ ಆಕೃತಿಯೊಂದರ ಗೆಜ್ಜೆ ಸದ್ದು ಸರಿದುಹೋದಂತೆ ಭಕ್ತೆಯೊಬ್ಬರಿಗೆ ಭಾಸವಾಯಿತು.

ಪಾದ ಪೂಜಾನಂದ ಸ್ವಾಮಿ ಈ ಮುಂಚೆ ದಿವಂಗತ ಪುಣ್ಯ ಪೀಠಾಧೀಶ

ಶ್ರೀ ಶ್ರೀ ಶ್ರೀ ಅಂತರಂಗ ಶುದ್ಧಿ ಅನುಭೂತಿ ಸ್ವಾಮಿಗಳ ಮಠದಲ್ಲಿ ಸಾಕಷ್ಟು ಪಾರುಪತ್ಯೆಯ ಅನುಭವ ಪಡೆದಿದ್ದ. ನಂತರ ಮಠಾಂತರಗೊಂಡು ಸದ್ಗುರು ಶ್ರೀ ಶ್ರೀ ಶ್ರೀ ಪ್ರೇಮ ಪೀಠಾನಂದ ಭವಮುಕ್ತ ಚರಣಂಗಳವರಲ್ಲಿ ಪಾದ ಸೇವೆಗೈಯುತ್ತ ಹದಿನೈದು ವರ್ಷಗಳೇ ಸಂದಿವೆ. ಅವರ ಆಪ್ತ ಕಾರ್ಯದರ್ಶಿ, ಬಲಗೈ ಬಂಟ, ನಂಬಿಕಸ್ಥ, ವ್ಯವಹಾರ ಚತುರ, ಆಂತರಿಕ ಸಲಹೆಗಾರ, ಆಡಳಿತ ನಿಪುಣ, ಖಜಾಂಚಿ ಹೀಗೆ ಎಲ್ಲವೂ ಆದ ಆತನಿಗೆ ಮಾತ್ರ ಗುರುಗಳ ಹೊರತಾಗಿ ಮಠದ 'ರಹಸ್ಯ'ಗಳನ್ನು ನಿಭಾಯಿಸುವ ಕಲೆ ಚೆನ್ನಾಗಿಯೇ ತಿಳಿದಿದೆ. ಗುರುಗಳ ಉತ್ತರಾಧಿಕಾರಿ ಅವನೇ ಎಂದು ಕಾನೂನುಬದ್ಧವಾಗಿ ದಾಖಲೆಯಲ್ಲಿ ಕಾಣಿಸುವುದಷ್ಟೆ ಬಾಕಿ. ಗುರುಗಳು ತಮಗೆಂದೇ ಮೀಸಲಿದ್ದ ಭವ್ಯ ಶ್ರೀಗಂಧದ ಪೀಠದಲ್ಲಿ ವಿರಾಜಮಾನರಾದರು. ತದೇಕಚಿತ್ತದಿಂದ ವಿನೀತರಾಗಿ ಕುಳಿತ ಭಕ್ತರನ್ನೆಲ್ಲ ಒಂದು ಕಡೆಯಿಂದ ವೀಕ್ಷಿಸಿದರು. ಎಂತಹುದೋ ತೃಪ್ತ ಭಾವದಿಂದ ಅವರ ಮುಖಾರವಿಂದ ನಳನಳಿಸುತ್ತಿತ್ತು. ಒಮ್ಮೆ ಕಣ್ಣುಮುಚ್ಚಿ ಏನನ್ನೋ ಧ್ಯಾನಿಸಿದರು. ಕಣ್ಣು ತೆರೆದು ಒಂದು 'ದೈವಿಕ' ಮುಗುಳುನಗೆ ಬೀರಿದರು. ಆ ನಗೆಯ ಕೃತಕತೆಯನ್ನು ಗ್ರಹಿಸುವಷ್ಟು ವ್ಯವಧಾನ ಭಕ್ತರಿಗಿರಲಿಲ್ಲ. ಅವರೆಲ್ಲ ಪ್ರವಚನ ಕೇಳಲು ಉತ್ಸುಕರಾಗಿದ್ದರು. ನಿರರ್ಗಳ ಪ್ರವಚನ ಪ್ರವಹಿಸತೊಡಗಿತು. ಗುರುಗಳ ಇಂಗ್ಲಿಷ್ ಕಿವಿಗೆ ಮಧುರವಾಗಿತ್ತು. ಗ್ರಹಿಕೆಗೆ ಸರಳವಿತ್ತು. ಶಬ್ದಗಳ ಮೇಲೆ ಒಳ್ಳೆಯ ಹಿಡಿತವಿತ್ತು.

ಗುರುಗಳು ವೇದಾಂತ ಸಾರ, ಧರ್ಮ ಸೂಕ್ಷ್ಮತೆ, ದಾನ ಮೀಮಾಂಸೆ, ಆತ್ಮೋದ್ಧಾರ, ಸಂಸ್ಕಾರ ಸಂಪನ್ನತೆ, ಭಕ್ತಿ ರಸಸುಧಾ, ದಿವ್ಯಾನಂದ ಸಂಪ್ರಾಪ್ತಿ, ವ್ರತನೇಮ v/s ವಿಷಯ ಲೋಲುಪತೆ, ನಿಷ್ಕಾಮ ಕರ್ಮ, ವಿರಕ್ತ ಮನಸ್ಸಿನ ವಿಹಾರ, ಪಾಪ ಸಂಚಯ, ಜನ್ಮಾಂತರದ ಕರ್ಮಜಾಲ, ವ್ಯಕ್ತಿಯ ನಾಲ್ಕು ಅಗತ್ಯಗಳಾದ ಧರ್ಮ (ನಡವಳಿಕೆ), ಅರ್ಥ (ಸಂಪತ್ತು), ಕಾಮ (ಬಯಕೆಗಳು) ಮತ್ತು ಮೋಕ್ಷ (ಈಶ್ವರ ಸಾನಿಧ್ಯ) ...ಹೀಗೆ ಹಲವು ಹತ್ತು ವಿಚಾರಗಳ ಕುರಿತು ಮಾತನಾಡಿದರು. ಇನ್ಯಾವ ವಿಷಯ ಬಾಕಿ ಇದೆ ಎಂದುಕೊಳ್ಳುವಾಗ ಪ್ರೊಫೆಸರ್ ನಡುವೆ ಬಾಯಿ ಹಾಕಿ ಕೇಳಿದರು, "ಗುರುಗಳೇ, ಪರಕಾಯ ಪ್ರವೇಶ ಎಂದರೇನು ?"

ಒಂದರೆಕ್ಷಣ ಗುರುಗಳು ತಬ್ಬಿಬ್ಬಾದರು. ಕೀಟಲೆಗೆ ಕೇಳಿದ ಪ್ರಶ್ನೆಯೆ ? ಪ್ರೊಫೆಸರರ ಕುತೂಹಲ ತುಂಬಿದ ಕಣ್ಣುಗಳನ್ನು ನೋಡಿದರೆ ಹಾಗೆನ್ನಿಸುವುದಿಲ್ಲ. ಆದರೆ ಹೇಗೆ ವಿವರಿಸುವುದು ? ಲೈಂಗಿಕಾಭೀಪ್ಸೆ ಮತ್ತು ಶಂಕರನ ಉದಾಹರಣೆಗಳನ್ನು ಪ್ರಸ್ತಾಪಿಸದೇ ಪ್ರತಿಕ್ರಿಯಿಸುವುದು ಸೂಕ್ತ ಎನಿಸಿತು ಅವರಿಗೆ. ಸಾವರಿಸಿಕೊಂಡು, "ಅದು ಮಾಯೆಯ ರಹಸ್ಯವನ್ನು ಅರಿಯುವ ಬಗೆ" ಎಂದರು.

"ಮಾಯೆ ಎಂದರೇನು ?"

'ಬದುಕಿದೆಯಾ ಬಡಜೀವವೇ' ಎಂದು ಮನದೊಳಗೇ ಸಂತೈಸಿಕೊಂಡ ಗುರುಗಳು 'ಜಗನ್ಮಿಥ್ಯ ಬ್ರಹ್ಮಸತ್ಯ'ದ ತಿರುಳನ್ನು ತೆರೆದಿಟ್ಟರು.

"ಕೇಳಿ, ಎಲ್ಲವೂ ಮಾಯೆ, ಇಹದ ಜಗವನ್ನು ಶಾಶ್ವತವೆಂದು ಭಾವಿಸುವುದು ಭ್ರಮೆ. ಬ್ರಹ್ಮ ಮಾತ್ರ ಶಾಶ್ವತ ಸತ್ಯ. ಆತ್ಮಕ್ಕೆ ಸಾವಿಲ್ಲ; ಅರ್ಥಾತ್ ಅವಿನಾಶಿ. ಸಾವಿನ ನಂತರ ಅದು ಒಂದು ಕಾಯ(ಶರೀರ)ವನ್ನು ತ್ಯಜಿಸಿ ಇನ್ನೊಂದು (ಪರ) ಕಾಯವನ್ನು ಪ್ರವೇಶಿಸುತ್ತದೆ. ನಿಮ್ಮ ಪ್ರಶ್ನೆಗೆ ಇದೇ ಉತ್ತರ" ಎಂದು ಗುರುಗಳು ತೀರ್ಮಾನಿಸಿಬಿಟ್ಟರು.

ಹೇಳಬೇಕೆಂದರೆ ಪ್ರೊಫೆಸರ್‌ಗೆ ಏನೂ ಅರ್ಥವಾಗಲಿಲ್ಲ. ಆದರೆ ಗುರುಗಳ ಬಾಯಿಂದ ಹೊರಬಂದ ಪ್ರತಿ ಪದವನ್ನೂ ಗಮನವಿಟ್ಟು ಕೇಳಿದರು. ಅವರ ಪಕ್ಕ ಕುಳಿತ ಮಹಿಳೆ (ಪ್ರಾಯಶಃ ಅವರ ಗೆಳತಿ ಅಥವಾ ಮಡದಿ) "ಗುರುಗಳೇ, ಶರೀರ ದಹನ ಕ್ರಿಯಾ ಯೋಗದ ಬಗ್ಗೆ ಒಂದಿಷ್ಟು ತಿಳಿಸಿಕೊಡಿ" ಎಂದು ವಿನಂತಿಸಿಕೊಂಡರು.

ಗುರುಗಳು ಈಗ ನಿಜಕ್ಕೂ ಕಕ್ಕಾಬಿಕ್ಕಿಯಾದರು. ಅವರಿಗೆ ಈ ತನಕ ಆಲಿಸಿದ ಬೋಧೆಗಳಲ್ಲಾಗಲಿ, ಓದಿದ ಪ್ರಾಚೀನ ಸಾಹಿತ್ಯದಲ್ಲಾಗಲಿ ಇಂತಹುದೊಂದು ಶಬ್ದ ಸಮೂಹದ ಪರಿಚಯವೇ ಆಗಿರಲಿಲ್ಲ. ಇಪ್ಪತ್ತೈದು ವರ್ಷಗಳ ಸನ್ಯಾಸಾವಸ್ಥೆಯಲ್ಲಿ ಇಂತಹದೊಂದು ಯೋಗದ ಬಗ್ಗೆ ಅಪ್ಪಿತಪ್ಪಿಯೂ ಕಲ್ಪಿಸಿಕೊಂಡವರಲ್ಲ. ಪಾಪ, ಇದೆಲ್ಲ ಅವರ ಪಟ್ಟ ಶಿಷ್ಯನ ಸೃಷ್ಟಿ ಎಂದು ಅವರಿಗೆ ಮೊದಲೇ ತಿಳಿದಿದ್ದರೆ...

"ಒಂದೇ ನಿಮಿಷ, ಬಂದೆ" ಎಂದು ಮೂತ್ರಕ್ಕೆ ಅವಸರವಾದವರಂತೆ ತಮ್ಮ ಶಯ್ಯಾಗೃಹದ ಕಡೆ ಧಾವಿಸಿದರು. ಪಾದ ಪೂಜಾನಂದನಿಗೆ ಕರೆ ಮಾಡಿ ಹಿಂಬಾಗಿಲಿನಿಂದ ಕರೆಸಿಕೊಂಡರು.

"ಇದೇನು ಹೊಸ ಶಬ್ದಗಳು, ನಿನಗೆ ಗೊತ್ತಾ ?"

"ಕ್ಷಮಿಸಿ ಗುರುಗಳೇ, ಅವನ್ನು ನಾನೆ ಸೃಷ್ಟಿಸಿದ್ದು. ಈ ಭಕ್ತರು ಒಳಬಂದ ಕೂಡಲೆ ನೀವೆಲ್ಲಿದ್ದೀರಿ ಎಂದು ವಿಚಾರಿಸಿದರು. ಸ್ವಲ್ಪ ತಾಂತ್ರಿಕವಾಗಿ ಸಮಜಾಯಿಷಿ ನೀಡಿದರೆ ಅವರು ಹೆಚ್ಚು ಪ್ರಶ್ನೆ ಕೇಳಲಾರರೆಂದು ತರ್ಕಿಸಿ ನಾನೇ ಒಂದು ಕತೆ ಕಟ್ಟಿದೆ" ಎಂದು ತಾನು ಶರೀರ ದಹನ ಕ್ರಿಯಾ ಯೋಗಕ್ಕೆ ನೀಡಿದ್ದ ಸಂಕ್ಷಿಪ್ತ ವಿವರಣೆಯ ಬಗ್ಗೆಯೂ ತಿಳಿಸಿದ. ಕೊಂಚ ಕಾಲ ಗುರುಗಳು ಮ್ಲಾನವದನರಾದರು. ಏನೋ ಹೊಳೆದಂತಾಯಿತು. ಶಲ್ಯವನ್ನೊಮ್ಮೆ ಕೊಡವಿಕೊಂಡು ಹೊಸ ಹುರುಪಿನಿಂದ ವಾಪಾಸಾದರು.

"ಪ್ರಿಯ ಭಕ್ತರೇ, ನಾನೆಲ್ಲಿ ನಿಲ್ಲಿಸಿದ್ದೆ ಮಾತನ್ನು ? ಮ್ಯಾಡಮ್, ನೀವೇನೋ ಕೇಳಿದಿರಲ್ಲ, ಹ್ಞಾಂ ! ಶರೀರ ದಹನ ಕ್ರಿಯಾ ಅಥವಾ ಶದಕ್ರಿ ಯೋಗ ಅಲ್ಲವೆ ? ಅದರ ತಿರುಳು ತುಂಬ ಸರಳವಿದೆ. ಪರಕಾಯ ಪ್ರವೇಶ ಸಿದ್ಧಾಂತಕ್ಕಿಂತ ಕೊಂಚ ಭಿನ್ನ ಮಾದರಿ ಅದು. ಅಲ್ಲಿ ಆತ್ಮವಾದರೆ ಇಲ್ಲಿ ಶರೀರ. ಶರೀರದ ಹೆಚ್ಚುವರಿ ತಾಪವನ್ನು ತಣಿಸಿಕೊಳ್ಳುವ ಕ್ರಮವೇ ಶರೀರ ದಹನ ಕ್ರಿಯಾ ಯೋಗ. ಈ ಯೋಗ ಪ್ರಕಾರದಲ್ಲಿ ದೇಹ, ಮನಸ್ಸುಗಳು ತಿಳಿಗೊಂಡು ಹಗುರವಾಗುತ್ತವೆ. ನಿರಂತರ ಮುತ್ತುವ ಬಯಕೆಗಳ ತಾಪವನ್ನು ತಹಬಂದಿಗೆ ತರಲು ಈ ಯೋಗ ನೆರವಾಗುತ್ತದೆ. ಬ್ರಹ್ಮಾನಂದದ ಸಮಾಧಿಯ ಹಂತಕ್ಕೆ ನಾವು ಸುಲಭದಲ್ಲಿ ಏರಬಹುದು."

ಯಾಕೋ ಗುರುಗಳಿಗೆ ಇನ್ನು ಮಾತು ಬೇಡ ಅನ್ನಿಸಿತು. ಹೆಚ್ಚು ಮಾತನಾಡಿ ಬಟ್ಟಂಬಯಲಾಗುವ ದುಸ್ಸಾಹಸಕ್ಕೆ ಎಳೆಸುವುದು ಬೇಡವೆಂದು ಒಳಮನಸ್ಸು ಸಾರಿ ಸಾರಿ ಹೇಳುತ್ತಿತ್ತು. ಪಾದ ಪೂಜಾನಂದನಿಗೆ ಕಣ್ಸನ್ನೆ ಮಾಡಿ ಎದ್ದರು.

ಮೈಮರೆತು ಆಲಿಸುತ್ತಿದ್ದ ಭಕ್ತರಿಗೆ ವಾಸ್ತವದಲ್ಲಿ ವಿಷಯದ ತಲೆಬುಡವೇ ಅರ್ಥವಾಗಲಿಲ್ಲ. ತಮ್ಮಂತಹ ಶುದ್ಧಾಂಗ ಲೌಕಿಕ ಮಡ್ಡಿಗಳಿಗೆ ತಿಳಿಯದ ಅಸಾಧಾರಣ ಜ್ಞಾನ ಗುರುಗಳ ಅಂತಃಚಕ್ಷುಗಳಿಗೆ ತಿಳಿದಿದೆ ಎಂದಷ್ಟೆ ಅವರು ಭಾವಿಸಿಕೊಂಡರು.

"ಪ್ರಿಯ ಭಕ್ತರೆ, ಏಳು ಗಂಟೆಗೆ ಅಂತರರಾಷ್ಟ್ರೀಯ ಜನಪ್ರಿಯ ಪತ್ರಿಕೆ Beyond Un-truth ನ ಪ್ರತಿನಿಧಿಯೊಂದಿಗೆ ಗುರುಗಳ ಆಧ್ಯಾತ್ಮಿಕ ಸಂದರ್ಶನ ನಿಗದಿಯಾಗಿದೆ. ಈಗ ಅವರಿಗೆ ವಿಶ್ರಾಂತಿಯ ಅಗತ್ಯವಿದೆ. ಇಲ್ಲಿಗೆ ಪ್ರವಚನ ಮುಕ್ತಾಯವಾಯಿತು. ತಮಗೆಲ್ಲ ಮಂಗಳವಾಗಲಿ."

ವಿದೇಶಿ ಭಕ್ತರಿಗೆ ಗೋಧೂಳಿ ಸಮಯದ ವಿಶೇಷ ಪೂಜೆಯ ತೀರ್ಥ, ಪ್ರಸಾದಗಳನ್ನು ದೊನ್ನೆಯಲ್ಲಿ ವಿತರಿಸಲಾಯಿತು. ಸೇವಿಸಿ ಅವರೆಲ್ಲ ತೆರಳಿದರು.

✴ ✴ ✴

ಏಳಕ್ಕೆ ಏಳು ನಿಮಿಷ ಇರುವಾಗ ಬಿಗಿಯಾದ ಕೇಸರಿ ಟೀಶರ್ಟ್ ಮತ್ತು ಲೆವಿಸ್ ಜೀನ್ಸ್ ತೊಟ್ಟ ನೀಳಕಾಯದ ಅಂಗನೆಯೊಬ್ಬಳು ಸ್ವಾಗತಕಾರಿಣಿಯೆದುರು ಪ್ರತ್ಯಕ್ಷಳಾಗಿ ಗುರುತಿನ ಚೀಟಿಯನ್ನು ತೋರಿದಳು. ಹೊಳಪು ಕಂಗಳು, ನುಣುಪು ತ್ವಚೆ, ಗುಲಾಬಿ ರಂಗಿನ ತುಟಿಗಳಿಂದ ಗಮನ ಸೆಳೆಯುತ್ತಿದ್ದ ಆಕೆ ಒಮ್ಮೆ ಆಚೀಚೆ ನೋಡಿ ಗುರುಗಳ ಶಯ್ಯಾಗೃಹವನ್ನು ಪ್ರವೇಶಿಸಿದಳು. ಹಿಂದಿನಿಂದ ಬ್ರಹ್ಮಚಾರಿ ಹನುಮಂತನನ್ನು ಕೆತ್ತಿದ್ದ ಬೀಟೆಯ ಭಾರೀ ಬಾಗಿಲು ಧಡಾರನೆ ಮುಚ್ಚಿಕೊಂಡಿತು.

ಕಪ್ಪು ಕನ್ನಡಕವನ್ನು ಕೈಯಲ್ಲಿ ತಿರುಗಿಸುತ್ತ ತನ್ನೆದುರೇ ಹಂಸಗಾಮಿನಿಯಾಗಿ ನಡೆದುಹೋದ ತರುಣಿಯನ್ನು ಕಂಡು ಪಾದ ಪೂಜಾನಂದ "ಸರಿ, ಇನ್ನು ಸಂದರ್ಶನ ಶುರು" ಎಂದು ವ್ಯಂಗ್ಯವಾಗಿ ಗೊಣಗಿಕೊಂಡ.

**ಕೆ. ಎಸ್. ರವಿಕುಮಾರ್**
ಭಾರತೀಯ ಜೀವ ವಿಮಾ ನಿಗಮ, ಅಂಚೆ ಪೆಟ್ಟಿಗೆ ಸಂಖ್ಯೆ ೯, ಹಾಸನ – ೫೭೩ ೨೦೧

**ಅಭಿನಂದನೆ.....**

ನವಕರ್ನಾಟಕ ಬಳಗದವರಲ್ಲೊಬ್ಬರಾದ ನಮಗೆಲ್ಲರಿಗೂ ಆತ್ಮೀಯರಾಗಿರುವ ಶ್ರೀ ಬರಗೂರು ರಾಮಚಂದ್ರಪ್ಪ ಅವರು 'ಮರಣದಂಡನೆ' ಎಂಬ ಸ್ವರಚಿತ ಕಿರುಕಾದಂಬರಿಯನ್ನಾಧರಿಸಿ ನಿರ್ದೇಶಿಸಿರುವ ಅದೇ ಹೆಸರಿನ ಚಲನಚಿತ್ರಕ್ಕೆ ಇತ್ತೀಚೆಗೆ ಜೈಪುರದಲ್ಲಿ ನಡೆದ ರಾಜಸ್ತಾನದ ಅಂತರರಾಷ್ಟ್ರೀಯ ಚಿತ್ರೋತ್ಸವದಲ್ಲಿ ಪ್ರಾದೇಶಿಕ ಚಿತ್ರಗಳ ವಿಭಾಗದಲ್ಲಿ 'ಅತ್ಯುತ್ತಮ ನಿರ್ದೇಶಕ' ಪ್ರಶಸ್ತಿ ಜೊತೆಗೆ ಕನ್ನಡ ಚಲನಚಿತ್ರರಂಗದ 'ಪುಟ್ಟಣ್ಣ ಕಣಗಾಲ್' ಪ್ರಶಸ್ತಿ ದೊರಕಿರುವುದು ಸಂತಸದ ಸಂಗತಿ. ಅವರಿಗೆ 'ಹೊಸತು' ಹಾಗೂ 'ನವಕರ್ನಾಟಕ'ದ ಅಭಿನಂದನೆಗಳು.

# ಫ್ರಾನ್ಸಿಸ್ ಬುಕನನ್ ಕಂಡಂತೆ ಕರಾವಳಿ ಕರ್ನಾಟಕದಲ್ಲಿ ಗುಲಾಮಗಿರಿ ಪದ್ಧತಿ

**ಸುಧಾಕರ್**

**ಗುಲಾಮರ ಯಜಮಾನರು ತಮ್ಮ ಜೀತದಾಳುಗಳನ್ನು ಇನ್ನೊಬ್ಬರಿಗೆ ಒತ್ತೆ ಕೊಡುವುದು ಅಥವಾ ಅವರ ದುಡಿಮೆಯನ್ನು ಬಾಡಿಗೆಯಾಗಿ ನೀಡುವುದು ಸಾಮಾನ್ಯವಾಗಿತ್ತು. ಇಂತಹ ಸಂದರ್ಭಗಳಲ್ಲಿ ಈ ಆಳುಗಳಿಗೆ ಆಹಾರವನ್ನು ಒದಗಿಸುವುದು ಕೊಂಡುಕೊಳ್ಳುವವನ ಕರ್ತವ್ಯವಾಗಿತ್ತು. ಎಲ್ಲಿಯವರೆಗೆ ಆ ಯಜಮಾನರು ಕೊಂಡುಕೊಂಡ ಆಳುಗಳನ್ನು ತಮ್ಮ ಸೇವೆಗಾಗಿ ಬಳಸಿಕೊಳ್ಳುತ್ತಾರೋ ಅಲ್ಲಿಯವರೆಗೆ ಅವರ ಕ್ಷೇಮವನ್ನು ನೋಡಿಕೊಳ್ಳುವ ಹೊಣೆ ಹೊರಬೇಕಾಗಿತ್ತು. ಬುಕನನ್ ತಮ್ಮ ಅನುಭವದ ಆಧಾರದ ಮೇಲೆ ವೆಸ್ಟ್ ಇಂಡೀಸ್‌ನಲ್ಲಿರುವ ಗುಲಾಮರಿಗಿಂತ ಕೆನರಾದ ಕೂಲಿಯಾಳುಗಳ ಸ್ಥಿತಿಗತಿ ಹೀನಾಯವಾಗಿತ್ತು ಎಂದು ಪಶ್ಚಾತ್ತಾಪಪಡುತ್ತಾನೆ.**

ಫ್ರಾನ್ಸಿಸ್ ಬುಕನನ್ ಒಬ್ಬ ಬ್ರಿಟಿಷ್ ವೈದ್ಯ. ಇವನು ಫೆಬ್ರವರಿ ೧೭೬೨ರಲ್ಲಿ ಎಡಿನ್ ಬರೋದಲ್ಲಿ ಹುಟ್ಟಿದ. ಎಂ.ಡಿ. ಪದವಿ ಮುಗಿಸಿದ ಮೇಲೆ ಈಸ್ಟ್ ಇಂಡಿಯಾ ಕಂಪೆನಿಯಲ್ಲಿ ಸೇವೆಗೆ ಸೇರಿದ. ನಂತರ ಕೋರ್ಟ್ ಆಫ್ ಲಾ ನಿಯೋಗದ ಸದಸ್ಯನಾಗಿ ಭಾರತಕ್ಕೆ ಬಂದು ಕಂಪನಿಯ ವಶಕ್ಕೆ ಬಂದಿದ್ದ ಪ್ರದೇಶಗಳ ವಸ್ತು ಸ್ಥಿತಿ ಪರಿಶೀಲಕನಾಗಿ ಕಾರ್ಯ ನಿರ್ವಹಿಸಿದ. ಆತ ೧೮೦೦ರಿಂದ ೧೮೦೧ರವರೆಗೆ ಮದ್ರಾಸ್‌ನಿಂದ ಹೊರಟು ಮೈಸೂರು, ಕೆನರಾ (ಉತ್ತರ ಮತ್ತು ದಕ್ಷಿಣ ಕನ್ನಡ) ಜಿಲ್ಲೆಗಳಲ್ಲಿ ಮತ್ತು ಮಲಬಾರ್ ಪ್ರದೇಶಗಳಲ್ಲಿ ಸಂಚರಿಸಿ ಅಲ್ಲಿಯ ಪ್ರದೇಶಗಳ ನೈಸರ್ಗಿಕ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಕೃಷಿ ಮತ್ತು ಜನಜೀವನದ ವಸ್ತುಸ್ಥಿತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಯಾವುದನ್ನೂ ಬಿಡದೆ ಸಂಗ್ರಹಿಸಿದ ಮಾಹಿತಿಯನ್ನು ಬ್ರಿಟಿಷ್ ಸರಕಾರಕ್ಕೆ ಒಪ್ಪಿಸಿದ. ಆ ವರದಿ ಮುಂದೆ 'ರಿಪೋರ್ಟ್ ಆಫ್ ಎ ಜರ್ನಿ ಥ್ರೂ ಮೈಸೂರು, ಕೆನರಾ ಮತ್ತು ಮಲಬಾರ್' ಎಂಬ ಕೃತಿಯ ಹೆಸರಿನಲ್ಲಿ ಪ್ರಕಟವಾಯಿತು. ಈ ಕೃತಿಯು ಅಷ್ಟೇ ಅಮೂಲ್ಯವೂ ಹಾಗೂ ಆಸಕ್ತಿದಾಯಕವೂ ಆಗಿದೆ. ಇದರಲ್ಲಿ ಈ ಭಾಗದ (ತುಳುನಾಡಿನ) ಕುರಿತು ಉಪಯುಕ್ತ ಮಾಹಿತಿಗಳು ಅಡಕವಾಗಿವೆ.

ತುಳುನಾಡು ಅಥವಾ ಕರಾವಳಿ ತೀರ ಪ್ರದೇಶದಲ್ಲಿ ಭಿನ್ನ ಭಿನ್ನ ರೀತಿಯ ದಾಸ್ಯಕ್ಕೆ ಒಳಗಾದ ಒಂದು ಗುಂಪು ಇತ್ತು. 'ಹೊಲೆಯ' ಅಥವಾ 'ದರ್ಸ್' ಎಂದು ಕರೆಯಲ್ಪಡುವ ವರ್ಗ ವಿವಿಧ ಹಂತಗಳಲ್ಲಿ ದಾಸ್ಯಕ್ಕೆ ಒಳಗಾಗುತ್ತಿತ್ತು. ಈ ವರ್ಗ ತನ್ನ ಒಡೆಯನ ಕೃಷಿ ಭೂಮಿಗಳಲ್ಲಿ ಉಳುಮೆ ಮುಂತಾದ ಕೃಷಿ ಚಟುವಟಿಕೆಗಳಲ್ಲಿ ತೊಡಗುತ್ತಿದ್ದು, ಪ್ರತಿಫಲವಾಗಿ ಅತೀ ಕಡಿಮೆ ವೇತನವನ್ನು ಪಡೆಯುತ್ತಿತ್ತು. ಅಧಿಕೃತ ವರದಿಗಳಲ್ಲಿ ಈ ರೀತಿಯ ಗುಲಾಮಗಿರಿ ತುಳುನಾಡಿನಲ್ಲಿ ಚಾಲ್ತಿಯಲ್ಲಿದ್ದುದನ್ನು ಉಲ್ಲೇಖಿಸಲಾಗಿದೆ. ಬುಕನನ್ ತಾನು ಭೇಟಿ ಕೊಟ್ಟ ಸ್ಥಳಗಳಲ್ಲೆಲ್ಲಾ ಕೃಷಿ ಕಾರ್ಮಿಕರ ಸ್ಥಿತಿಗತಿಗಳನ್ನು ಕೂಲಂಕಷವಾಗಿ ತಿಳಿದುಕೊಳ್ಳುತ್ತಿದ್ದ.



ಅಂತೆಯೇ ಹೊಲಗದ್ದೆಗಳಲ್ಲಿ ದುಡಿಯುತ್ತಿದ್ದ ಕೃಷಿ ಕಾರ್ಮಿಕರ ವೇತನಗಳ ಕುರಿತು ಕೂಡ ಉಲ್ಲೇಖಿಸಿದ್ದಾನೆ. ಅವನ ಅನುಭವದಂತೆ ದುಡಿಯುವ ವರ್ಗ ಕೆಲವು ಸಂದರ್ಭಗಳಲ್ಲಿ ತಮ್ಮ ವೇತನವನ್ನು ಹಣದ ರೂಪದಲ್ಲಿಯೋ ಅಥವಾ ಕೆಲವು ಸಲ ವಸ್ತುವಿನ ರೂಪದಲ್ಲಿಯೋ ಪಡೆಯುತ್ತಿದ್ದರು. ಹಾಗಾಗಿ ನಿಖರವಾಗಿ ಇಂತಿಷ್ಟೇ ವೇತನವನ್ನು ಪಡೆಯುತ್ತಿದ್ದರು ಎಂಬುದನ್ನು ತಿಳಿಯಲು ಸಾಧ್ಯವಾಗದು. ಬುಕನನ್ ಹೆಚ್ಚಾಗಿ ಕರಾವಳಿ ಜಿಲ್ಲೆಯ ಅಧಿಕಾರಿಗಳ ವರದಿಯನ್ನು ಅವಲಂಬಿಸಿದ್ದನು.

ಬುಕನನ್ ವರದಿಯನ್ನು ಆಧರಿಸಿ ತುಳುನಾಡಿನಲ್ಲಿ ಗುಲಾಮಗಿರಿ ಎಲ್ಲ ಪ್ರದೇಶಗಳಲ್ಲೂ ಹರಡಿತ್ತು ಎಂದು ಹೇಳಬಹುದು. ಇಲ್ಲಿ ಎಲ್ಲ ಗುಲಾಮರು ಯಜಮಾನನ ಖಾಸಗಿ ಆಸ್ತಿಯಾಗಿರುತ್ತಿದ್ದರು. ಇವರ ಸ್ಥಿತಿ ಚಿಂತಾಜನಕವಾಗಿತ್ತು. ಮತ್ತು ಅವರ ಸ್ಥಿತಿ–ಗತಿಗಳನ್ನು ಆ ಕಾಲದ ಸ್ವತಂತ್ರ ಕೆಲಸದಾಳುಗಳಿಗೆ ಹೋಲಿಸಲಾಗದು. ಇಲ್ಲಿ ಹಂಚಿಹೋಗಿರುವ ಗುಲಾಮತನದ ದಟ್ಟನೆಯ ಬಗ್ಗೆ ನಿಖರವಾಗಿ ಹೇಳಲು ಸಾಧ್ಯವಾಗದೆ ಹೋದರೂ, ಭಿನ್ನರೀತಿಯ ಮಾಹಿತಿಗಳು ವರದಿಗಳಿಂದ ದೊರೆಯುತ್ತವೆ. ಒಂದು ಸಂದರ್ಭದಲ್ಲಿ ಬುಕನನ್ ತುಳುನಾಡಿನಲ್ಲಿ ಸುಮಾರು ೬೦,೦೦೦ ಗುಲಾಮರಿದ್ದರು ಎಂದು ವರದಿ ಮಾಡುತ್ತಾನೆ. ೧೮೦೧ರಲ್ಲಿ ಕರಾವಳಿ ಪ್ರದೇಶದ ದಕ್ಷಿಣ ಭಾಗದ ಕಂದಾಯ ಅಧಿಕಾರಿಯಾಗಿದ್ದ ಜೆ. ಜೆ. ರವೆನ್ ಶಾಹ ತುಳುನಾಡಿನ ಒಟ್ಟು ಜನಸಂಖ್ಯೆ ೩,೯೬,೬೭೨ರಲ್ಲಿ ಸುಮಾರು ೫೨,೦೭೨ರಷ್ಟು ಜನರು ಗುಲಾಮರಾಗಿದ್ದರು ಎಂದು ತನ್ನ ವರದಿಯಲ್ಲಿ ದಾಖಲಿಸಿದ್ದಾನೆ. ಬುಕನನ್ ತುಳುನಾಡಿನ ಗುಲಾಮರ ಜನಜೀವನದ ಚಿತ್ರಣವನ್ನು ನೀಡುತ್ತಾನೆ. ಗುಲಾಮರು ಸೂರ್ಯೋದಯದೊಳಗೆ ಹೊಲಗದ್ದೆಯನ್ನು ತಲುಪಿ ಸೂರ್ಯಾಸ್ತವಾಗುವವರೆಗೆ ದುಡಿಯಬೇಕಾಗಿತ್ತು. ಈ ನಡುವೆ ಕೇವಲ ೨೪ ನಿಮಿಷಗಳ ವಿರಾಮ ಮಧ್ಯಾಹ್ನ ಊಟದ ಸಮಯದಲ್ಲಿ ದೊರೆಯುತ್ತಿತ್ತಷ್ಟೆ. ಆದರೆ, ಮಹಿಳಾ ಕಾರ್ಮಿಕ ಗುಲಾಮರಿಗೆ

ಬೆಳಿಗ್ಗೆ ಎಂಟು ಗಂಟೆಯ ತನಕ ರಿಯಾಯಿತಿ ಇತ್ತು. ಯಾಕೆಂದರೆ ಹೊಲದಲ್ಲಿ ದುಡಿಯುತ್ತಿರುವ ಪುರುಷರಿಗೆ ಹಾಗೂ ಅವರಿಗೆ ಮಧ್ಯಾಹ್ನದ ಊಟದ ಬುತ್ತಿಯನ್ನು ತರಬೇಕಾಗಿತ್ತು. ನಂತರ ಅವರು ಪುರುಷರೊಂದಿಗೆ ಹೊಲದಲ್ಲಿ ದುಡಿಯಬೇಕು. ಬುಕನನ್ ಕಲೆಹಾಕಿದ ಮಾಹಿತಿಯಂತೆ ಮಂಗಳೂರು ಸುತ್ತಮುತ್ತ ಗುಲಾಮಗಿರಿಗೆ ಹಾಗೂ ಸ್ವತಂತ್ರ ದಿನಗೂಲಿ ನೌಕರರಿಗೆ ವೇತನವನ್ನು ಆಹಾರೋತ್ಪನ್ನಗಳ ಮೌಲ್ಯದಂತೆ ನೀಡಲಾಗುತ್ತಿತ್ತು. ಬುಕನನ್‌ನ ವಿಶ್ಲೇಷಣೆಯಂತೆ ಸ್ವತಂತ್ರ ಕಾರ್ಮಿಕರು ತಮ್ಮ ಸೇವೆಗೆ ತಕ್ಕ ಪ್ರತಿಫಲ ಪಡೆಯುತ್ತಿದ್ದರು. ಆದರೆ, ಗುಲಾಮರು ಕೇವಲ ದಿನಗೂಲಿ ನೌಕರರು ಪಡೆಯುತ್ತಿರುವ ವೇತನದ ೨/೩ರಷ್ಟು ಮಾತ್ರ ಪಡೆಯುತ್ತಿದ್ದರು. ಮತ್ತು ಸ್ವತಂತ್ರ ದಿನಗೂಲಿ ನೌಕರರು, ಒಬ್ಬ ಮಾಲೀಕನಿಂದ ಇನ್ನೊಬ್ಬ ಮಾಲೀಕನನ್ನು ಸಾಲದ ತೀವ್ರತೆಯನ್ನು ಅನುಸರಿಸಿ ಬದಲಾಯಿಸಬಹುದು. ಅಂತಹ ಸ್ವಾತಂತ್ರ್ಯ ಗುಲಾಮರಿಗೆ ಇರುವುದಿಲ್ಲ. ಕೆಲವೊಮ್ಮೆ ಮಾಲೀಕರು ತನ್ನ ಗುಲಾಮರನ್ನು ಇನ್ನೊಂದು ಮಾಲೀಕನಲ್ಲಿ ಗೇಣಿಗೆ ಒತ್ತೆ ಇಡಲೂಬಹುದು ಅಥವಾ ದೀರ್ಘಕಾಲದವರೆಗೆ ಬಾಡಿಗೆಗೆ ಕೊಡಬಹುದು. ಈ ರೀತಿಯ ಪದ್ಧತಿ ತುಳುನಾಡಿನಲ್ಲಿ ಸಾಮಾನ್ಯವಾಗಿ ಕಂಡುಬರುತ್ತಿತ್ತು ಎಂದು ಬುಕನನ್ ಅಭಿಪ್ರಾಯಪಡುತ್ತಾನೆ. ಈ ವ್ಯವಸ್ಥೆಯಲ್ಲಿ ಎರವಲು ತೆಗೆದುಕೊಂಡ ಮಾಲೀಕ ಗುಲಾಮನ ಸೇವೆಯ ಜವಾಬ್ದಾರನಾಗಿರುತ್ತಿದ್ದ ಹಾಗೂ ಅವನಿಗೆ ಜೀವನಾಂಶವನ್ನು ಕೊಡಬೇಕಾಗಿತ್ತು. ಗುಲಾಮರನ್ನು ತುಂಬ ಕೆಟ್ಟದಾಗಿ ನಡೆಸಿಕೊಳ್ಳುತ್ತಿದ್ದರು ಎಂಬುದನ್ನು ಬುಕನನ್ ತನ್ನ ವರದಿಯಲ್ಲಿ ಉಲ್ಲೇಖಿಸುತ್ತಾನೆ. ಸಾಮಾನ್ಯವಾಗಿ ಕೆಳಜಾತಿಯ ಪುರುಷರು ತಮ್ಮ ಯುವ ರಕ್ತಸಂಬಂಧಿಗಳನ್ನು ಸಾಲ ತೀರಿಸಲೋಸುಗ ಗುಲಾಮಗಿರಿಗೆ ತಳ್ಳುತ್ತಿದ್ದರು. ಉತ್ತರ ಕನ್ನಡದ ಕರಾವಳಿಯ ಹೊನ್ನಾವರ ತಾಲೂಕಿನಲ್ಲಿ ಜಮೀನ್ದಾರರು ಬಹುತೇಕ ಬ್ರಾಹ್ಮಣರಾಗಿದ್ದರು. ಇವರನ್ನು ಮೂಲಾವುಗದಾರರು ಎಂದು ಕರೆಯುತ್ತಿದ್ದರು. ಇವರ ಹೊಲಗದ್ದೆಗಳನ್ನು ಗುಲಾಮರೇ ಉಳುಮೆ ಮಾಡುತ್ತಿದ್ದರು. ಬುಕನನ್ ಸೂಚಿಸುವಂತೆ ಗುಲಾಮರು ತಮಗೆ ಸಿಗುವ ಅತ್ಯಲ್ಪ ವೇತನದಲ್ಲೇ ತಮ್ಮ ಮಕ್ಕಳನ್ನು ಹಾಗೂ ಹಿರಿಯರನ್ನು ಸಾಕಬೇಕಾಗಿತ್ತು.

ತುಳುನಾಡಿನಲ್ಲಿ ತಾನು ಗಮನಿಸಿದ ವ್ಯವಸ್ಥೆಯ ಕುರಿತು ಮತ್ತಷ್ಟು ಮಾಹಿತಿಗಳನ್ನು ಸಂಗ್ರಹಿಸಿ ಗುಲಾಮಗಿರಿ ಪದ್ಧತಿಯನ್ನೇ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಲಿಸಿ ನೋಡಲು ಬುಕನನ್ ತನ್ನ ಪ್ರವಾಸವನ್ನು ಮತ್ತಷ್ಟು ಉತ್ತರಕ್ಕೆ ಮುಂದುವರಿಸುತ್ತಾನೆ. ಅಂಕೋಲ ತಾಲೂಕಿನಲ್ಲಿ ಗುಲಾಮಗಿರಿ ಅಸ್ತಿತ್ವದಲ್ಲಿರಲಿಲ್ಲ ಎಂದು ಗಮನಿಸಿದ ಅವನು ಅಲ್ಲಿ ಸ್ವತಂತ್ರ ದಿನಗೂಲಿಕಾರರು ಇದ್ದರು ಎಂಬುದನ್ನು ಉಲ್ಲೇಖಿಸುತ್ತಾನೆ. ಮತ್ತೆ ತಮ್ಮ ಭೇಟಿಯನ್ನು ಮುಂದುವರಿಸುತ್ತ ಗಿರಿತಪ್ಪಲು ಪ್ರದೇಶಗಳಲ್ಲಿ ಮತ್ತು ಸೊಂದ ತಾಲೂಕಿನ ಪಶ್ಚಿಮ ಭಾಗದಲ್ಲಿ ಕೂಲಿಯಾಳುಗಳಿಂದ ಸ್ವತಃ ಬ್ರಾಹ್ಮಣರೇ ಕೃಷಿ ಸಂಬಂಧಿಸಿದ ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದನ್ನು ಉಲ್ಲೇಖಿಸುತ್ತಾನೆ. ಆದರೆ, ಬನವಾಸಿ–ಬಿಳಿಗಿ ತಾಲೂಕುಗಳಲ್ಲಿ ಮತ್ತೆ ಗಣನೀಯ ಪ್ರಮಾಣದಲ್ಲಿ ಗುಲಾಮರ ಸಂಖ್ಯೆಯಲ್ಲಿ ಹೆಚ್ಚಾಗಿರುವುದನ್ನು ಉಲ್ಲೇಖಿಸುತ್ತಾನೆ. ಇಲ್ಲಿ ಈ ಗುಲಾಮರು ಬ್ರಾಹ್ಮಣ ಮಾಲೀಕರ ಆಸ್ತಿಯಾಗಿದ್ದರು. ಉತ್ತರ ಕನ್ನಡದಲ್ಲಿ ಪ್ರತಿಯೊಬ್ಬ ಪುರುಷನು ೧ ೧/೨ ಆಣೆಯಷ್ಟು ಅಕ್ಕಿಯನ್ನು ದಿನಗೂಲಿಯಾಗಿ ಪಡೆಯುತ್ತಿದ್ದ ಮತ್ತು ಒಬ್ಬ ಮಹಿಳೆಯು ಒಂದು ಆಣೆಯಂತೆ ಕೂಲಿ ಪಡೆಯುತ್ತಿದ್ದಳು. ಪ್ರತಿ ವರ್ಷ ಪ್ರತಿ ಗುಲಾಮನಿಗೆ ಎರಡೂವರೆ ರೂಪಾಯಿ ಬೆಲೆಯ ಬಟ್ಟೆಯನ್ನು ನೀಡಲಾಗುತ್ತಿತ್ತು. ಇದಲ್ಲದೆ ಬೇರೆ ಯಾವ ಸಹಾಯವನ್ನು ಪಡೆಯದ ಕಾರಣ ತಮಗೆ ಸಿಗುವ ಹಿಡಿಕಾಸಿನಿಂದ ತಮ್ಮ ಕುಟುಂಬದ ನಿರ್ವಹಣೆಯನ್ನು ಮಾಡಬೇಕಾಗಿತ್ತು. ಮಕ್ಕಳು, ವಯಸ್ಕರು ಮತ್ತು ಹಿರಿಯರ ಜವಾಬ್ದಾರಿಯನ್ನು ಹೊರಬೇಕಾಗಿತ್ತು. ಈ ಸ್ಥಳೀಯ ಮೌಲ್ಯವನ್ನು ಇಂಗ್ಲಿಷ್ ಮೌಲ್ಯಕ್ಕೆ ಪರಿವರ್ತಿಸಿದರೆ, ಪ್ರತಿಯೊಬ್ಬ ಮಹಿಳೆ ವರ್ಷಕ್ಕೆ ಮಾರುಕಟ್ಟೆ ಬೆಲೆಯ ೧೪ ೧/೨ ರೂಪಾಯಿಯ ಹದಿನೈದು ಗ್ಯಾಲನ್‌ಗಳಷ್ಟು ಭತ್ತವನ್ನು ಪಡೆಯುತ್ತಿದ್ದಳು. ಅವಳಿಗೆ ಸಿಗುವ ಒಟ್ಟು ಸೌಲಭ್ಯವನ್ನು ಸೇರಿಸಿ ಲೆಕ್ಕ ಹಾಕಿದರೆ, ವರ್ಷದಲ್ಲಿ ಒಬ್ಬ ಮಹಿಳೆ ಪಡೆಯುವ ಕೂಲಿ ಕೇವಲ ಹದಿನೇಳು ರೂಪಾಯಿಯಷ್ಟು ಮಾತ್ರ. ಗುಲಾಮರ ಯಜಮಾನರು ತಮ್ಮ ಜೀತದಾಳುಗಳನ್ನು ಇನ್ನೊಬ್ಬರಿಗೆ ಒತ್ತೆ ಕೊಡುವುದು ಅಥವಾ ಅವರ ದುಡಿಮೆಯನ್ನು ಬಾಡಿಗೆಯಾಗಿ ನೀಡುವುದು ಸಾಮಾನ್ಯವಾಗಿತ್ತು. ಇಂತಹ ಸಂದರ್ಭಗಳಲ್ಲಿ ಈ ಆಳುಗಳಿಗೆ ಆಹಾರವನ್ನು ಒದಗಿಸುವುದು ಕೊಂಡುಕೊಳ್ಳುವವನ ಕರ್ತವ್ಯವಾಗಿತ್ತು. ಎಲ್ಲಿಯವರೆಗೆ ಆ ಯಜಮಾನರು ಕೊಂಡುಕೊಂಡ ಆಳುಗಳನ್ನು ತಮ್ಮ ಸೇವೆಗಾಗಿ ಬಳಸಿಕೊಳ್ಳುತ್ತಾರೋ ಅಲ್ಲಿಯವರೆಗೆ ಅವರ ಕ್ಷೇಮವನ್ನು ನೋಡಿಕೊಳ್ಳುವ ಹೊಣೆ ಹೊರಬೇಕಾಗಿತ್ತು. ಬುಕನನ್ ತಮ್ಮ ಅನುಭವದ ಆಧಾರದ ಮೇಲೆ ವೆಸ್ಟ್ ಇಂಡೀಸ್‌ನಲ್ಲಿರುವ ಗುಲಾಮರಿಗಿಂತ ಕೆನರಾದ ಕೂಲಿ ಆಳುಗಳ ಸ್ಥಿತಿಗತಿ ಹೀನಾಯವಾಗಿತ್ತು ಎಂದು ಪಶ್ಚಾತ್ತಾಪಪಡುತ್ತಾನೆ. ಹಾಗಾಗಿ ಅವನು ಕೆನರಾದಲ್ಲಿ ಗುಲಾಮರನ್ನು ಕ್ರೂರವಾಗಿ ಹಿಂಸಿಸಲಾಗುತ್ತಿತ್ತು ಎಂದು ಆಪಾದಿಸುತ್ತಾನೆ. ಅವರನ್ನು ನೋಡಿ ಕೆನರಾದ ಆಳುಗಳಿಗೆ ಒಳ್ಳೆಯ ಪೌಷ್ಟಿಕಾಂಶ ಆಹಾರ ನೀಡುವ ಅಗತ್ಯವಿದೆ ಎಂದು ಹೇಳುವಾಗ ಅವರು ಎಂತಹ ಶೋಷಣೆಗೆ ಒಳಗಾಗಿರಬಹುದು ಎಂಬುದು ಅರಿವಾಗುತ್ತದೆ.

ಒಟ್ಟಿನಲ್ಲಿ ಫ್ರಾನ್ಸಿಸ್ ಬುಕನನ್ ತುಳುನಾಡಿನಲ್ಲಿ ಅಸ್ತಿತ್ವದಲ್ಲಿದ್ದ ಗುಲಾಮಗಿರಿಯ ಶೋಚನೀಯ ಸ್ಥಿತಿಯನ್ನು ವಿವರಿಸಿದ್ದಾನೆ.

**ಸುಧಾಕರ್**
ಸಂಶೋಧನಾ ವಿದ್ಯಾರ್ಥಿ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳ ಗಂಗೋತ್ರಿ




ಬೆಂಗಳೂರಿನ ಗಾಂಧಿಭವನದಲ್ಲಿ ಎಂ. ಎಸ್. ಕೃಷ್ಣನ್ ಸಂಸ್ಮರಣ ಗ್ರಂಥ 'ಜನಮುಖಿ' ಹಾಗೂ ಕೆ. ಎನ್. ಪಣಿಕ್ಕರ್ ಅವರ 'ಭಾರತದ ರಾಷ್ಟ್ರೀಯತೆಯ ಪರಿಕಲ್ಪನೆ' ಕೃತಿಯ ಲೋಕಾರ್ಪಣೆ ಸಮಾರಂಭ. ವೇದಿಕೆಯಲ್ಲಿ ನಾಡೋಜ ಕೋ. ಚೆನ್ನಬಸಪ್ಪ, ಸಿಪಿಐ ರಾಷ್ಟ್ರೀಯ ಮಂಡಲಿ ಪ್ರಧಾನ ಕಾರ್ಯದರ್ಶಿ ಎಸ್. ಸುಧಾಕರ ರೆಡ್ಡಿ, ಡಾ|| ಜಿ. ರಾಮಕೃಷ್ಣ, ಪ್ರೊ|| ಬಿ. ಸುರೇಂದ್ರರಾವ್, ಕೆ. ಎಸ್. ಪಾರ್ಥಸಾರಥಿ, ಡಾ|| ಸಿದ್ದನಗೌಡ ಪಾಟೀಲ ಉಪಸ್ಥಿತರಿದ್ದರು.

# ಕಾರ್ಪೊರೇಟ್ ತಿಮಿಂಗಲಗಳು ಬ್ಯಾಂಕುಗಳಲ್ಲಿರುವ ಅನುತ್ಪಾದಕ ಸಾಲಗಳು



**ಒಂ**ದು ಅಂದಾಜಿನಂತೆ ಭಾರತದ ಬೃಹತ್ ಕಾರ್ಪೊರೇಟ್ ಕಂಪನಿಗಳು ಬ್ಯಾಂಕುಗಳಿಂದ, ಅದರಲ್ಲೂ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಿಂದ ಸಾಲ ಪಡೆದು ಬಾಕಿ ಇರಿಸಿಕೊಂಡಿರುವ ಒಟ್ಟು ಮೊತ್ತ ಹೆಚ್ಚು ಕಡಿಮೆ ೭,೦೦,೦೦೦ (ಏಳು ಲಕ್ಷ) ಕೋಟಿಯಷ್ಟಿದೆ. ಸ್ವಿಟ್ಜರ್‌ಲೆಂಡ್‌ನ ದಾವೋಸ್‌ನಲ್ಲಿ ಜರುಗಿದ ವರ್ಲ್ಡ್ ಎಕನಾಮಿಕ್ ಫೋರಂನ ಸಭೆಯಲ್ಲಿ ಭಾಗವಹಿಸಲು ತೆರಳಿದ್ದ ರಿಸರ್ವ್ ಬ್ಯಾಂಕಿನ ಗವರ್ನರ್ ರಘುರಾಂ ರಾಜನ್ ಅಲ್ಲಿಂದಲೇ ಈ ಅನುತ್ಪಾದಕ ಸಾಲಗಳನ್ನು (ಎನ್.ಪಿ.ಎ.) ವಸೂಲು ಮಾಡಲು ಸೂಕ್ತ ಕ್ರಮಗಳನ್ನು ಈ ಕೂಡಲೆ ತೆಗೆದುಕೊಳ್ಳದೆ ಹೋದರೆ ನಮ್ಮ ಇಡೀ ಬ್ಯಾಂಕಿಂಗ್ ಕ್ಷೇತ್ರ ತೀವ್ರ ಬಿಕ್ಕಟ್ಟಿನಲ್ಲಿ ಸಿಲುಕಲಿದೆ ಎಂದು ಎಚ್ಚರಿಸಿದ್ದಾರೆ. ಹಿಂದೆಯೂ ಅವರು ಹಲವು ಬಾರಿ ಇದೇ ಬಗೆಯಲ್ಲಿ ತಮ್ಮ ಆತಂಕವನ್ನು ವ್ಯಕ್ತಪಡಿಸಿದ್ದರು. ಇದೇ ವರ್ಷದಲ್ಲಿ ಜಾಗತಿಕ ಆರ್ಥಿಕ ಪರಿಸ್ಥಿತಿ ಮತ್ತೆ ಹಣದುಬ್ಬರವಿಳಿತದ ವಿಷವರ್ತುಲದಲ್ಲಿ ಸಿಲುಕಿಕೊಂಡು ನಮ್ಮ ಆರ್ಥಿಕತೆ ಮತ್ತಷ್ಟು ಹದಗೆಡುವುದರಲ್ಲಿ ಯಾವ ಸಂದೇಹವೂ ಇಲ್ಲ. ಅದರ ಭಾಗವಾಗಿ ಕಾರ್ಪೊರೇಟ್ ಕಂಪನಿಗಳ ಸಾಲದ ಮೊತ್ತ ಮತ್ತಷ್ಟು ಜಾಸ್ತಿಯಾಗುವುದಂತೂ ಕಟ್ಟಿಟ್ಟ ಬುತ್ತಿ. ಈ ಬಾರಿ ದಾವೋಸ್‌ನಲ್ಲಿ ರಘುರಾಂ ರಾಜನ್ ಆಡಿರುವ ಎಚ್ಚರಿಕೆಯ ಮಾತುಗಳು ಕಠಿಣವೆನಿಸಿದರೂ, ಅವು ಇಂದಿನ ಆರ್ಥಿಕ ಪರಿಸ್ಥಿತಿಯ ತೀವ್ರತೆಗೆ ಕನ್ನಡಿ ಹಿಡಿಯುತ್ತವೆ. ಅಷ್ಟೇ ಅಲ್ಲ, ಕೇವಲ ಬೆರಳೆಣಿಕೆಯಷ್ಟು ಸಂಖ್ಯೆಯ ಕಂಪನಿಗಳು ಲಕ್ಷ ಲಕ್ಷ ಕೋಟಿಗಟ್ಟಲೆ ಸಾಲ ಮಾಡಿ ತೀರಿಸಲಾಗದೆ ಬಾಕಿ ಇರಿಸಿಕೊಂಡಿರುವುದರಿಂದಾಗಿ ಬ್ಯಾಂಕುಗಳು ಇತರ ಅರ್ಹ ಕಂಪನಿಗಳಿಗೆ, ಸಂಸ್ಥೆಗಳಿಗೆ ಹಾಗೂ ಸದುದ್ದೇಶಗಳಿಗೆ ಸಾಲ ನೀಡಲಾಗುತ್ತಿಲ್ಲ ಎಂಬ ವಾಸ್ತವಾಂಶವನ್ನು ಬಿಂಬಿಸುತ್ತವೆ. ಹೀಗೆ ಬೃಹತ್ ಮೊತ್ತದ ಸಾಲವನ್ನು ಬಾಕಿ ಇರಿಸಿಕೊಂಡಿರುವ ಶ್ರೀಮಂತ ಕುಳಗಳು ಕೋಟಿಗಟ್ಟಲೆ ಖರ್ಚು ಮಾಡಿ ತಮ್ಮ ಹುಟ್ಟುಹಬ್ಬವನ್ನೋ, ತಮ್ಮ ಮಕ್ಕಳ ನಾಮಕರಣವನ್ನೋ ಆಚರಿಸಿ ಮೋಜು ಮಾಡುವುದನ್ನು ಇನ್ನಾದರೂ ನಿಲ್ಲಿಸುವುದು ಸೂಕ್ತ ಎಂದು ರಾಜನ್ ಹೇಳಿರುವುದು ಸಮಯೋಚಿತವಾಗಿದೆ. ಕಿಂಗ್ ಫಿಷರ್ ಗ್ರೂಪ್‌ನ ಹೆಂಡದ ದೊರೆ ವಿಜಯ ಮಲ್ಯರನ್ನು ಗುರಿಯಾಗಿಸಿಕೊಂಡು ಬೇಸರದಿಂದ ಹೀಗೆ ಕಟುವಾಗಿ ಟೀಕಿಸಿದ್ದಾರೆ ರಾಜನ್ ಎಂಬುದನ್ನು ಇಲ್ಲಿ ಒತ್ತಿ ಹೇಳುವ ಅವಶ್ಯಕತೆ ಇಲ್ಲ, ಇತ್ತೀಚೆಗೆ ಗೋವಾದ ಅದ್ಯಾವುದೋ ಪಂಚತಾರಾ ಹೋಟೆಲ್‌ನಲ್ಲಿ ಈ ಶ್ರೀಮಂತ ಭೂಪ ತನ್ನ ೬೦ನೆಯ ಹುಟ್ಟುಹಬ್ಬವನ್ನು ಆಚರಿಸಿಕೊಂಡಿದ್ದು ಭಾರಿ ಸುದ್ದಿಯಾಗಿತ್ತು. ಕೋಟ್ಯಂತರ ಸಾರ್ವಜನಿಕ ಹಣ ಸುಲಭದಲ್ಲಿ ದೊರಕಿದಾಗ ಹೇಗೆಲ್ಲಾ ಸಂಭ್ರಮಿಸಬಹುದು ಎಂಬುದಕ್ಕೆ ಇದೊಂದು ಸೂಕ್ತ ಉದಾಹರಣೆ. ಅಂತೆಯೇ ಮಲ್ಯರಿಗೆ ಸರಿಸಮನಾಗಿ ನಿಲ್ಲಬಲ್ಲ, ಒಮ್ಮೊಮ್ಮೆ ಆತನನ್ನೂ ಮೀರಿಸಬಲ್ಲ ರಾಜಕಾರಣಿಗಳೂ ನಮ್ಮ ನಡುವೆ ಇದ್ದಾರೆ. ಹಾಗೆ ದುಂದುವೆಚ್ಚದಲ್ಲಿ ತೊಡಗುವುದು ಅಂಥವರಿಗೆ ಪ್ರತಿಷ್ಠೆಯ ಪ್ರಶ್ನೆ. ಹೇಗಿದ್ದರೂ ಅದು ಕಷ್ಟಪಟ್ಟು ಬೆವರು ಸುರಿಸಿ ಸಂಪಾದಿಸಿದ ಹಣವಲ್ಲವಲ್ಲ !

ಭಾರತೀಯ ಸ್ಟೇಟ್ ಬ್ಯಾಂಕ್ ವಿಜಯ ಮಲ್ಯರ ಕಂಪನಿಯನ್ನು 'ಬಾಕಿದಾರ' ಎಂದು ಘೋಷಿಸಿದೆ. ಹಾಗೆ ನೋಡಿದರೆ ಇತರ ಎಷ್ಟೋ ಕಂಪನಿಗಳು ಬಾಕಿ ಇರಿಸಿಕೊಂಡಿರುವ ಸಾಲದ ಮೊತ್ತಕ್ಕೆ ಹೋಲಿಸಿದರೆ ಮಲ್ಯರ ಸಾಲದ ಮೊತ್ತ ಬೆಟ್ಟವೊಂದರ ಭಾಗವಾಗಿರುವ ಒಂದು ದೊಡ್ಡ ಬಂಡೆಯಷ್ಟಿರಬಹುದು, ಅಷ್ಟೆ. ಅಗಾಧ ರಾಜಕೀಯ ಪ್ರಭಾವವುಳ್ಳ, ಕಿಂಗ್ ಫಿಷರ್ ಗ್ರೂಪಿಗಿಂತಲೂ ದೊಡ್ಡ ದೊಡ್ಡ ಕಾರ್ಪೊರೇಟ್ ಕಂಪನಿಗಳು ಸಾಲವನ್ನು ಮರುಪಾವತಿಸದೆ ವರ್ಷಾನುಗಟ್ಟಲೆ ಬಾಕಿ ಇರಿಸಿಕೊಳ್ಳುವುದು ಮಾಮೂಲಿನ ವಿಷಯ. ತಮ್ಮನ್ನು 'ಬಾಕಿದಾರ' ಎಂದು ಘೋಷಿಸುವ ಮುನ್ನ ಬಡ್ಡಿ ಹಣವನ್ನು ಮಾತ್ರ ಪಾವತಿಸಿ, ಪುನಃ ಅದೇ

ಎಸ್. ಸುರೇಂದ್ರ












ಮೊತ್ತವನ್ನು ಹೊಸ ಸಾಲದ ರೂಪದಲ್ಲಿ ಪಡೆಯುವುದೂ ಉಂಟು. ಕೆಲವೊಮ್ಮೆ ಬಡ್ಡಿ ಹಣವನ್ನೂ ವಸೂಲು ಮಾಡದೆ ಬ್ಯಾಂಕುಗಳು ಹೊಸದಾಗಿ ಸಾಲ ನೀಡಿ ಹಳೆಯದನ್ನು ಚುಕ್ತಗೊಳಿಸುವ ದಂಧೆಗಳೂ ನಡೆಯುತ್ತಿವೆ. ಇಂತಹ ತಂತ್ರಗಳ ಮೂಲಕ ತಮ್ಮ ವಾರ್ಷಿಕ ಆಯವ್ಯಯ ಪತ್ರ (ಬ್ಯಾಲೆನ್ಸ್ ಶೀಟ್)ದಲ್ಲಿ ಹಳೆಯ ಸಾಲವನ್ನು ಕಾಣಿಸುವ ಅಗತ್ಯ ಬ್ಯಾಂಕುಗಳಿಗೆ ಇರುವುದೇ ಇಲ್ಲವಲ್ಲ! ಹೀಗೆ ಮಾಡಿದಾಗ ಹಳೆಯ ಸಾಲವನ್ನು ವಸೂಲು ಮಾಡಿದಂತೆಯೂ ಆಗುತ್ತದೆ; ಅಂತೆಯೇ ಹೊಸ ಸಾಲ ನೀಡಿ ತಮ್ಮ ಒಟ್ಟಾರೆಯ ವಹಿವಾಟಿನ ಮೊತ್ತವನ್ನು ಹೆಚ್ಚಿಸಿಕೊಂಡಂತೆಯೂ ಆಗುತ್ತದೆ. ನಿಜಾರ್ಥದಲ್ಲಿ ಇದು ತಮಗಾಗುವ ನಷ್ಟಕ್ಕೆ ಹೊಸ ಸ್ವರೂಪ ನೀಡಿ ಅದನ್ನು ಲಾಭವನ್ನಾಗಿ ಪರಿವರ್ತಿಸುವ ಪರಿ. ಇದಲ್ಲವೇ ಕೈಚಳಕವೆಂದರೆ! ಇಂತಹ ಅನೈತಿಕ ವ್ಯವಹಾರಗಳು ರಿಸರ್ವ್ ಬ್ಯಾಂಕಿನ ನಿಯಮಗಳಿಗೆ ವಿರುದ್ಧವಾಗಿ ಕೈಗೊಳ್ಳುವಂಥವು. ಇಷ್ಟಾಗಿ, ಈ ಕಾರ್ಪೊರೇಟ್ ಸಂಸ್ಥೆಗಳು ಮತ್ತು ಬ್ಯಾಂಕುಗಳು ಈ ಪರಿಯ ದುರ್ವ್ಯವಹಾರಗಳಲ್ಲಿ ತೊಡಗಿ ಆಟವಾಡುತ್ತಿರುವುದು ಸಾರ್ವಜನಿಕರು, ಜನ ಸಾಮಾನ್ಯರು ಠೇವಣಿ ಇಟ್ಟಿರುವ ಹಣದ ಜೊತೆಗೆ.

ಒಂದು ಅಂದಾಜಿನ ಪ್ರಕಾರ, ಅತ್ಯಂತ ಹೆಚ್ಚಿನ ಮೊತ್ತದ ಸಾಲ ಬಾಕಿ ಇರಿಸಿಕೊಂಡಿರುವ ೧೦ ವಾಣಿಜ್ಯ ಸಮೂಹಗಳ (ಇವು ಯುಪಿಎ ಮತ್ತು ಎನ್‌ಡಿಎ ಎರಡೂ ಸರಕಾರಗಳಿದ್ದ ಅವಧಿಯಲ್ಲಿ ಎಗ್ಗಿಲ್ಲದೆ "ಅಭಿವೃದ್ಧಿ ಸಾಧಿಸಿದ" ಕಂಪನಿಗಳು) ಲೆಕ್ಕಪತ್ರಗಳಲ್ಲಿ ಕಾಣಿಸಿರುವಂತೆ ಅವರ ಸಾಲದ ಮೊತ್ತ ೭.೩ ಲಕ್ಷ ಕೋಟಿಯಷ್ಟಿದೆ. ಆದರೆ ಅವುಗಳಿಗೆ ಬಡ್ಡಿಯನ್ನು ಪಾವತಿಸಲೂ ಸಾಧ್ಯವಾಗುತ್ತಿಲ್ಲವಂತೆ! ಇವುಗಳಲ್ಲಿ ಬಹುತೇಕವು ವಿದ್ಯುತ್, ರಸ್ತೆ ನಿರ್ಮಾಣ, ಟೆಲಿಕಾಂನಂತಹ ಮೂಲಭೂತ ವ್ಯವಸ್ಥೆಯಂತಹ ಕ್ಷೇತ್ರಗಳೇ ಅಲ್ಲದೆ, ಜಾಗತಿಕ ಮಟ್ಟದಲ್ಲಿ ಬೆಲೆಗಳು ಕುಸಿದುಹೋಗಿರುವ ಉಕ್ಕು ಮುಂತಾದ ಸರಕುಗಳ ಉತ್ಪಾದನೆಯಲ್ಲೂ ತೊಡಗಿಕೊಂಡಿವೆ.

ಹಣಕಾಸು ಕ್ಷೇತ್ರದಲ್ಲಿ, ಅದರಲ್ಲೂ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಸ್ಥಿತಿ ಅಧೋಗತಿಗೆ ಇಳಿಯುತ್ತಿದೆ ಎಂದು ಪದೇ ಪದೇ ಎಚ್ಚರಿಸುತ್ತಲೇ ಇದ್ದಾರೆ ರಘುರಾಂ ರಾಜನ್. ಬ್ಯಾಂಕುಗಳು ಮುಚ್ಚಿಟ್ಟುಕೊಳ್ಳಲು ಎಷ್ಟೇ ಪ್ರಯತ್ನಿಸಿದರೂ ಇಂತಹ ಆತಂಕಕಾರಿ ಪರಿಸ್ಥಿತಿಗೆ ಮೂಲಕಾರಣ ಷೇರು ಮಾರುಕಟ್ಟೆಯಲ್ಲಾಗುತ್ತಿರುವ ಏರುಪೇರುಗಳು. ಉದಾಹರಣೆಗೆ, ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಷೇರುಗಳ ಬೆಲೆ ದಿನೇ ದಿನೇ ಕುಸಿಯುತ್ತಿದೆ. ಎಷ್ಟರಮಟ್ಟಿಗೆ ಎಂದರೆ ಈ ನಡುವೆ ಬ್ಯಾಂಕುಗಳು ತಮ್ಮ ಷೇರುಗಳನ್ನು ಅವುಗಳ ಮೂಲ ಬೆಲೆಗಿಂತಲೂ ಕಡಿಮೆ ದರದಲ್ಲಿ ನಮೂದಿಸುತ್ತಿವೆ. ಸರಳವಾಗಿ ಹೇಳುವುದಾದರೆ ಯಾವುದೇ ಒಂದು ಕಂಪನಿಯ ಮಾರುಕಟ್ಟೆ ಬೆಲೆ (ಅದರ ವಾರ್ಷಿಕ ಆಯವ್ಯಯ ಲೆಕ್ಕಪತ್ರದಲ್ಲಿ ತೋರಿಸಿರುವಂತೆ) ಅದರ ನಿವ್ವಳ ಆಸ್ತಿಯ ಮೌಲ್ಯ ದಷ್ಟಿರುತ್ತದೆ. ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಷೇರು ಬೆಲೆ ಅದರ ಮೂಲ ಬೆಲೆಗಿಂತಲೂ ಕಡಿಮೆ ದರದಲ್ಲಿದೆ. ಅವು ತಮ್ಮ ಆಯವ್ಯಯ ಲೆಕ್ಕಪತ್ರಗಳಲ್ಲಿ ತೋರಿಸಿರುವ ನಿವ್ವಳ ಆಸ್ತಿಯ ಬೆಲೆಯನ್ನು ಉತ್ಪ್ರೇಕ್ಷಿಸಿ ಕಾಣಿಸಿರುವುದನ್ನು ಸೂಚಿಸುತ್ತದೆ. ೨೦೦೮ರಲ್ಲಿ ಜಾಗತಿಕ ಹಣಕಾಸು ಕ್ಷೇತ್ರ ಬಿಕ್ಕಟ್ಟಿಗೀಡಾದಾಗ ಅಮೆರಿಕಾದ ಬ್ಯಾಂಕುಗಳೂ ಹೀಗೆಯೇ ಮಾಡಿದ್ದವು ಎಂಬುದು ಗಮನಾರ್ಹ. ಅಮೆರಿಕಾ ಸರ್ಕಾರವು

# ಆದರೆ ಮಾನವ ಹಾರಿಯೇ ಹಾರಿದ!




ಚಿಪ್ಪಲಿಗ ಬಿಷಪ್ಪನಿಗೆ ಹೇಳಿದ :
ನನ್ನನ್ನು ನಂಬಿ, ನಾ ಹಾರ ಬಲ್ಲೆ
ನೀವೂ ನನ್ನ ನೋಡ ಬನ್ನಿ
ರೆಕ್ಕೆಯಂಥದೇನೇನೋ ಕಟ್ಟಿಕೊಂಡು
ಆ ಚರ್ಚಿನ ಭವ್ಯ ಕಟ್ಟಡದ
ತುತ್ತ ತುದಿಯ ಮೇಲೆ
ನಿಂತಿದ್ದ ಅವ, ಹಾರಲು ಸಿದ್ಧನಾಗಿ

ನಿರರ್ಥಕ, ದುರ್ಬುದ್ಧಿ ಮೂರ್ಖ
ಅದು ಶುದ್ಧ ಸುಳ್ಳು
ಮನುಷ್ಯ ಹಾರಲಾರ ಎಂದೂ;
ಅವನೇನೂ ಹಕ್ಕಿಯಲ್ಲವಲ್ಲ?
ಅಂತ ಬಿಷಪ್ಪ ಹಿತನುಡಿದ ಚಿಪ್ಪಲಿಗನಿಗೆ

ಜನ ಬಿಷಪ್ಪನಿಗೆ ವರದಿ ಮಾಡಿದರು :
ಅವ ಸತ್ತ.
ಒಂದಿಷ್ಟೂ ಮೆದುಳಿಲ್ಲದ ದಡ್ಡ
ರೆಕ್ಕೆಯೆಲ್ಲ ಮುದುಡಿಕೊಂಡಿದೆ
ಚರ್ಚಿನಂಗಳದ ಕಲ್ಲುಹಾಸಿನ ಮೇಲೆ
ಬಿದ್ದಿದ್ದಾನೆ ಮುದ್ದೆಮುದ್ದೆಯಾಗಿ.

ಚರ್ಚಿನ ಗಂಟೆಗಳೆಲ್ಲಾ ರಿಂಗಣಿಸಿದುವು;
ಅದೊಂದು ಕೆಡುಕು ಸುಳ್ಳು
ಮನುಷ್ಯ ಹಾರಲಾರ ಎಂದಿಗೂ
ಅಂತ ಹೇಳಿದ ಬಿಷಪ್ ಜನರಿಗೆ

ಆದರೆ ಮಾನವ
ಹಾರಿಯೇ ಹಾರಿದ!

– ಬರ್ಟೋಲ್ಟ್ ಬ್ರೆಕ್ಟ್
"ಟೈಲರ್ ಆ ಉಲ್ಮ್"



ಡಾ|| ಜಯಾ ಮೆಹ್ತ
ಜೋಶಿ ಅಧಿಕಾರಿ ಇನ್‌ಸ್ಟಿಟ್ಯೂಟ್, ಅಜೋಯ್ ಭವನ
ನಂ. ೧೫, ಇಂದ್ರಜಿತ್ ಗುಪ್ತ ಮಾರ್ಗ, ನ್ಯೂಡೆಲ್ಲಿ – ೧೧೦ ೦೦೨

ಕವನದ ಭಾವಾನುವಾದ : **ಕೆ. ಎಸ್. ಪಾರ್ಥಸಾರಥಿ**

ತನ್ನ ಖಜಾನೆಯಲ್ಲಿದ್ದ ಸಾರ್ವಜನಿಕ ಮೀಸಲು ಹಣವನ್ನು ದಿವಾಳಿಯಾಗಿದ್ದ ಖಾಸಗಿ ಕಂಪನಿಗಳಿಗೆ ನೀಡುವ ಮುನ್ನ ಅಲ್ಲಿನ ಬ್ಯಾಂಕುಗಳ ಷೇರುಗಳ ಬೆಲೆಗಳು ಮಾರುಕಟ್ಟೆ ಬೆಲೆಗಿಂತಲೂ ಬಹಳ ಕಡಿಮೆ ಮಟ್ಟದಲ್ಲಿದ್ದವು.

ಇದಕ್ಕಿಂತಲೂ ಆತಂಕದ ವಿಷಯವೆಂದರೆ ಭಾರತದ ೨೫ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಮಾರುಕಟ್ಟೆ ಬಂಡವಾಳೀಕರಣ (Market-capitalisation)ದ ಒಟ್ಟು ಮೊತ್ತ ಎಚ್.ಡಿ.ಎಫ್.ಸಿ. ಎಂಬ ಖಾಸಗಿ ಬ್ಯಾಂಕಿನ ಮಾರುಕಟ್ಟೆ ಬೆಲೆಗಿಂತಲೂ ಕಡಿಮೆ, ಎಂದರೆ ೨.೪ ಲಕ್ಷ ಕೋಟಿಯಷ್ಟಿದೆ! ಇದು ಕ್ರಮೇಣ ಅವನತಿಯ ಹಾದಿ ಹಿಡಿಯುತ್ತಿರುವ ರಾಷ್ಟ್ರೀಕೃತ ಬ್ಯಾಂಕುಗಳ ಷೇರುಗಳ ಕಥೆ, ವ್ಯಥೆ. ಈ ಬೆಳವಣಿಗೆಯನ್ನು ಗಮನಿಸಿದ ರಘುರಾಂ ರಾಜನ್ ಈ ಬ್ಯಾಂಕುಗಳು ಉದ್ದೇಶಪೂರ್ವಕವಾಗಿ ಬಾಕಿ ಇರಿಸಿಕೊಂಡಿರುವ ಖಾತೆದಾರರ, ಕಂಪನಿಗಳ ಹೆಸರನ್ನು ಈ ಕೂಡಲೆ ಬಹಿರಂಗಗೊಳಿಸಬೇಕೆಂದು ಒತ್ತಾಯಿಸುತ್ತಿರುವುದು ಅವರ ಕರ್ತವ್ಯ ಪ್ರಜ್ಞೆಗೆ ಸಾಕ್ಷಿ. ಹಿಂದೊಮ್ಮೆ ಇದೇ ರಘುರಾಂ ರಾಜನ್ ಭಾರತದ ಮರ್ಜಿ ಬಂಡವಳಿಗರು ಯಾವತ್ತಿಗೂ (ಚುನಾವಣೆ ವೇಳೆ ತಮಗೆ ದೇಶದ ಸಂಪನ್ಮೂಲಗಳನ್ನು ಲೂಟಿ ಮಾಡಲು ಅನುಕೂಲ ಮಾಡಿಕೊಡುವ ಪಕ್ಷಗಳಿಗೆ ಕೋಟಿಗಟ್ಟಲೆ ಹಣ ನೀಡುವ ಬಂಡವಳಿಗರು) ತಮ್ಮ ಹಿತಾಸಕ್ತಿಗಳಿಗೆ ಅಡ್ಡಿಯಾಗದಂತಹ ಬಂಡವಾಳಶಾಹಿ ವ್ಯವಸ್ಥೆಗೆ ಪುಷ್ಟಿ ನೀಡುತ್ತಾರೆ ಎಂದು ಜರೆದಿರುವುದನ್ನು ಇಲ್ಲಿ ವಿಶೇಷವಾಗಿ ಗಮನಿಸಬೇಕು.

ಈ ಸಂದರ್ಭದಲ್ಲಿ ೨೦೦೭ರಲ್ಲೇ ಅಖಿಲ ಭಾರತ ಬ್ಯಾಂಕ್ ನೌಕರರ ಸಂಘ (ಎ.ಐ.ಬಿ.ಇ.ಎ.) ಬೃಹತ್ ಮೊತ್ತದ ಸಾಲಗಳನ್ನು ಉದ್ದೇಶಪೂರ್ವಕವಾಗಿ ಬಾಕಿ ಇರಿಸಿಕೊಂಡಿದ್ದ ಕಂಪನಿಗಳ ಹೆಸರುಗಳು, ಅವರ ಸಾಲದ ಮೊತ್ತ ಎರಡನ್ನೂ (ಅದು ಬ್ಯಾಂಕಿಂಗ್ ಸೀಕ್ರೆಸಿ ಆ್ಯಕ್ಟ್‌ನ ಉಲ್ಲಂಘನೆಯಾಗಿದ್ದರೂ) ಬಹಿರಂಗಗೊಳಿಸಿ ತನ್ನ ದಿಟ್ಟತನ ಮೆರೆದಿತ್ತು. ಠೇವಣಿದಾರರ ಹಿತದೃಷ್ಟಿಯನ್ನು ಹಾಗೂ ಬ್ಯಾಂಕಿಂಗ್ ಕ್ಷೇತ್ರವೇ ಅಲ್ಲದೆ, ರಾಷ್ಟ್ರದ ಆರ್ಥಿಕ ವ್ಯವಸ್ಥೆಯ ಮೇಲೆ ಸಂಭವಿಸಬಹುದಾದ ಪರಿಣಾಮಗಳನ್ನು ಪರಿಗಣಿಸಿ ಅಖಿಲ ಭಾರತ ಬ್ಯಾಂಕ್ ನೌಕರರ ಸಂಘ ಅಂತಹ ಕ್ರಮ ಕೈಗೊಂಡದ್ದು ಸಾಮಾನ್ಯ ಸಂಗತಿಯಲ್ಲ. ಎ.ಐ.ಬಿ.ಇ.ಎ. ಹೀಗೆ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ನೀತಿಗಳಿಂದ ರಾಷ್ಟ್ರದ ಆರ್ಥಿಕತೆಯ ಮೇಲೆ ಆಗಲಿರುವ ವಿನಾಶಕಾರಿ ಪರಿಣಾಮಗಳನ್ನು ಮನಗಂಡು ಬಹುತೇಕ ಇತರ ಎಲ್ಲ ಬ್ಯಾಂಕ್ ನೌಕರರ ಸಂಘಟನೆಗಳನ್ನು ಒಗ್ಗೂಡಿಸಿದ ಫಲ ಯುನೈಟೆಡ್ ಫೋರಂ ಆಫ್ ಬ್ಯಾಂಕ್ ಎಂಪ್ಲಾಯೀಸ್ ಎಂಬ ಸಂಘಟನೆ. ಇದು ರಾಷ್ಟ್ರದ ಬ್ಯಾಂಕ್ ನೌಕರರ ಸಂಘಟನೆಗಳ ಇತಿಹಾಸದಲ್ಲಿ ಒಂದು ಮಹತ್ವದ ಹೆಜ್ಜೆ. ಈ ಸಂಘಟನೆಯ ಹೋರಾಟಗಳಲ್ಲಿ ಭಾರತೀಯ ಜನತಾ ಪಕ್ಷದ ಟ್ರೇಡ್ ಯೂನಿಯನ್ ಅಂಗ ಸಂಸ್ಥೆಗಳಾದ ಎನ್.ಒ.ಬಿ.ಒ. ಮತ್ತು ಎನ್.ಒ.ಬಿ. ಕೂಡ ಭಾಗವಹಿಸಿರುವ ನಿದರ್ಶನಗಳುಂಟು. ಈಗಿನ ಎನ್‌ಡಿಎ ಸರ್ಕಾರ ಖಾಸಗಿ ಕ್ಷೇತ್ರದಲ್ಲಿ ಬ್ಯಾಂಕುಗಳನ್ನು ಪ್ರಾರಂಭಿಸಲು ಪರವಾನಗಿ ನೀಡಿ ಪ್ರೋತ್ಸಾಹಿಸುತ್ತಿದೆ. ಈ ಪ್ರಕ್ರಿಯೆಗೆ ಯುಪಿಎ ಸರ್ಕಾರದ ಅಧಿಕಾರಾವಧಿಯಲ್ಲೇ ಚಾಲನೆ ನೀಡಲಾಗಿತ್ತು. ಎ.ಐ.ಬಿ.ಇ.ಎ. ಈ ಕೇಂದ್ರ ಸರ್ಕಾರದ ನಡೆಯ ವಿರುದ್ಧ ಉಗ್ರ ಹೋರಾಟಗಳನ್ನು ದೇಶದಾದ್ಯಂತ ನಡೆಸುತ್ತಿರುವುದು ಶ್ಲಾಘನೀಯ.


ರಘುರಾಂ ರಾಜನ್

ಎ.ಐ.ಬಿ.ಇ.ಎ. ವಿರುದ್ಧ ಕೆಲವು ಸಾಲಗಾರರು ಕೋರ್ಟಿನಲ್ಲಿ ಮೊಕದ್ದಮೆ ಹೂಡಿದ್ದಾರೆ. ಅದು ಹಾಗಿರಲಿ, ಈ ನೌಕರರ ಸಂಘಟನೆ ಮತ್ತೊಮ್ಮೆ ೨೦೦೭ರಲ್ಲಿ ಆ ಅನುತ್ಪಾದಕ ಸಾಲಗಳನ್ನು (ಎನ್.ಪಿ.ಎ.) ಬಾಕಿ ಇರಿಸಿಕೊಂಡಿರುವವರ ಹೆಸರುಗಳನ್ನು ಪ್ರಕಟಿಸಿರುವುದು ಆರ್ಥಿಕ ಮತ್ತು ಸಾರ್ವಜನಿಕ ವಲಯಗಳಲ್ಲಿ ಅಲೆಗಳನ್ನೆಬ್ಬಿಸಿದೆ. ಕಾರ್ಪೊರೇಟ್ ಕಂಪನಿಗಳಿಗೆ ಇದೊಂದು ಸವಾಲಿನ ಪ್ರಶ್ನೆ.

ಇತ್ತೀಚೆಗೆ ಕ್ರೆಡಿಟ್ ಸುಯಿಸ್ಸೆ ಎಂಬ ಸಂಶೋಧನ ಸಂಸ್ಥೆಯು ಮೂಲಭೂತ ವ್ಯವಸ್ಥೆಗಳನ್ನು ನಿರ್ಮಿಸುವ ಮತ್ತು ಸರಕು ಸರಬರಾಜು ಮಾಡುವ ಕ್ಷೇತ್ರಗಳಲ್ಲಿರುವ ಕಂಪನಿಗಳಿಗೆ ಸಂಬಂಧಿಸಿದಂತೆ ೧೦ ಕಂಪನಿಗಳ ಕುರಿತು ಬಹಳ ಕುತೂಹಲಕಾರಿ ಮಾಹಿತಿಯನ್ನು ನೀಡಿದೆ. ಆ ಮಾಹಿತಿಯ ಪ್ರಕಾರ ಚೀಣಾ ಎದುರಿಸುತ್ತಿರುವ ಆರ್ಥಿಕ ಬಿಕ್ಕಟ್ಟಿನ ಬಿಸಿ ಈ ಕಂಪನಿಗಳಿಗೂ ತಟ್ಟಿ, ಇವು ತತ್ತರಿಸುತ್ತಿವೆ. ಎಸ್ಸಾರ್, ರಿಲಯನ್ಸ್, ಎ.ಡಿ.ಎ.ಜಿ., ಜಿ.ಎಮ್.ಆರ್., ಜಿ.ವಿ.ಕೆ., ಅದಾನಿ, ಲ್ಯಾನ್ಕೊ, ವೀಡಿಯೋಕಾನ್, ವೇದಾಂತ, ಜೇಪೀ ಎಂಬ ಈ ಹತ್ತು ಕಂಪನಿಗಳು ಬಾಕಿ ಇರಿಸಿಕೊಂಡಿರುವ ಒಟ್ಟು ಸಾಲದ ಮೊತ್ತ ಸುಮಾರು ೭.೫ ಲಕ್ಷ ಕೋಟಿ ರೂ.ಗಳು. ಇದರಲ್ಲಿ, ಕ್ರೆಡಿಟ್ ಸುಯಿಸ್ಸೆ ಅಂದಾಜಿಸಿರುವಂತೆ, ೫ ಲಕ್ಷ ಕೋಟಿಯಷ್ಟಿರುವ ಸಾಲಗಳು ವಸೂಲಾಗುವ ಸಾಧ್ಯತೆ ತೀರ ಕಡಿಮೆ. ಕೆಲವು ಖಾಸಗಿ ಏಜೆನ್ಸಿಗಳೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿವೆ. ಆದರೆ ಬ್ಯಾಂಕುಗಳಲ್ಲಿ ಕೊಳೆತು ನಾರುತ್ತಿರುವ ಇಂತಹ ಸಾಲಗಳನ್ನು 'ಅನುತ್ಪಾದಕ ಸಾಲಗಳು' ಎಂದು ಪರಿಗಣಿಸುವ ಯಾವ ಚಿಹ್ನೆಗಳೂ ಕಂಡುಬರುತ್ತಿಲ್ಲ. ರಘುರಾಂ ರಾಜನ್ ಪದೇ ಪದೇ ಆತಂಕವನ್ನು ವ್ಯಕ್ತಪಡಿಸುತ್ತಿರುವುದು ಇಂತಹ ಸಾಲಗಳ ಬಗ್ಗೆಯೇ.




ರಘುರಾಂ ರಾಜನ್ ಅವರ ಪ್ರಾಮಾಣಿಕ ನಿಲುವು ಮತ್ತು ಹೇಳಿಕೆಗಳು ದೇಶದ ಆರ್ಥಿಕ ವ್ಯವಸ್ಥೆಯ ಬಗ್ಗೆ ಅವರಿಗಿರುವ ಕಾಳಜಿಯನ್ನು ಸೂಚಿಸುತ್ತವೆ. ಅಲ್ಲದೆ, ರಾಜಕೀಯ ವಲಯಗಳಲ್ಲಿ ತಲ್ಲಣಗಳಿಗೆ ಎಡೆಮಾಡಿಕೊಟ್ಟಿವೆ. ನಮ್ಮ ಆರ್ಥಿಕತೆ ಸುಸ್ಥಿತಿಯಲ್ಲಿದೆ, ದೇಶವು ಪ್ರಗತಿಯ ಹಾದಿಯಲ್ಲಿ ದಾಪುಗಾಲು ಹಾಕುತ್ತಿದೆ ಎಂದೆಲ್ಲಾ ಆಗಾಗ್ಗೆ ಆಧಾರರಹಿತ ಹೇಳಿಕೆಗಳನ್ನು ನೀಡುವುದರಲ್ಲೇ ನಿರತರಾಗಿರುವ ಪ್ರಧಾನಿ ನರೇಂದ್ರ ಮೋದಿ ಮತ್ತು ವಿತ್ತ ಸಚಿವ ಅರುಣ್ ಜೇಟ್ಲಿ ಕಠಿಣ ವಾಸ್ತವವನ್ನು ಎದುರಿಸಲೇಬೇಕಾಗಿ ಬರುವ ದಿನಗಳು ದೂರವಿಲ್ಲ. ಇದಕ್ಕೆಲ್ಲಾ ಕಾರಣ ಇಷ್ಟೆ: ಈ ಕಾರ್ಪೊರೇಟ್ ಕಂಪನಿಗಳೇ ೨೦೧೪ರ ಲೋಕಸಭಾ ಚುನಾವಣೆಯ ಸಂದರ್ಭದಲ್ಲಿ ಭಾರತೀಯ ಜನತಾಪಕ್ಷಕ್ಕೆ ಕೋಟಿಗಟ್ಟಲೆ ನಿಧಿ ನೀಡಿ ಅಧಿಕಾರದ ಗದ್ದುಗೆ ಏರಲು ಸಹಕರಿಸಿದ್ದು! ಎಂದೇ ಮೋದಿ ಮತ್ತು ಜೇಟ್ಲಿ ಮುಂಬರುವ ದಿನಗಳಲ್ಲಿ ಈ ಕಂಪನಿಗಳ ಬಗ್ಗೆ ಎಂತಹ ನೀತಿ ನಿಲುವುಗಳನ್ನು ತೆಗೆದುಕೊಳ್ಳುತ್ತಾರೆ ಎಂಬುದನ್ನು ರಾಜಕೀಯ ತಜ್ಞರು ಮತ್ತು ವಿರೋಧ ಪಕ್ಷಗಳು ತೀಕ್ಷ್ಣವಾಗಿ ಗಮನಿಸುತ್ತಿದ್ದಾರೆ. ಕೆಲವು ದಿವಸಗಳ ಹಿಂದಷ್ಟೆ ಸಿ.ಎನ್.ಬಿ.ಸಿ.ಯ

ಆವಾಜ್ ಚಾನಲ್‌ನ ಕಾರ್ಯಕ್ರಮವೊಂದರಲ್ಲಿ ಬಿಜೆಪಿಯ ವಕ್ತಾರರೊಬ್ಬರು ಈ ಸಾಲಗಾರ ಕಂಪನಿಗಳಲ್ಲಿ ಎಷ್ಟು ಕಂಪನಿಗಳು, ತಮ್ಮದೇ ಆದ ಸಾಕಷ್ಟು ಸಂಪನ್ಮೂಲಗಳನ್ನು ಹೊಂದಿದ್ದರೂ, ಉದ್ದೇಶಪೂರ್ವಕವಾಗಿ ಸಾಲಗಳನ್ನು ಬಾಕಿ ಇರಿಸಿಕೊಂಡಿವೆ, ಎಷ್ಟು ಕಂಪನಿಗಳು ತಮ್ಮ ವ್ಯಾಪಾರ ವಹಿವಾಟುಗಳಲ್ಲಿ ನಷ್ಟಕ್ಕೀಡಾಗಿ ಸಾಲ ತೀರಿಸಲು ಅಸಮರ್ಥವಾಗಿವೆ, ಎಂಬುದನ್ನು ನಿರ್ಧರಿಸುವುದು ಕೇಂದ್ರ ಸರ್ಕಾರಕ್ಕೆ ಸವಾಲಿನ ಪ್ರಶ್ನೆಯಾಗಿದೆ ಎಂದು ಒಪ್ಪಿಕೊಂಡಿರುವುದು ಗಮನಾರ್ಹ. ಕ್ರೆಡಿಟ್ ಸುಯಿಸ್ಸೆ ಸಂಸ್ಥೆ ಪ್ರಕಟಿಸಿರುವ ಪಟ್ಟಿಯತ್ತ ಒಮ್ಮೆ ಕಣ್ಣು ಹಾಯಿಸಿದರೆ ಈ ಸಾಲಗಾರ ಕಾರ್ಪೊರೇಟ್‌ಗಳಲ್ಲಿ ಬಹುತೇಕ ಕಂಪನಿಗಳು ಯು.ಪಿ.ಎ. ಆಡಳಿತದಲ್ಲಿ ಜರುಗಿದ ಹಗರಣದ ಗೋಜುಗಳಲ್ಲಿ ತಮ್ಮ ಬೇಳೆ ಬೇಯಿಸಿಕೊಂಡಿದ್ದವು, ಎಷ್ಟು ಕಂಪನಿಗಳು ಮರ್ಜಿ ಬಂಡವಾಳಶಾಹಿ ಕುಳಗಳೊಂದಿಗೆ ನಿಕಟ ಸಂಬಂಧ ಹೊಂದಿದ್ದವು ಎಂಬುದನ್ನರಿಯುವುದು ಕಷ್ಟವೇನಲ್ಲ. ೨೦೦೮ರಲ್ಲಿ ಅಮೆರಿಕಾ ಸರ್ಕಾರ ದಿವಾಳಿಯಾಗುತ್ತಿದ್ದ ಕಂಪನಿಗಳಿಗೆ ನೀಡಿದಂತೆ, ಎನ್‌ಡಿಎ ಸರ್ಕಾರವೂ ಇಂತಹ ಧೂರ್ತ, ರಾಷ್ಟ್ರವಿರೋಧಿ ಕಂಪನಿಗಳಿಗೆ ಸಾರ್ವಜನಿಕರ ಹಣವನ್ನು ನೀಡಿದ್ದೇ ಆದರೆ ಪ್ರಧಾನಿ ನರೇಂದ್ರ ಮೋದಿಯವರ ನಿಜ ಬಣ್ಣ ಬಟಾಬಯಲಾಗುವುದಲ್ಲದೆ, ಅವರು ಹೊಸ ಹೊಸ ಆರೋಪಗಳನ್ನೆದುರಿಸಬೇಕಾಗುತ್ತದೆ. ಇದು ಎನ್‌ಡಿಎ ಅರ್ಥಾತ್ ಭಾರತೀಯ ಜನತಾ ಪಕ್ಷದ ಮುಂದಿರುವ ಬಹುದೊಡ್ಡ ಸವಾಲು.

ದಿನೇ ದಿನೇ ಹದಗೆಡುತ್ತಿರುವ ಬ್ಯಾಂಕಿಂಗ್ ಕ್ಷೇತ್ರದ ಪರಿಸ್ಥಿತಿಯನ್ನು ಕಳಕಳಿಯಿಂದ ಹೊರಗೆಡವಿದ್ದಾರೆ ಕೋಟಕ್. ಈತ ಕೊಟಕ್ ಮಹೀಂದ್ರ ಬ್ಯಾಂಕಿನ ಚೇರ್‌ಮನ್, ಆರ್ಥಿಕ ತಜ್ಞರೂ ಕೂಡ. ಇತ್ತೀಚೆಗೆ ದಾವೋಸ್‌ಗೆ ಭೇಟಿಯಿತ್ತಿದ್ದ ಕೋಟಕ್ ನಮ್ಮ ಬ್ಯಾಂಕುಗಳು ಜಾಗತಿಕ ಮಟ್ಟದಲ್ಲಿ ಇನ್ನಾದರೂ ಸರಕುಗಳ ಬೆಲೆ ಮತ್ತೆ ಚೇತರಿಸಿಕೊಳ್ಳಲಿವೆ; ಅದರಿಂದಾಗಿ ನಮ್ಮ ಸಾಲಗಾರ ಕಂಪನಿಗಳೂ ಚೇತರಿಸಿಕೊಂಡು ಋಣಮುಕ್ತರಾಗುತ್ತಾರೆ ಎಂದು ಕಾದು ಕೂರುವುದು ಸರಿಯಲ್ಲ ಎಂದು ನೇರ ಮತ್ತು ನಿಷ್ಠುರ ಮಾತುಗಳಲ್ಲಿ ಕೇಂದ್ರ ಸರ್ಕಾರ ಮತ್ತು ಬ್ಯಾಂಕ್ ಅಧಿಕಾರಿಗಳನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ಬರುವ ಮಾರ್ಚ್ ೩೧ರ ಒಳಗೆ ಎಲ್ಲ ಬ್ಯಾಂಕುಗಳೂ ಕೆಟ್ಟು ನಾರುತ್ತಿರುವ ಸಾಲಗಳ ಮೊತ್ತವನ್ನು, ಸಾಲಗಾರರ ಹೆಸರುಗಳನ್ನು ಬಹಿರಂಗಗೊಳಿಸಬೇಕೆಂಬ ರಘುರಾಂ ರಾಜನ್ ಅವರ ಗಟ್ಟಿ ನಿಲುವನ್ನು ಸಮರ್ಥಿಸಿದ್ದಾರೆ ಕೋಟಕ್.



ಈ ವರ್ಷವೂ ನಮ್ಮ ದೇಶದ ಆರ್ಥಿಕತೆ ಇದೇ ರೀತಿಯಲ್ಲಿ ಹದಗೆಡುತ್ತಾ ಹೋದರೆ, ಅಂತಹ ಪರಿಸ್ಥಿತಿಯನ್ನು ಎದುರಿಸುವ ಆತ್ಮವಿಶ್ವಾಸ ನಮ್ಮ ಬಂಡವಳಿಗರಿಗೆ, ಕಾರ್ಪೊರೇಟ್‌ಗಳಿಗೆ ಇಲ್ಲ ಎಂಬ ಕೋಟಕ್ ಅವರ ವಾದ ಅರ್ಥಗರ್ಭಿತವಾಗಿದೆ. ೨೦೦೮ರಲ್ಲಿ ಸಂಭವಿಸಿದ ಜಾಗತಿಕ ಆರ್ಥಿಕ ಕುಸಿತದಿಂದಾಗಿ ಅಮೆರಿಕ ಮತ್ತಿತರ ಬಂಡವಾಳಶಾಹಿ ರಾಷ್ಟ್ರಗಳು ತತ್ತರಿಸಿಹೋದದ್ದು ಎಲ್ಲರಿಗೂ ತಿಳಿದ ವಿಷಯವೆ. ಅಂದಿನ ಸಂದರ್ಭದಲ್ಲಿ ಕಾರ್ಪೊರೇಟ್ ಕಂಪನಿಗಳು ಆತ್ಮವಿಶ್ವಾಸದಿಂದ ಬೀಗುತ್ತಿದ್ದವು. ಅದಿರಲಿ, ಅಂತಹ ಕಠಿಣ ಪರಿಸ್ಥಿತಿಯಲ್ಲೂ ನಮ್ಮ ಆರ್ಥಿಕತೆ ಗಟ್ಟಿಯಾಗಿ ನಿಂತದ್ದಕ್ಕೆ ಕಾರಣ ಸಾರ್ವಜನಿಕ ವಲಯದಲ್ಲಿರುವ ಹಣಕಾಸು ಸಂಸ್ಥೆಗಳಾದ ಬ್ಯಾಂಕುಗಳು ಮತ್ತು ಭಾರತೀಯ ವಿಮಾ ನಿಗಮ ಎಂಬ ವಾಸ್ತವವನ್ನು ಮರೆಯಲಾಗದು. ಆದರೆ ಇಂದೇಕೆ ಬ್ಯಾಂಕುಗಳ ಪರಿಸ್ಥಿತಿ ಈ ಹೀನಾಯ ಪರಿಸ್ಥಿತಿಗೆ ತಲುಪಿದೆ ? ಕೋಟಕ್ ಅವರ ಪ್ರಕಾರ ಬ್ಯಾಂಕುಗಳು ಇತಿಮಿತಿಯಿಲ್ಲದೆ ರಾಜಕಾರಣಿಗಳ ಒತ್ತಾಯಕ್ಕೆ ಮಣಿದೋ, ತಮ್ಮದೇ ಕಾರಣಗಳಿಗಾಗಿಯೋ ಕಾರ್ಪೊರೇಟ್ ತಿಮಿಂಗಲಗಳಿಗೆ ಸಾಲ ನೀಡಿವೆ. ಈಗ ಅವು ಬೆಟ್ಟದಷ್ಟು ಬೆಳೆದು ನಿಂತಿವೆ.

ಇಂತಹ ಹತಾಶೆಯ ಸನ್ನಿವೇಶವನ್ನು ನಮ್ಮ ರಾಷ್ಟ್ರ ಎದುರಿಸುತ್ತಿರುವ ಹೊತ್ತಿನಲ್ಲೇ ವಿತ್ತ ಸಚಿವ ಅರುಣ್ ಜೇಟ್ಲಿ ಮಹಾಶಯ ನಮ್ಮ ಬ್ಯಾಂಕಿಂಗ್ ಕ್ಷೇತ್ರದ ಪರಿಸ್ಥಿತಿ ಹದಗಟ್ಟಿದೆ, ಅದು ದೇಶದ ಆರ್ಥಿಕತೆಯ ಮೇಲೆ ನೇತ್ಯಾತ್ಮಕ ಪರಿಣಾಮ ಬೀರಲಿದೆ ಎಂಬ ವಾಸ್ತವವನ್ನು ತಳ್ಳಿಹಾಕುತ್ತಾರೆ. ಬದಲು, ೨೦೦೮ರ ಪರಿಸ್ಥಿತಿಗೆ ಹೋಲಿಸಿದರೆ ನಮ್ಮ ಆರ್ಥಿಕತೆ ಸುಸ್ಥಿತಿಯಲ್ಲಿದೆ ಎಂದು ಪ್ರತಿವಾದಿಸುತ್ತಾರೆ. ಎಷ್ಟಾದರೂ ಅವರೊಬ್ಬ ಖ್ಯಾತ ವಕೀಲರಲ್ಲವೇ ! ಆದರೆ ದಾವೋಸ್‌ನಲ್ಲಿ ವಿಶ್ವ ಆರ್ಥಿಕ ಫೋರಂ ಆಯೋಜಿಸಿದ್ದ ಸಭೆಯಲ್ಲಿ ಭಾಗವಹಿಸಿದ್ದ ಬಹುತೇಕ ಆರ್ಥಿಕ ತಜ್ಞರು ಜೇಟ್ಲಿ ಅವರ ಮೊಂಡುವಾದವನ್ನು ಸಮರ್ಥಿಸುವುದು ದೂರದ ಮಾತು.

ಈ ಎಲ್ಲ ಬೆಳವಣಿಗೆಗಳು ಮತ್ತು ಬ್ಯಾಂಕುಗಳ ಇಂತಹ ಕೆಟ್ಟ ಪರಿಸ್ಥಿತಿ ಬರುವ ದಿನಗಳಲ್ಲಿ ಅವುಗಳ ಖಾಸಗೀಕರಣಕ್ಕೆ ಮುನ್ನುಡಿಯಾಗಲಿವೆಯೇ ? ಈ ಎಲ್ಲ ಪ್ರಕ್ರಿಯೆಗಳ ಹಿಂದೆ ಆಡಳಿತಶಾಹಿ ಬಂಡವಳಿಗ ವರ್ಗಗಳು, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ವಿಶ್ವ ಬ್ಯಾಂಕು, ಇವುಗಳ ಕೈವಾಡವಿದೆಯೇ ? ಈ ದುರ್ವ್ಯವಹಾರಗಳಲ್ಲಿ ಬ್ಯಾಂಕುಗಳ ಉನ್ನತ ಅಧಿಕಾರಿಗಳೂ ಶಾಮೀಲಾಗಿದ್ದಾರೆಯೇ ? ಈ ಪ್ರಶ್ನೆಗಳ ಕುರಿತು ವ್ಯಾಪಕ ಚರ್ಚೆಗಳಾಗಬೇಕಾದುದು ಇಂದಿನ ತುರ್ತು ಅಗತ್ಯ.

ಕಡೆಯದಾಗಿ,

ದಿನಬೆಳಗಾದರೆ ಲಾಲು ಪ್ರಸಾದ್ ಯಾದವ್, ಮಾರನ್, ಕನಿಮೋಳಿ ಮುಂತಾದವರ ಹಗರಣಗಳ ಬಗ್ಗೆ ಹೇಳಿಕೆಗಳನ್ನು ನೀಡುವ ಸುಬ್ರಮಣ್ಯನ್ ಸ್ವಾಮಿಯಂತಹ ಪಂಡಿತರು, ತಜ್ಞರು, ಮೀಡಿಯ ಮತ್ತು ಪತ್ರಿಕೆಗಳ ಪ್ರತಿನಿಧಿಗಳು ಈ ದುಷ್ಟ ಕಾರ್ಪೊರೇಟ್ ತಿಮಿಂಗಲಗಳ ಬಗ್ಗೆ ಅದೇಕೆ ಜಾಣ ಮೌನ ವಹಿಸುತ್ತಾರೆ ?

(ಆಧಾರ : ಎಂ. ಕೆ. ವೇಣು)

**ಈ ಕೋಷ್ಟಕ ಬ್ಯಾಂಕುಗಳ "ಔದಾರ್ಯ"ವನ್ನು ಸೂಚಿಸುತ್ತದೆ.**

| ೨೦೧೫ರಲ್ಲಿ ಸಾಲ ಮನ್ನಾ ಮಾಡಿದ ೧೦ ಬ್ಯಾಂಕುಗಳು (ಕೋಟಿ ಲೆಕ್ಕದಲ್ಲಿ) | | ೨೦೧೨, ೨೦೧೩, ೨೦೧೪ರಲ್ಲಿ ಮನ್ನಾ ಮಾಡಿದ ಬ್ಯಾಂಕುಗಳು (ಕೋಟಿ ಲೆಕ್ಕದಲ್ಲಿ) | |
|---|---|---|---|
| ಎಸ್‌ಬಿಐ ೨೧,೩೧೩ ಪಿಎನ್‌ಬಿ | ೬,೫೮೭ | ಎಸ್‌ಬಿಐ ೪೦,೦೮೪ ಪಿಎನ್‌ಬಿ | ೯,೫೩೧ |
| ಇಂಡಿಯನ್ ಓವರ್‌ಸೀಸ್ ಬ್ಯಾಂಕ್ | ೩,೧೩೧ | ಇಂಡಿಯನ್ ಓವರ್‌ಸೀಸ್ ಬ್ಯಾಂಕ್ | ೬,೨೪೭ |
| ಅಲಹಾಬಾದ್ ಬ್ಯಾಂಕ್ | ೨,೧೦೯ | ಬ್ಯಾಂಕ್ ಆಫ್ ಇಂಡಿಯಾ | ೪,೯೮೩ |
| ಐಡಿಬಿಐ ಬ್ಯಾಂಕ್ ಲಿಮಿಟೆಡ್ | ೧,೬೦೯ | ಬ್ಯಾಂಕ್ ಆಫ್ ಬರೋಡಾ | ೪,೮೮೪ |
| ಬ್ಯಾಂಕ್ ಆಫ್ ಬರೋಡಾ | ೧,೫೬೪ | ಕೆನರಾ ಬ್ಯಾಂಕ್ | ೪,೫೯೮ |
| ಸಿಂಡಿಕೇಟ್ ಬ್ಯಾಂಕ್ | ೧,೫೨೭ | ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ | ೪,೪೪೨ |
| ಕೆನರಾ ಬ್ಯಾಂಕ್ | ೧,೪೭೨ | ಅಲಹಾಬಾದ್ ಬ್ಯಾಂಕ್ | ೪,೨೪೩ |
| ಯುಕೊ ಬ್ಯಾಂಕ್ | ೧,೪೦೧ | ಸಿಂಡಿಕೇಟ್ ಬ್ಯಾಂಕ್ | ೩,೮೪೯ |
| ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ | ೧,೩೮೬ | ಓರಿಯಂಟಲ್ ಬ್ಯಾಂಕ್ ಆಫ್ ಕಾಮರ್ಸ್ | ೩,೫೯೩ |

**ಎಸ್. ಸುರೇಂದ್ರ**
ನಂ. ೨೪, ೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲನಿ
ಜಯನಗರ ಪೂರ್ವ, ಬೆಂಗಳೂರು – ೫೬೦ ೦೧೧



ನಭಾವಲೋಕನ

# ಲೆಕ್ಕಕ್ಕೆ ಮಾತ್ರ ಗ್ರಹಣಗಳು

ಬಹಳ ಅಂತರದ ನಂತರ ಗ್ರಹಣವೊಂದು ಗೋಚರಿಸಲಿದೆ. ಮಾರ್ಚ್ ೯ರ ಮಂಜಾವಿನಲ್ಲೇ ಆರಂಭವಾಗುವ ಸೂರ್ಯಗ್ರಹಣ ನಮಗೆ "ಗೋಚರಿಸುವುದು" ಹತ್ತು ನಿಮಿಷಗಳು ಮಾತ್ರ. ಅಂದರೆ ಸೂರ್ಯೋದಯವಾಗುವಾಗ ಅಂಚು ಮಾತ್ರ ಹೆಚ್ಚಿ ಹೋದಂತೆ ಕಾಣುವುದು. ಈ ಅಂಚು ದಿಗಂತದ ಕಡೆಗೆ ಇರುವುದರಿಂದ ಗುರುತಿಸುವುದು ಕಷ್ಟವೇ ಆಗಬಹುದು. ಸೂರ್ಯನ ಬಿಂಬ ಅರ್ಧದಷ್ಟು ಕಾಣುತ್ತಿರುವಾಗ ಗಮನಿಸಿ. ಎರಡು ನಿಮಿಷಗಳಲ್ಲಿ ಇಡೀ ಬಿಂಬ ಮೇಲೆ ಬರುತ್ತದೆ. ಕೆಳಗಿನ (ಅಂದರೆ ಪೂರ್ವ ದಂಚಿನ) ತುದಿ ಸ್ವಲ್ಪ ಮುಕ್ಕಾಗಿದೆ ಯೇನೋ ಎಂಬ ಅನುಮಾನ ಬರುತ್ತಿರುತ್ತದೆ. ಕೆಲವೇ ನಿಮಿಷ ಗಳಲ್ಲಿ ಸೂರ್ಯನ ಪ್ರಖರತೆ ಹೆಚ್ಚಿ ಬರಿಗಣ್ಣಿನಿಂದ ಏನನ್ನೂ ಗುರುತಿಸಲು ಸಾಧ್ಯವಾಗದೇ ಹೋಗುತ್ತದೆ. ಈ ಹಂತದಲ್ಲಿ ವೆಲ್ಡರ್ ಗ್ಲಾಸ್ (ನಂ. ೧೪) ಉಪಯೋಗಿಸಿ ನೋಡಿದಲ್ಲಿ ಚಂದ್ರ ಇನ್ನೂ ಸೂರ್ಯನನ್ನು ಬಿಟ್ಟು ಸರಿದಿಲ್ಲ ಎಂದು ತಿಳಿಯುತ್ತದೆ. ಆದರೆ ಅದನ್ನು ಸ್ಪಷ್ಟಪಡಿಸಿಕೊಳ್ಳುವ ಹೊತ್ತಿಗೆ ಗ್ರಹಣವೇ ಮುಗಿದುಹೋಗಿರುತ್ತದೆ. ಆದ್ದರಿಂದ ಇದು ಲೆಕ್ಕಕ್ಕೆ ಗ್ರಹಣ– ನೋಟಕ್ಕೆ ಅಲ್ಲ. ಬಹುತೇಕ ಸಂದರ್ಭ ಗಳಲ್ಲಿ ಸೂರ್ಯೋದಯವಾಗುವುದನ್ನು ನೋಡಲು ಬಹಳ ಅಡಚಣೆಗಳಿರುತ್ತವೆ. ತೆಳ್ಳನೆಯ ಮೋಡ, ಧೂಳು, ಹೊಂಜು (ಹೊಗೆ+ಮಂಜು) – ಇವುಗಳ ಕಾರಣ ಸೂರ್ಯೋದಯವಾದ ಐದಾರು ನಿಮಿಷಗಳ ನಂತರವೇ ಸೂರ್ಯ ಕಾಣುವುದು. ಆದ್ದರಿಂದ ಈ ಗ್ರಹಣವನ್ನು ನೋಡುವ ಅವಕಾಶ ಕಡಿಮೆ. ಪೂರ್ವ ದಿಗಂತದ ಅಂಚು ಕಾಣುವ ಸ್ಥಳವನ್ನು ಮೊದಲೇ ಆರಿಸಿಕೊಂಡು ಕಾಯುತ್ತಾ ಕುಳಿತು ಅದೃಷ್ಟ ಪರೀಕ್ಷೆ ಮಾಡಿಕೊಳ್ಳಬಹುದು. ಸೂರ್ಯೋದಯವಾದ ಎರಡು ನಿಮಿಷಗಳು ಮಾತ್ರ ಬರಿಗಣ್ಣಿನಿಂದ ನೋಡಬಹುದು. ಆಮೇಲೆ ಯಾವುದೇ ಕಾರಣಕ್ಕೂ ಸೂರ್ಯನನ್ನು ಬರಿಗಣ್ಣಿನಿಂದ ನೋಡಬಾರದು. ವೆಲ್ಡರ್ ಗ್ಲಾಸ್ ಅಥವಾ ವಿಶೇಷವಾಗಿ ತಯಾರಾದ ಕನ್ನಡಕಗಳನ್ನು ಉಪಯೋಗಿಸಿಯೇ ನೋಡಬೇಕು. ಇಲ್ಲದಿದ್ದಲ್ಲಿ ಶಾಶ್ವತ ಕುರುಡುತನ ಖಚಿತ. ನೀರಿನಲ್ಲಿ ಪ್ರತಿಫಲನ ನೋಡುವುದೂ ಕೂಡ ಸುರಕ್ಷಿತವಲ್ಲ.



ಮಾರ್ಚ್ ೯ರಂದು ಸೂರ್ಯೋದಯ

ಕರ್ನಾಟಕದ ಎಲ್ಲ ನಗರಗಳಲ್ಲೂ ೬:೪೭ಕ್ಕೆ ಗ್ರಹಣ ಮುಕ್ತಾಯವಾಗುತ್ತದೆ. ಬೆಳಗಾಂನಿಂದ ಮೈಸೂರುವರೆಗೆ ಕೆಲವು ಸೆಕೆಂಡ್‌ಗಳ ವ್ಯತ್ಯಾಸ ಇರುತ್ತದೆ. ಆದ್ದರಿಂದ, ೬:೪೦ಕ್ಕೇ ಗ್ರಹಣ ವೀಕ್ಷಣೆಯನ್ನು ಮುಕ್ತಾಯ ಮಾಡುವುದು ಕ್ಷೇಮ. ಶಿರಸಿ, ಕಾರವಾರ – ಈ ಭಾಗದವರಿಗೆ ಗ್ರಹಣ ಕಾಣುವುದೇ ಇಲ್ಲ. ಮಹಾರಾಷ್ಟ್ರ, ಗುಜರಾತ್ ರಾಜ್ಯಗಳಿಗೂ ಇಲ್ಲ. ಆಂಧ್ರ, ತಮಿಳುನಾಡುಗಳಲ್ಲಿ ಒಂದು ನಿಮಿಷ ಹೆಚ್ಚಾಗಿ ಕಾಣಬಹುದಷ್ಟೆ. ದೆಹಲಿ, ಚಂಡೀಘಡದಲ್ಲಿ ಕೇವಲ ಎರಡೇ ನಿಮಿಷ ಲೆಕ್ಕಕ್ಕೆ.

೨೩ ಹೋಳಿ ಹುಣ್ಣಿಮೆಯಂದು ಇನ್ನೂ ಒಂದು ಗ್ರಹಣ ಇದೆ. ಇದರ ವೈಶಿಷ್ಟ್ಯವೆಂದರೆ ಚಂದ್ರ ಭೂಮಿಯ ನೆರಳಿನ ಅಂಚನ್ನು ಮಾತ್ರ ಹಾದು ಹೋಗುವುದು. ನೆರಳಿನ ಮಧ್ಯ ಭಾಗವಾದ ಪೂರ್ಣಛಾಯಾ ಪ್ರದೇಶವನ್ನು ಅದು ಹಾದು ಹೋದರೆ ಬೆಳಕು ಕಂದುವುದರಿಂದ ನಮಗೆ ಗ್ರಹಣದ ಅನುಭವವಾಗುವುದು. ಆದರೆ, ಅಂದು ಪಾರ್ಶ್ವಛಾಯಾ ಪ್ರದೇಶವನ್ನು ಮಾತ್ರ ಹಾದು ಹೋಗುವುದರಿಂದ ಇದು ಗಮನಕ್ಕೆ ಬರುವುದಿಲ್ಲ. ಆದರೂ ಹೋಳಿಯಂದು ಎಲ್ಲರೂ ಚಂದ್ರನನ್ನು ನೋಡುವುದರಿಂದ, ಅದರ ಬೆಳಕಿನಲ್ಲಿ ಏನಾದರೂ ಕುಂದು ಇದ್ದಿತ್ತೇ ಎಂದು ಸುಮಾರು ೭:೧೫ರವರೆಗೂ ಸೂಕ್ಷ್ಮವಾಗಿ ಗಮನಿಸಬಹುದು.

ಸೂರ್ಯನಿಲ್ಲದ ಇನ್ನೂ ಒಂದು ಪುಟ್ಟ ಗ್ರಹಣ ೧೪ರಂದು ನಡೆಯಲಿದೆ. ರೋಹಿಣಿಯನ್ನು ಚಂದ್ರ ಮುಚ್ಚುವ ಘಟನೆ. ಆ ಸಂಜೆ ಅರ್ಧಚಂದ್ರನಿಗೆ ಅಂಟಿಕೊಂಡಂತೆ ಕಾಣುವ ನಕ್ಷತ್ರವೇ ರೋಹಿಣಿ. ಸುಮಾರು ೭ ಗಂಟೆಗೆ ನೋಡಿದಿರಾದರೆ ಚಂದ್ರ ಆ ಚುಕ್ಕೆಗೆ ಇನ್ನೂ ಸಮೀಪವಾಗಿರುವುದು ಕಂಡುಬರುತ್ತದೆ. ೯ ಗಂಟೆಗೆ ಚಂದ್ರ ಅದನ್ನು ಮುಚ್ಚುವ ಪ್ರಯತ್ನ ನಡೆಸಿರುವುದು ಕಾಣುತ್ತದೆ. ಆದರೆ, ಮುಚ್ಚದೆಯೇ ಹಾಗೇ ಮುಂದುವರೆಯುವುದನ್ನೂ ಕಾಣಬಹುದು. ೧೦ ಗಂಟೆಗೆ ಪುನಃ ಅವೆರಡೂ ದೂರದೂರವಾಗುತ್ತವೆ. ಈ ಗ್ರಹಣಕ್ಕೆ ಆಚ್ಛಾದನೆ ಎಂದು ಹೆಸರಿದೆ. ಪೂರ್ತಿಯಾಗಿ ಮುಚ್ಚುವುದನ್ನು ಮಂಗಳೂರು, ಪುಣೆ ಮತ್ತು ಮುಂಬಯಿಗಳ ಭೂಭಾಗಗಳಿಂದ ನೋಡಬಹುದು. ಈ ಕುತೂಹಲಕಾರೀ ಘಟನೆ ಪ್ರತಿ ತಿಂಗಳು (ಈ ವರ್ಷ ಮಾತ್ರ) ನಡೆಯುವುದಾದರೂ ಮಾರ್ಚ್‌ನದು ಮಾತ್ರ ನಮಗೆ ಅನುಕೂಲಕರವಾಗಿದೆ.

ಇನ್ನುಳಿದ ಘಟನೆಗಳನ್ನು ಮಾರ್ಗದರ್ಶಿಯಾದ ಚಂದ್ರನ ನೆರವಿನಿಂದ ವೀಕ್ಷಿಸಬಹುದು. ಶಿವರಾತ್ರಿ ಆಚರಿಸುವವರು ಬೆಳಗಿನ ಜಾವ ಚಂದ್ರನನ್ನು ಹುಡುಕಿ ಪತ್ತೆ ಮಾಡಿದಲ್ಲಿ ಅದರ ಪಕ್ಕದಲ್ಲಿಯೇ ಶುಕ್ರ ಹಾಗೂ ಬುಧ ಗ್ರಹಗಳೆರಡನ್ನೂ ಕಾಣಬಹುದು. ಮಂಗಳ ಮತ್ತು ಶನಿ ಒಟ್ಟಾಗತೊಡಗಿವೆ. ಗುರು ದೂರವಾಗಿದೆ. ಗುರುಗ್ರಹ ತಿಂಗಳ ಆರಂಭದಲ್ಲಿ ಸಂಜೆಯಲ್ಲಿ ಕಾಣತೊಡಗುತ್ತದೆ.

೮ರಂದು ವಿಯುತಿ – ಅಂದರೆ ಸೂರ್ಯಾಸ್ತಕ್ಕೆ ಗುರುವಿನ ಉದಯ.

ಮಾರ್ಚ್ ೨೦ರಂದು ವಸಂತ ವಿಷುವ; ಹಗಲು ರಾತ್ರಿಗಳ ಅವಧಿ ಸಮ.

ಸಂಜೆಯ ಆಕಾಶದಲ್ಲಿ ಮಹಾವ್ಯಾಧ, ಲುಬ್ಧಕ, ಅಗಸ್ತ್ಯ, ಬ್ರಹ್ಮ ಹೃದಯ. – ಈ ಎಲ್ಲ ನಕ್ಷತ್ರಗಳ ವೈಭವ – ತಿಂಗಳುದ್ದಕ್ಕೂ ದೊರೆಯುವ ಅದ್ಭುತ ನೋಟ.

**ಖಗೋಳ ದಿನಚರಿ**

೧ ಚಾಂದ್ರಮಾಸದ ಕೊನೆಯ ಪಾದ
೨ ಮುಂಜಾವು ಶನಿ ಮತ್ತು ಚಂದ್ರ ನಡುವೆ ೪೦*
೭ ಮುಂಜಾವು ಶುಕ್ರ ಮತ್ತು ಚಂದ್ರ ನಡುವೆ ೨೦*
೮ ಮುಂಜಾವು ಶುಕ್ರ, ಶನಿ ಮತ್ತು ಚಂದ್ರ – ಪುಟ್ಟ ಗುಂಪು*
ಗುರುಗ್ರಹದ ವಿಯುತಿ
೯ ಅಮಾವಾಸ್ಯೆ ೦೭:೨೪ಕ್ಕೆ ಸೂರ್ಯಗ್ರಹಣ ಕೇವಲ ೧೨ ನಿಮಿಷಗಳು*
೧೦ ಚಂದ್ರ–ಭೂಮಿ ನಡುವೆ ಕನಿಷ್ಠ ಅಂತರ
೧೪ ಸಂಜೆ ರೋಹಿಣಿ ಆಚ್ಛಾದನೆ
೧೫ ಚಾಂದ್ರಮಾಸದ ಮೊದಲ ಪಾದ
೨೦ ವಸಂತ ವಿಷುವ
೨೨ ಸಂಜೆ ಗುರು–ಚಂದ್ರ ನಡುವೆ ೬೦*
೨೩ ಸಂಜೆ ೧೭:೩೭ಕ್ಕೆ ಹುಣ್ಣಿಮೆ – ಪಾರ್ಶ್ವ ಛಾಯಾಗ್ರಹಣ*.
ಬುಧ ಗ್ರಹದ ಯುತಿ.
೨೫ ಶನಿಗ್ರಹದ ಹಿನ್ನಡೆ ಆರಂಭ. ಚಂದ್ರ–ಭೂಮಿ ನಡುವೆ ಗರಿಷ್ಠ ಅಂತರ
೨೯ ಮುಂಜಾವು ಮಂಗಳ – ಚಂದ್ರ ನಡುವೆ ೪೦ ಅಂತರ*
೩೦ ಮುಂಜಾವು ಶನಿ – ಚಂದ್ರ ೫೦ ಅಂತರದಲ್ಲಿ*
೩೧ ಚಾಂದ್ರಮಾಸದ ಕೊನೆಯ ಪಾದ

*(* ಛಾಯಾಗ್ರಹಣಕ್ಕೆ ಸದವಕಾಶ)*

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು

# ನಾಭೀ ಮೂಲದ ದನಿ






ನಾಯಿಗಳಿಗೆ ಅಂಜುತ್ತಲೆ ಮನೆಯಂಗಳದಲ್ಲಿ
ಬರ್ಲ್ಲು ಬರ್ಲ್ಲಾದ ಬೆರಳುಗಳಂದಲೇ
ಮೊಳೆತಂತಿರುವ ದೇಹದ
ಕಂಗಳ ಮೊನೆಯಲ್ಲಿ ಕೈಗಳು
ನೆರೆಗೂದಲು ಕರೇಗೂದಲ ಭೇದವರಿಯದೆ
ನೆರಿಕೆಯಲ್ಲಿ ಹರಿದಾಡುತ್ತಿವೆ

ತಲೆ ಕೂರ್ಲಿಗೆ ಸೂಜಿ ದಾರ ಏರ್ಪಿನ್ನಾ
ನಾಭೀ ಮೂಲದ ದನಿಗೆ
ವಾಲ್‌ಮಾರ್ಟ ಅಮೇಜಾನ್ ಫ್ಲಿಫ್‌ಕಾರ್ಟರ ಜೀವಕೋಶ
ಬಿಗ್‌ಬಜಾರ್ ಮಹಲುಗಳಲ್ಲಿ ಕೂದಲುಗಳ ಬಿಗಿದೆಣೆದು
ಸಾಲು ಸಾಲು ಸಮವಸ್ತ್ರ ಅಣಿದವರ ಮುಖದ
ನೆರಿಗೆ ನೀಳುತ್ತಲೇ ಇವೆ ಅಂತರ್ಜಾಲದಲ್ಲಿ

ಕೀಲಿಮಣೆಗಳು ರೂಪಾಯಿಗಳ ಕೊರಳ ಹಿಂಡಿ
ಮುಕ್ಕುತ್ತಲೇ ಅಂಡಲೆದು
ರಿಯಾಯಿತಿಗಳ ಲೆಕ್ಕದಲ್ಲಿ ಕೂಡಿಟ್ಟು
ನಡುವ ಹಿಗ್ಗಿಸಿಕೊಂಡಿವೆ ದಾಹವಿಂಗದೆ

ಪೀಚಲು ಕೈ ಬೆರಳುಗಳ ಹಾದಿಯಲ್ಲಿ
ಅನೂಹ್ಯದ ಸಕಲವನ್ನೂ ಹೆಕ್ಕಿ ಬಿಕರಿಗಿಟ್ಟು
ಸುಂಕದ ವಸೂಲಿಗೆ ನಿಂತಿರುವ ಯಂತ್ರಗಳ
ಸೋಸುವಿಕೆಯಲ್ಲಿ ನಾಲಿಗೆ ಉಡುಗಿಸಿರುವೆ

ಸೂಜಿ ದಾರ ಏರ್ಪಿನ್ನಾ ಪೀಪಿ ನೂಲಿನುಂಡೆಗಳ
ಬಗಲಲ್ಲಿ ಕಾಣದೆ ಬಂದಹಾದಿಗೇ
ಗಿರವಿಗಿಟ್ಟವರಂತೆ ಕುಕ್ಕರಿಸಲಾಗದೆ ಬೆವರಿ
ನೀರಿರದ ಬಾಟಲಿಗಳೆಡೆ ಕಣ್ಣು ಚೆಲ್ಲಿದ್ದಾರೆ

ಕಂಪನಿ ತುಣುಕುಗಳ ಕಕ್ಕಸದ ನಡುವೆ
ಮನೆ ಮಂದಿಯೂ ಸರಕುಗಳಾಗಿ
ಅಂತರ್ಜಾಲದ ಕೊಂಡಿ ಬೆಸೆದು ದಿಗಿಲಿಟ್ಟು
ಎಲ್ಲೋ ಹೊಯ್ದಾಡುತ್ತಿದೆ ಸುಂಟರಗಾಳಿ

ತರಗುಟ್ಟುತ್ತಲೆ ಬೀದಿಕಸವಾಗಿ
ಮಲಗಿರುವ ತಬ್ಬಲಿಗಳ
ಮೈಸೆರಗೆಳದು ವಿಕ್ರಯಿಸಿ
ಕಪಾಟುಗಳಲಿ ತೊಡರಿಕೊಂಡಿವೆ
ಬಾಕತನದ ಸಂತಾನಗಳು

ಗ್ರಾಹಕ ತಾಣಗಳಲ್ಲಿ ನೇತಾಡುವ
ಪೀಪಿ ಬಲೂನಿಗಾಗಿ
ಅವ್ವದಿರ ಸೆರಗಿನಲ್ಲಿ ಅವಿತು
ಪಿಳಿಪಿಳಿ ಕಣ್ಣುಬಿಡುವ ಅರಳುಕಂಗಳಿಗೆ
ಸವ್ವಾಸೇರು ಟನ್ನುಗಟ್ಟಲೆ ಕೊಳ್ಳುವ ತರಬೇತಿ ಉಚಿತ

ಗೋಣು ಮುರಿದ ಹಕ್ಕಿಯಾಗಿ
ಬಗ್ಗು ಬಡಿದಿರುವ ಜೀವ ಸಂತಾನ
ಹುಯ್ಯಲಿಟ್ಟು ಮರಿಮಾಡಿರಲು
ಮಹಲು ವಾಣಿಜ್ಯತಾಣಗಳು ಘೋಷಿಸಿವೆ
ವಿನಾಯಿತಿ ದರಗಳಲ್ಲಿ
ತಲೆಕೂರ್ಲಿಗೆ ಸೂಜಿ ದಾರ ಏರ್ಪಿನ್ನಾದ
ಧ್ವನಿ ಸುರುಳಿ ಆವೃತ್ತಿಗಳ

**ಆರನಕಟ್ಟೆ ರಂಗನಾಥ ಎನ್.**
ಸಂಶೋಧನಾರ್ಥಿ, ಕನ್ನಡ ವಿಭಾಗ
ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ
ಕಲಬುರಗಿ – ೫೮೫ ೩೧೧

# ತೈಲ ಬೆಲೆಯ ಏರುಪೇರು ಸುತ್ತಮುತ್ತ

**ಕೆ. ಎಸ್. ಪಾರ್ಥಸಾರಥಿ**

ಪೆಟ್ರೋಲ್ ಮತ್ತು ಅದರೊಂದಿಗಿನ ಸರಕುಗಳ ಬೆಲೆ ಜನಸಾಮಾನ್ಯರನ್ನು ತಟ್ಟುವಂತೆ, ಚಿನ್ನ ಬಿಟ್ಟರೆ ಬೇರಾವುದೂ ಇಲ್ಲ. ಅಕ್ಕಿ, ಬೇಳೆ, ಉಪ್ಪು, ಬೆಲೆ ಬಿಡಿ ಎಂದಿಗೂ ಇದ್ದದ್ದೆ ಅನ್ನುವ ಧೋರಣೆ. ಚಿನ್ನ ಬಹುವಾಗಿ ಶ್ರೀಮಂತರದ್ದೇ ಆದರೂ, ಅದಕ್ಕೆ ಸಾಂಪ್ರದಾಯಿಕವಾಗಿ ಅಂಟಿಕೊಂಡಿರುವ ಗೌರವ, ಮೆಚ್ಚುಗೆ, ಸಾಮಾಜಿಕ ಮರ್ಯಾದೆ ಹಾಗೂ ಅದನ್ನು ಒಂದು ಉಳಿತಾಯದ ವಸ್ತುವಾಗಿಯೂ ನಂಬಿಕೊಂಡ ಜನತೆಗೆ ಬಡವ ಬಲ್ಲಿದ ಎನ್ನದೆ ಎಲ್ಲರನ್ನು ಒಂದಿಷ್ಟಾದರೂ ಬಾಧಿಸುವ ವಿಷಯ. ಅದರ ಬೆಲೆಯ ಸ್ಥಿತ್ಯಂತರವೂ ಆರ್ಥಿಕತೆಯ ಪರಿಸ್ಥಿತಿಯನ್ನು ಹೊರಗೆಡಹುತ್ತದೆ. ನಮ್ಮ ಆಮದು ವೆಚ್ಚದಲ್ಲಿ ಅತ್ಯಧಿಕ ಬೆಲೆಯದು ಪೆಟ್ರೋಲ್-ಅನಿಲ-ಇಂಧನ. ಎರಡನೆಯದು ಚಿನ್ನ. ಷೇರುಪೇಟೆಯಲ್ಲಿ ಬೆಲೆ ಕುಸಿದರೆ ಚಿನ್ನ ಇಲ್ಲವೆ ಭೂಮಿಯತ್ತ ಎಲ್ಲ ಉಳಿತಾಯವೂ ಹರಿಯುತ್ತದೆ. ಅದು ಬೇರೆಯೇ ಚರ್ಚೆಯ ವಿಷಯ. ಆದರೆ ಪೆಟ್ರೋಲ್ ದರ ನಿತ್ಯಜೀವನದ ಉದ್ದಗಲಕ್ಕೂ ಸುದ್ದಿ ಮಾಡುತ್ತಿರುವ ಸರಕು. ಏನೇ ಬೆಲೆಯಾದರೂ ಚಿನ್ನ ಇಲ್ಲದೆ ಬದುಕಬಹುದು; ಪೆಟ್ರೋಲ್ ಬೇಕೇಬೇಕು. ಹೀಗಾಗಿ ವಿಪರೀತ ಬೆಲೆ ಏರಿಕೆ ಅಥವಾ ಇಳಿಕೆ ಎರಡೂ ವಿಚಿತ್ರವಾಗಿ, ಆತಂಕವಾಗಿ ಕಂಡುಬರುತ್ತಿವೆ. ಜನಸಾಮಾನ್ಯರ ತಿಳಿವಳಿಕೆಯಲ್ಲಿ, ಅಬ್ಬ, ಸದ್ಯ ೧೧೦ ಡಾಲರ್‌ನಿಂದ ೩೦ ಡಾಲರ್‌ಗೂ ಕೆಳಗೆ ಇಳಿಯಿತು ಅಂತ ಸಮಾಧಾನವಾದರೂ, ಇದೇಕೆ ಈ ಸರ್ಕಾರ ೩೦ ರೂ.ಗೆ ಒಂದು ಲೀಟರ್ ಕೊಡಲು ಹಿಂದೇಟು ಹಾಕುತ್ತದೆ ಎನ್ನುವ ಅರ್ಥವಾಗದ ಗೊಂದಲ. ವಾಸ್ತವವೆಂದರೆ ಬೇರೆ ದೇಶಗಳಲ್ಲೂ ಅಷ್ಟೇನೂ ಕಡಿಮೆ ದರವಿಲ್ಲ. ಕಡಿಮೆ ದರದ ಎಲ್ಲ ಲಾಭವನ್ನು ಯಾವ ಸರ್ಕಾರವೂ ಜನರೊಡನೆ ಹಂಚಿಕೊಳ್ಳುವುದಿಲ್ಲ. ಮೊದಲಿಗೆ ಅದು ದುಂದುವೆಚ್ಚ ಮಾಡಬಾರದ ಸರಕು. ಜನಸಾಮಾನ್ಯರೆಲ್ಲರೂ ಪರೋಕ್ಷವಾಗಿಯೇ ಆದರೂ ಪೆಟ್ರೋಲ್ ಬಳಸುವವರಾಗಿದ್ದು, ಅದರ ಮೇಲಿನ ತೆರಿಗೆ ಎಂದರೆ ಎಲ್ಲರ ಮೇಲಿನ ತೆರಿಗೆ, ಸರ್ಕಾರಕ್ಕೆ ಸುಲಭವಾಗಿ ವಸೂಲಾಗುವ ಹೆಚ್ಚು ಮೊತ್ತದ ಆದಾಯ ಸಂಗ್ರಹವಾಗುತ್ತದೆ. ಪ್ರಾಸಂಗಿಕವಾಗಿ ಒಂದು ವಿಷಯ ತಿಳಿದಿರಬೇಕು. ಪೆಟ್ರೋಲ್ ಒಂದು ಖನಿಜ. ಇದರ ಉತ್ಪನ್ನಗಳಲ್ಲಿ ೧೪೪ ಪದಾರ್ಥಗಳಿವೆ. ಔಷಧಿ, ವಿಟಮಿನ್‌ಗಳು, ಸುಗಂಧ ದ್ರವ್ಯಗಳೂ ಸೇರಿವೆ. ಈ ಉದ್ಯಮದಲ್ಲಿ ಇರುವವರು, ಒಂದಲ್ಲ ಒಂದು ಉತ್ಪನ್ನದ ಮೂಲಕ ಲಾಭ ಮಾಡಿಕೊಳ್ಳುತ್ತಾರೆಯೇ ವಿನಾ ನಷ್ಟವನ್ನಲ್ಲ.

ಒಂದು ಬ್ಯಾರಲ್ ಮೂಲ ಪೆಟ್ರೋಲ್ – ಪರಿಷ್ಕರಿಸುವುದಕ್ಕೆ ರಿಫೈನ್ಡ್ ಮಾಡುವುದಕ್ಕೆ ಮುಂಚೆ ತೆಗೆಯಲು ಬಾವಿಯ ಆಳ ಮತ್ತು ಇನ್ನಿತರ ಗುಣಲಕ್ಷಣಗಳನ್ನು ಆಧರಿಸಿ, ೨೦ ಡಾಲರ್‌ನಿಂದ ೪೫ ಡಾಲರ್‌ಗಳವರೆಗೂ ವೆಚ್ಚವಾಗಬಹುದು. ರಷ್ಯ, ವೆನಿಜೂಲ, ಇರಾನ್, ಸೌದಿ ಅರೇಬಿಯಾ, ಅಮೆರಿಕ, ನೈಜೀರಿಯಾ ಮುಂತಾದುವು ಈ ಉದ್ಯಮದಲ್ಲಿ ಮುಂಚೂಣಿಯಲ್ಲಿವೆ. ಇನ್ನೂ ಉತ್ಖನನವಾಗದ ನಿಕ್ಷೇಪಗಳು ಸಾಕಷ್ಟು ಇವೆ. ಆದರೆ ಅಲ್ಲಿ ಭೂಮಿ ಬಗೆದು ತೆಗೆಯಲು ವೆಚ್ಚ ಹೆಚ್ಚು. ಮುಂದೊಮ್ಮೆ ಅವು ಬಳಕೆಗೆ ಬರುತ್ತವೆ. ಅತ್ಯಂತ ಕಡಿಮೆ ವೆಚ್ಚದಲ್ಲಿ ಅತಿ ಹೆಚ್ಚು ಉತ್ಪಾದನೆ ಸೌದಿ ಅರೇಬಿಯಾದ್ದು. ತೈಲ ತೆಗೆಯಲು ತಗಲುವ ವೆಚ್ಚ ಮಾರುವ ದರಕ್ಕಿಂತ ಕಡಿಮೆಯಾದರೂ ಏಕೆ ತೆಗೆಯುವುದನ್ನು ನಿಲ್ಲಿಸು ವುದಿಲ್ಲ ? ಮುಖ್ಯವಾಗಿ, ಈ ರಾಷ್ಟ್ರಗಳಿಗೆ ಈ ಒಂದು ಸರಕಿನಿಂದಲೇ ಆದಾಯ ದೊರೆಯುವುದು. ರೈತ ಬೆಲೆ ಬರದಿದ್ದರೂ ಬೆಳೆಯುವುದು ಅನಿವಾರ್ಯವಾದಂತೆ; ಹಾಗೂ ತೆಗೆಯುವುದು ನಿಲ್ಲಿಸಿ, ಮಾರುಕಟ್ಟೆಯಿಂದ ಹೊರಬಿದ್ದು, ಒಳ್ಳೆಯ ಬೆಲೆ ಬರಲಿ ಎಂದು ಕಾಯುತ್ತಿದ್ದರೆ, ಪೈಪೋಟಿ ರಾಷ್ಟ್ರಗಳು ಇರುವ ಮಾರುಕಟ್ಟೆಯನ್ನು ತಮ್ಮ ಸಂಪೂರ್ಣ ಹತೋಟಿಗೆ

> ತೈಲ ಬೆಲೆ ಕೇವಲ ಒಂದು ಸರಕಿನ ವಿಷಯವಲ್ಲ ಅದು ವ್ಯಾಪಕ ಪರಿಣಾಮದ್ದು. ಹಲವು ಪದರಗಳಲ್ಲಿ ಹಲವು ಪರಿಣಾಮ ಉಂಟುಮಾಡುವಂಥದು. ದೇಶದಲ್ಲಿ ಸಾಮಾಜಿಕವಾಗಿ ಹಲವಾರು ಪ್ರಕ್ಷೋಭೆಗಳನ್ನು ಸೃಷ್ಟಿಸುತ್ತ, ಚಿಕ್ಕಟ್ಟು ಉಂಟುಮಾಡುತ್ತಿರುವ ಇಂದಿನ ಪ್ರತಿಗಾಮಿ ಸರ್ಕಾರ ಈ ಅವಕಾಶವನ್ನು ಧನಾತ್ಮಕವಾಗಿ ಬಳಸಿಕೊಳ್ಳ ಬಲ್ಲದೇ ? ಈ ಸಂದೇಹ ನಮ್ಮ ಬಂಡವಳಿಗ ಉದ್ಯಮಿಗಳನ್ನೇ ಕಾಡಿಸುತ್ತಿರುವುದು ವಾಸ್ತವ. ಚೀನದಲ್ಲಿ ಈ ಸ್ಥಿತಿ ಲಾಭದಾಯಕವೇ ಆಗುತ್ತದೆ. ನಮ್ಮಲ್ಲಿ ಅದೇನೂ ಖಾತರಿಯಿಲ್ಲ. ಇದಕ್ಕೆ ವ್ಯವಸ್ಥೆಯ ಸ್ವರೂಪ ಬಹಳ ಮುಖ್ಯ.

ತೆಗೆದುಕೊಂಡು, ನಾಳೆ ಪುನಃ ಮಾರುಕಟ್ಟೆಗೆ ಹಿಂದಿರುಗಲು ಆಗದೆಯೇ ಹೋದರೆ ಎನ್ನುವ ಭಯ ವಾಸ್ತವವಾದುದು. ಹಾಗೂ ಬೆಲೆ ವಿಪರೀತ ಹೆಚ್ಚಿದ್ದಾಗ, ಅಪಾರ ಹಣ ಗಳಿಸಿದ್ದೂ, ಅದನ್ನು ಆಪತ್ಕಾಲ ನಿಧಿಯಾಗಿ ಸಂಗ್ರಹಿಸಿದ್ದಾಗ, ನಷ್ಟವಾಗುವ ಕಾಲವನ್ನು ಸರಿದೂಗಿಸಿಕೊಳ್ಳಬಹುದು. ಈ ಕಾರಣ ಈ ರಾಷ್ಟ್ರಗಳು ಉತ್ಪನನವನ್ನು ನಿಲ್ಲಿಸುವುದಿಲ್ಲ. ಪೆಟ್ರೋಲ್ ಆದಾಯದ ಮೇಲೆ ಅಮೆರಿಕದ ಆರ್ಥಿಕತೆ ನಿಂತಿಲ್ಲ. ಅವರಿಗೆ ಈ ಕುರಿತು ವಿಪರೀತ ಆತ್ಮವಿಶ್ವಾಸವಿರುವುದರಿಂದ, ಅವರು ಸ್ಥಳೀಯವಾಗಿ ಉತ್ಪನನವನ್ನು ಈಗ ಕಡಿಮೆ ಮಾಡಿ, ಸುಲಭ ದರದಲ್ಲಿ ಹೊರಗಿಂದ ಆಮದು ಮಾಡಿಕೊಳ್ಳುತ್ತಾರೆ. ಈ ರೀತಿ ಮಾಡಲು ಸಾಕಾಗುವಷ್ಟು ತೈಲ ನಿಕ್ಷೇಪ ಅವರ ಬಳಿ ಇದೆ. ಭಾರತದಲ್ಲಿ ನಮ್ಮ ಅಗತ್ಯದ ಶೇ. ೨೫ರಷ್ಟು ಸುಮಾರು ಆಂತರಿಕ ಲಭ್ಯತೆ ಇದೆ.

ಪಶ್ಚಿಮ ಏಷ್ಯದ ಯುದ್ಧ ಪರಿಸ್ಥಿತಿ, ಅದಕ್ಕೂ ಮುಂಚೆ ಉಕ್ರೇನ್ ಮತ್ತು ರಷ್ಯ ನಡುವಿನ ಸಮಸ್ಯೆ ಇವುಗಳೆರಡೂ ಇಂದಿನ ಪೆಟ್ರೋಲ್ ದರದ ಮೇಲೆ ಪ್ರತಿಕೂಲ ಪರಿಣಾಮ ಬೀರಿವೆ. ಅದಕ್ಕೆ ಕೇವಲ ಉತ್ಪಾದನಾ ವೆಚ್ಚ, ಲಾಭ ಮುಂತಾದ ವಾಣಿಜ್ಯ ಕಾರಣಗಳಲ್ಲ. ಎಣ್ಣೆಯನ್ನು ವಿದೇಶಾಂಗ ನೀತಿಯ ಸರಕಾಗಿ ಬಳಸುತ್ತಿರುವುದು ಸ್ಪಷ್ಟ. ಈ ಪ್ರದೇಶಗಳಲ್ಲಿ ಯುದ್ಧ ಆದರೆ, ಸರಬರಾಜು ಕಡಿತ, ಬೆಲೆ ಏರಿಕೆ; ಸಮಾಧಾನ ಪರಿಸ್ಥಿತಿ ಬರುತ್ತಿದ್ದಂತೆ, ಸರಬರಾಜು ಯಥಾಸ್ಥಿತಿ, ಬೆಲೆಯಲ್ಲಿ ಕಡಿತ ಇವು ನಡೆಯುತ್ತಲೇ ಇವೆ. ಅಂಥ ಪರಿಸ್ಥಿತಿ ಬಹಳ ದಿನಗಳು ಮುಂದುವರಿಯುವುದಿಲ್ಲ. ಆಗ ಬಳಕೆದಾರ ದೇಶಗಳಲ್ಲಿ ತಕ್ಷಣಕ್ಕೆ ಏರುಪೇರು ಆಗದೆ ಸಂಭಾಳಿಸಲು ಸಾಧ್ಯವಾಗುವಂತೆ ಒಂದಿಷ್ಟು ಗೋದಾಮುಗಳಲ್ಲಿ ರಿಸರ್ವ್ ಸಂಗ್ರಹವಿರುತ್ತದೆ. ಈ ಅಗ್ಗದ ದರದ ಕಾಲದಲ್ಲಿ ನಮ್ಮ ಕಂಪನಿಗಳು ಭಾರತದಲ್ಲಿ ಹೆಚ್ಚು ಸಂಗ್ರಹ ಮಾಡಿಕೊಳ್ಳುತ್ತಿವೆ. ದೇಶ ವಿದೇಶಗಳಲ್ಲಿ ದೀರ್ಘಕಾಲೀನ ಒಪ್ಪಂದಗಳನ್ನು ಮಾಡಿಕೊಳ್ಳುತ್ತಿವೆ ಇವೆಲ್ಲ ನಮಗೆ ಲಾಭದಾಯಕ ವಿಷಯ.

ಪೆಟ್ರೋಲ್ ಉತ್ಪಾದನೆಯನ್ನು ಓಪೆಕ್ ಅನ್ನುವ ಪೆಟ್ರೋಲಿಯಂ ಉತ್ಪಾದಕರ ಒಕ್ಕೂಟ ಕಾಲಕಾಲಕ್ಕೆ ನಿರ್ಧರಿಸಿ, ಬೆಲೆ ನಿಗದಿ ಮಾಡುತ್ತಿದೆ. ಅದು ಸುಮಾರು ೪೭% ಉತ್ಪಾದನೆ ಮಾಡುತ್ತದೆ. ಕಳೆದ ಮೂರು ವರ್ಷಗಳಲ್ಲಿ ಜಾಗತಿಕವಾಗಿ ಉತ್ಪಾದನೆ ಅಗತ್ಯಕ್ಕಿಂತ ಹೆಚ್ಚಿದೆ. ಕೆಲವು ಉತ್ಪಾದಕ ದೇಶಗಳಿಗೆ ಅವು ಯುದ್ಧದಲ್ಲಿ ತೊಡಗಿದ್ದು, ಹೆಚ್ಚು ಸಂಪಾದನೆ ಬೇಕಿದೆ. ಬೆಲೆ ಏರಿಕೆಯನ್ನು ಯುದ್ಧ ತಂತ್ರವಾಗಿ ಅಮೆರಿಕದ ಸಹಕಾರದೊಡನೆ ಓಪೆಕ್ ಎರಡು ವರ್ಷಗಳ ಹಿಂದೆ ಉಕ್ರೇನ್ ಯುದ್ಧ ಪರಿಸ್ಥಿತಿಯಲ್ಲಿ ಕೈಗೊಂಡಿತು. ಪೆಟ್ರೋಲ್ ಒಂದೇ ಸರಕಿನ ರಫ್ತಿನ ಮೇಲೆ ಅವಲಂಬಿತವಾದ ಅರ್ಥವ್ಯವಸ್ಥೆ ರಷ್ಯ, ಇರಾನ್ ಮತ್ತು ವೆನಿಜೂಲ ದೇಶಗಳದ್ದು. ಬೆಲೆ ಕುಸಿತ ಆ ದೇಶಗಳ ಅರ್ಥವ್ಯವಸ್ಥೆಯನ್ನು ಸಂತ್ರಸ್ತಗೊಳಿಸಿದೆ. ಅದು ಈಗ ಮುಂದುವರಿದಂತೆ ಉತ್ಪಾದಕ ದೇಶಗಳಿಗೂ ಆಘಾತವಾಗಲು ಪ್ರಾರಂಭಿಸಿದೆ. ಪಶ್ಚಿಮ ಏಷ್ಯಾದ ಮೇಲಿನ ಪೆಟ್ರೋಲ್ ಕುರಿತ ಅವಲಂಬನೆಯನ್ನು ತಪ್ಪಿಸಿಕೊಳ್ಳಲು, ಅಮೆರಿಕ ಆಂತರಿಕವಾಗಿಯೇ ಪೆಟ್ರೋಲ್ ಉತ್ಪನ್ನವನ್ನು ಹೆಚ್ಚಿಸಿ, ಅದರಿಂದಲೂ ಪೆಟ್ರೋಲ್ ಪೂರೈಕೆ ಬೇಡಿಕೆಗಿಂತ ತೀರ ಹೆಚ್ಚಿ, ಬೆಲೆ ಕುಸಿದಿದೆ. (ಈಗಷ್ಟೆ ಅಮೆರಿಕ ಆಂತರಿಕ ಉತ್ಪಾದನೆಯನ್ನು ಕಡಿತಗೊಳಿಸಿದೆ. ಸೌದಿ ಅರೇಬಿಯಾ ತಾನೂ ಹಾಗೆ ಮಾಡಲು ಒಪ್ಪಿದೆ.) ಬೆಲೆ ಕುಸಿತದ ಪರಿಣಾಮ ಪರಿಪರಿಯಾದುದು. ಎಲ್ಲವೂ ಸಹ್ಯವಲ್ಲ. ಗುರಿ ಎತ್ತಲೋ, ಆಘಾತ ಯಾರಿಗೋ.

ಸೌದಿ ಅರೇಬಿಯಾದಲ್ಲಿ ಪೆಟ್ರೋಲ್ ಇರುವ ಪ್ರದೇಶದಲ್ಲಿ ಷಿಯಾ ಮುಸ್ಲಿಮರು ಇದ್ದಾರೆ. ಬಹುಪಾಲು ಸುನ್ನಿ ಜನರಿರುವ ಸೌದೀ ಅರಸರಿಗೆ ಷಿಯಾ ಜನರನ್ನು ಸದೆಬಡಿಯುವುದರಲ್ಲಿ ತೃಪ್ತಿ. ಪೆಟ್ರೋಲ್ ಮಾರಿ ಬರುವ ಆದಾಯ ಕಡಿಮೆಯಾಗುತ್ತಿದ್ದು, ಅದೇ ಸಮಯ, ಅದು ತನ್ನದೇ ಮತಾಂಧತೆಯ ಉದ್ಯೋಗವಾದ ಷಿಯಾ ವಿರುದ್ಧದ ಕಾರ್ಯಕ್ರಮವಾಗಿ ಹಲವೆಡೆ ನೇರ ಯುದ್ಧಕ್ಕೆ ಇಳಿದಿದೆ. ಈ ವೆಚ್ಚವನ್ನೂ ತೂಗಿಸಿಕೊಳ್ಳಲು ದೇಶದ ತೈಲ ಕಾರ್ಮಿಕ ವರ್ಗವಾದ ಷಿಯಾ ಜನರ ಮೇಲೆ ಹೊರೆಯಾಗುವ ತೆರಿಗೆ ಹೆಚ್ಚಳ, ವೇತನದಲ್ಲಿ ಕಡಿತ, ದಬ್ಬಾಳಿಕೆ ಹೆಚ್ಚಿಸಿದೆ. ಏತನ್ಮಧ್ಯೆ, ಇರಾನಿನ ವಿರುದ್ಧದ ವೈಷಮ್ಯಕ್ಕೆ ವಿರಾಮ ದೊರೆತಿದ್ದು, ಈಗ ಇರಾನ್ ದೇಶವೂ ಅಂತರರಾಷ್ಟ್ರೀಯ ತೈಲ ಸರಬರಾಜು ಮಾರುಕಟ್ಟೆಗೆ ಹೆಚ್ಚು ಪ್ರಮಾಣದಲ್ಲಿ ಪೂರೈಕೆ ಮಾಡಲು ಆರಂಭಿಸಿದ್ದು, ಒಟ್ಟಾರೆ ಜಾಗತಿಕ ಪೂರೈಕೆ ಇನ್ನೂ ಹೆಚ್ಚಿದೆ. ವೆನಿಜೂಲ ಈ ಎಲ್ಲ ತೈಲ ಉತ್ಪಾದಕರನ್ನು ಸಂಧಿಸಿ, ಉತ್ಪಾದನೆ ಕಡಿತ ಮಾಡಿ, ತನ್ಮೂಲಕ ಬೆಲೆ ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿ, ಈಗಷ್ಟೆ ಈ ಕುರಿತು ಒಂದು ಸಾಧಾರಣ ಒಪ್ಪಿಗೆ ಹೊರಬಂದಿದೆ. ಬರುವ ದಿನಗಳಲ್ಲಿ ಪೂರೈಕೆಯನ್ನು ನಿಯಂತ್ರಿಸಿ, ತೈಲ ಬೆಲೆ ಹೆಚ್ಚುವ ಸಂಭವ ಹೆಚ್ಚು. ತಿಳಿದವರು, ಪರಿಣತರು ಹೇಳುವಂತೆ ಈ ವರ್ಷಾಂತ್ಯದ ವೇಳೆಗೆ ಪೆಟ್ರೋಲ್ ಬೆಲೆ ಬ್ಯಾರಲ್‌ಗೆ ೪೫ ಡಾಲರಿಗೆ ಏರಿಕೆ ಆಗಬಹುದಂತೆ. ಅಂತರರಾಷ್ಟ್ರೀಯ ಅರ್ಥವ್ಯವಸ್ಥೆಯ ಚೇತರಿಕೆಗೆ ತೀರ ಕಡಿಮೆ ಬೆಲೆ ಅಥವಾ ತೀರ ಹೆಚ್ಚು ಬೆಲೆ ಎರಡೂ ಸಹಾಯಕವಲ್ಲ. ಬ್ಯಾರಲ್‌ಗೆ ೫೦ ಡಾಲರ್ ಬೆಲೆ ನಿಭಾಯಿಸಬಲ್ಲ ಸಮಾಧಾನಕರ ಅಂತ ಹೇಳುತ್ತಿದ್ದಾರೆ.

ಬೆಲೆಯ ಏರಿಕೆಯ ಅನುದ್ದೇಶಿತ ಪರಿಣಾಮಗಳೂ ಗಮನಾರ್ಹ. ಪೆಟ್ರೋಲ್

**ಇನ್ನು ಕೆಲವು ಅಂಕಿ ಅಂಶಗಳು**

| ಪದಾರ್ಥಗಳು | ಯೂನಿಟ್ | ೨೦೦೮–೦೯ | ೨೦೦೯–೧೦ | ೨೦೧೦–೧೧ | ೨೦೧೧–೧೨ | ೨೦೧೨–೧೩ | ೨೦೧೩–೧೪ | ೨೦೧೪–೧೫ |
|---|---|---|---|---|---|---|---|---|
| **ರಫ್ತು** | | | | | | | | |
| ಪೆಟ್ರೋಲಿಯಂ ಉತ್ಪನ್ನಗಳು ಪ್ರಮಾಣ | ಎಂಎಂಟಿ | ೩೮.೯೪ | ೫೧.೧೫ | ೫೯.೦೮ | ೬೦.೮೪ | ೬೩.೪೧ | ೬೭.೮೬ | ೬೩.೯೩ |
| ಪೆಟ್ರೋಲಿಯಂ ಉತ್ಪನ್ನಗಳು ಮೌಲ್ಯ | ಬಿಲಿಯನ್ | ೧೨೨೪.೭೫ | ೧೪೪೬.೮೭ | ೧೯೬೮.೬೧ | ೨೮೪೬.೪೩ | ೩೨೦೦.೯೦ | ೩೬೮೨.೭೯ | ೨೮೮೫.೬೩ |
| **ಆಮದು** | | | | | | | | |
| ಕಚ್ಚಾ ತೈಲ | ಎಂಎಂಟಿ | ೧೩೨.೭೮ | ೧೫೯.೨೬ | ೧೬೩.೬೦ | ೧೭೧.೭೩ | ೧೮೪.೮೦ | ೧೮೯.೨೪ | ೧೮೯.೪೩ |
| ಪೆಟ್ರೋಲಿಯಂ ಉತ್ಪಾದನೆ | ಎಂಎಂಟಿ | –೨೦.೩೬ | –೩೬.೪೯ | –೪೧.೭೦ | –೪೪.೯೯ | –೪೭.೬೩ | –೫೧.೧೫ | –೪೩.೫೧ |
| **ಒಟ್ಟು** | ಎಂಎಂಟಿ | ೧೨೦.೪೮ | ೧೩೧.೯೨ | ೧೩೧.೮೩ | ೧೫೯.೯೬ | ೧೫೦.೩೦ | ೧೫೧.೧೨ | ೧೬೧.೪೦ |
| ಕಚ್ಚಾ ಒಟ್ಟು ಬೆಲೆ | ಬಿಲಿಯನ್ | ೩೪೮೩.೦೪ | ೩೭೫೨.೭೭ | ೪೫೫೨.೭೬ | ೬೭೨೨.೨೦ | ೭೮೪೬.೫೨ | ೮೬೪೮.೭೫ | ೬೮೭೩.೫೦ |
| ಉತ್ಪನ್ನಗಳು | ಬಿಲಿಯನ್ | –೬೧೩.೧೯ | –೧೧೧೦.೦೦ | –೧೪೦೮.೬೨ | –೨೧೬೫.೫೨ | –೨೫೧೭.೨೭ | –೨೯೩೬.೭೪ | –೨೧೫೭.೮೫ |
| **ಒಟ್ಟು** | **ಬಿಲಿಯನ್** | **೨೮೬೯.೮೫** | **೨೬೪೨.೭೭** | **೩೧೪೪.೧೪** | **೪೫೫೬.೬೮** | **೫೩೨೯.೨೬** | **೫೭೧೨.೦೧** | **೪೭೧೫.೬೫** |

**ಕಚ್ಚಾ ತೈಲದ ಆಮದು ಮತ್ತು ಅದರ ಸರಾಸರಿ ಬೆಲೆ**

| ವರ್ಷ | ಆಮದು | ಶೇ.ವಾರು ಬೆಳವಣಿಗೆ | ಸರಾಸರಿ ಬೆಲೆ | ಬೆಲೆಯಲ್ಲಿ ಸರಾಸರಿ ಬೆಳವಣಿಗೆ |
|---|---|---|---|---|
| ೨೦೦೯-೧೦ | ೧೫೯.೨೫೯ | ೧೯.೯೫ | ೬೯.೭೬೦ | -೧೬.೫೩ |
| ೨೦೧೦-೧೧ | ೧೬೩.೫೯೫ | ೨.೭೨ | ೮೫.೦೯೦ | ೨೧.೯೮ |
| ೨೦೧೧-೧೨ | ೧೭೧.೭೨೯ | ೪.೯೭ | ೧೧೧.೮೯೦ | ೩೧.೫೦ |
| ೨೦೧೨-೧೩ | ೧೮೪.೭೯೫ | ೭.೬೧ | ೧೦೭.೯೭೦ | -೩.೫೦ |
| ೨೦೧೩-೧೪ | ೧೮೯.೨೩೮ | ೨.೪೦ | ೧೦೫.೫೨೦ | -೨.೨೭ |
| ೨೦೧೪-೧೫ | ೧೮೯.೪೩೨ | ೦.೧೦ | ೮೪.೨೦೦ | -೨೦.೨೦ |

ಉತ್ಪಾದಕ ದೇಶಗಳು ಗಳಿಸಿದ ಅಪಾರ ಹಣವನ್ನು, ಅದರಲ್ಲೂ ಪಶ್ಚಿಮ ಏಷ್ಯಾದವರು ವಿಶ್ವದ ಷೇರುಪೇಟೆಯಲ್ಲಿ ಹೂಡಿದ್ದಾರೆ. ಅವರ ಹೂಡಿಕೆಯಲ್ಲಿ ವಿಪರೀತ ಏರುಪೇರು ವಿಶ್ವದ ಷೇರುಪೇಟೆಯ ಬಿಕ್ಕಟ್ಟಾಗುತ್ತಿದೆ. ಈಗ ಆಗಿದೆ. ಹಾಗೆಯೇ, ಉದಾಹರಣೆಗೆ, ಅಮೆರಿಕದ ಬಳಕೆದಾರರು, ಭಾರತದ ಸರಕುಗಳನ್ನು ಕೊಳ್ಳುವುದನ್ನು ಕಡಿಮೆ ಮಾಡಿದರೆ ನಮಗೆ ಅದು ಆಘಾತ. ಈಗ ಚೀನಕ್ಕೆ ಆ ಆಘಾತ ಆಗಿದೆ. ಮುಖ್ಯ ಕಾರಣ ಅಮೆರಿಕದಲ್ಲೇ ಆಂತರಿಕ ಹೂಡಿಕೆ ಹೆಚ್ಚು, ಆಂತರಿಕ ಬಳಕೆದಾರರ ವಸ್ತುಗಳ ಲಭ್ಯತೆ, ಅವುಗಳ ಬೆಲೆಯಲ್ಲಿ ಕಡಿತ ಇವೆಲ್ಲ ಸಾಧ್ಯವಾಗಿದೆ. ಅದಕ್ಕೆ ಇರುವ ಹಲವು ಕಾರಣಗಳಲ್ಲಿ, ತೈಲ ಬೆಲೆಯ ಇಳಿಕೆ ಒಂದು ಮಹತ್ತರ ಕಾರಣ. ಚೀನಾ ತನ್ನೆಲ್ಲ ಪೆಟ್ರೋಲನ್ನು ಆಮದು ಮಾಡಿ ಕೊಳ್ಳುತ್ತಿದ್ದು, ಬೆಲೆ ಕಡಿತವೆಂದರೆ ಅದಕ್ಕೆ ಅಪಾರ ಲಾಭವಾಗಬೇಕಾಗಿತ್ತಲ್ಲ? ಅದು ಆದರೂ, ಈಗ ಅದು ಉತ್ಪಾದಿಸುವ ಸರಕುಗಳಿಗೆ ಅಮೆರಿಕ ಮತ್ತಿತರ ಮುಂದುವರಿದ ರಾಷ್ಟ್ರಗಳಿಂದ ಬೇಡಿಕೆ ಕಳೆದುಕೊಂಡು, ಅದರ ವ್ಯವಸ್ಥೆಯಲ್ಲಿ ನಿರುದ್ಯೋಗ ಕುಸಿತ ಉಂಟಾಗಿದೆ. ಅಭಿವೃದ್ಧಿ ಸ್ಥಗಿತವಾಗಿದೆ. ತೈಲದ ಬೆಲೆ ಇಳಿತ ನೇರವಾಗಿ ಲಾಭಕರವಾಗಲಿಲ್ಲ. ಅವರ ಆರ್ಥಿಕ ತಜ್ಞರು ಇದಕ್ಕೆ ಪರಿಹಾರವನ್ನು ಬೇರೆ ರೀತಿ ದೀರ್ಘಕಾಲೀನವಾಗಿ ಯೋಚಿಸುತ್ತಿದ್ದಾರೆ. ಮೊದಲಿಗೆ ಬಳಕೆದಾರರ ಸಾಮಗ್ರಿಗಳಿಗೆ ರಫ್ತಿನ ಅವಕಾಶ ಕಡಿಮೆಯಾಗಿದೆ. ಸ್ಥಳೀಯ ಬೇಡಿಕೆ ಹೆಚ್ಚುವಂತೆ, ಕಾರ್ಮಿಕರ ವೇತನ ಇತ್ಯಾದಿ ಹೆಚ್ಚಿಸುವುದು. ಆ ಕ್ಷೇತ್ರವನ್ನು ಸ್ಥಳೀಯ ಅನುಭೋಗಕ್ಕೆ ಮತ್ತಷ್ಟು ಹಿಗ್ಗಿಸುವುದು ಹಾಗೂ ಅಂತರರಾಷ್ಟ್ರೀಯವಾಗಿ, ಈಗ ಮಾಡುತ್ತಿದ್ದಂತೆ, ಸುಲಭ ಬೆಲೆಯ ಕಳಪೆ ಸಾಮಾನುಗಳನ್ನು ರಫ್ತು ಮಾಡುವುದನ್ನು ಕೈಬಿಟ್ಟು, ಕೈಗಾರಿಕಾ ಕ್ಷೇತ್ರಗಳಿಗೆ ಯಂತ್ರ, ತಂತ್ರಗಳ ಸರಬರಾಜು ಮಾಡುವುದು, ಹಾಗೂ ತಮ್ಮ ಬಳಿ ಸಂಗ್ರಹವಾಗಿರುವ ೪ ಟ್ರಿಲಿಯನ್ ಡಾಲರ್ (ಒಂದು ಟ್ರಿಲಿಯನ್ ಅಂದರೆ ೧೦$^{೯}$)ನ್ನು ಹಿಂದುಳಿದ ಮತ್ತು ಅಭಿವೃದ್ಧಿಶೀಲ ದೇಶಗಳಲ್ಲಿ ಹೂಡಿಕೆ ಮಾಡುವುದು ಹೀಗೆಲ್ಲ. ತೈಲ ಬೆಲೆಯ ಕುಸಿತ ಧನಾತ್ಮಕವಾಗಿ ಪರಿಣಮಿಸುತ್ತದೆ. ಈ ಮಾರ್ಗದಲ್ಲಿ ಅವರು ಇದೇ ಕಾರಣ ನಮ್ಮಿಂದ ಕಬ್ಬಿಣದ ಅದಿರು ತರಿಸಿಕೊಳ್ಳುವುದು ಕಡಿಮೆಯಾಗಿ, ನಮಗೆ ಆಘಾತವಾಗಿದೆ ಹಾಗೂ ಸುಲಭದರಲ್ಲಿ ನಮಗೆ ಉಕ್ಕು ಪೂರೈಕೆ ಮಾಡಿ, ನಮ್ಮದೇ ಉಕ್ಕಿನ ಕೈಗಾರಿಕೆ ಸಂತ್ರಸ್ತವಾಗಿದೆ. ಭಾರತದ ಮಟ್ಟಿಗೆ ನಾವು ಅತಿ ಹೆಚ್ಚು ವಿದೇಶೀ ವಿನಿಮಯ ಖರ್ಚುಮಾಡುವ ತೈಲದ ಬೆಲೆ ಕುಸಿತ ಸ್ವಾಗತಾರ್ಹ. ಅದೇ ಸಮಯ, ತೈಲದ ದುಂದು ಬಳಕೆ ನಿಯಂತ್ರಿಸಲು, ಹಾಗೂ ಹೆಚ್ಚು ಪರೋಕ್ಷ ತೆರಿಗೆ ಸಂಗ್ರಹಿಸಲು ಸರ್ಕಾರ ಪೆಟ್ರೋಲ್ ದರವನ್ನು ತೀರ ಕಡಿಮೆ ಮಾಡುವುದಿಲ್ಲ. ಈ ಮೂಲಕ ಸರ್ಕಾರದ ಆದಾಯ ಬಹಳ ಹೆಚ್ಚುತ್ತಿದೆ. ಬಂಡವಾಳದ ಅರ್ಥನೀತಿಯನ್ನು ಸ್ವೀಕರಿಸಿರುವ ನಮ್ಮ ಸರ್ಕಾರಕ್ಕೆ ಇದು ವರಪ್ರದವಾಗಿದೆ. ಬಂಡವಳಿಗನ ಮೇಲೆ ಹೆಚ್ಚು ತೆರಿಗೆ ಹಾಕುವ ಒತ್ತಾಯ ಕಡಿಮೆಯಾಗಿ, ಬಜೆಟ್ ಕೊರತೆ ನೀಗುತ್ತದೆ. ಈ ಬೆಳವಣಿಗೆ ಸರ್ಕಾರಕ್ಕೆ ಹಲವು ಸಾಹಸಗಳಿಗೆ ಕೈ ಹಾಕಲು ನೆರವಾಗಿದೆ. ಬಂಡವಳಿಗರು ಹಿಂದಿರುಗಿಸದ ಲಕ್ಷ ಲಕ್ಷ ಕೋಟಿ ಸಾಲಗಳನ್ನು ವಸೂಲಾಗದ ಸಾಲ ಅಂತ ಲೆಕ್ಕದ ಪುಸ್ತಕಗಳಲ್ಲಿ ಬ್ಯಾಂಕುಗಳು ಬರೆದುಕೊಂಡು, ಅವನ್ನು ಅಳಿಸಿ, ತಮ್ಮ ಬ್ಯಾಂಕು ಆರೋಗ್ಯವಾಗಿದೆ ಎನ್ನಲಾರಂಭಿಸಿವೆ. ಲೆಕ್ಕ ಪುಸ್ತಕದಲ್ಲಿ ಮಲ್ಯರಂಥವರಿಗೆ ಹಬ್ಬದೂಟ. ಈ ಮೂಲಕ ಆರೋಗ್ಯಕರವಾಗಿ ಕಾಣುವ ಸಾರ್ವಜನಿಕ ಬ್ಯಾಂಕುಗಳಿಗೆ ಈಗ ಸರ್ಕಾರ ಹೆಚ್ಚಿನ ಬಂಡವಾಳ ನೀಡುತ್ತದೆ. ತನ್ಮೂಲಕ ಬ್ಯಾಂಕುಗಳು ಮತ್ತೂ ಹೆಚ್ಚು ಸಾಲ ನೀಡಲು ಸಮರ್ಥವಾಗುತ್ತವೆ. ಹಿಂದಿನ ಸಾಲಗಾರರು ಪುನಃ ಸಾಲ ಪಡೆಯುತ್ತಾರೆ. ಇದು ಉದ್ಯಮ ವಿಕಾಸ, ಉದ್ಯೋಗ ವಿಕಾಸ ಆಗುತ್ತದೆ ಅನ್ನುವುದು ಲೆಕ್ಕಾಚಾರ. ಅದೇ ಸಮಯ ರಿಸರ್ವ್ ಬ್ಯಾಂಕ್ ಸರ್ಕಾರಿ ಬಾಂಡುಗಳನ್ನು ಮರು ಖರೀದಿಸಲು ಮುಂದಾಗಿದೆ. ಈ ಕ್ರಮಗಳಿಂದ ಉದ್ಯಮ ಲೋಕಕ್ಕೆ ಅಪಾರವಾದ ನಗದು ದೊರೆಯುತ್ತದೆ ಎನ್ನುತ್ತಾರೆ. ಆದರೆ ಇದೊಂದೇ ಕಾರಣವೇ ನಮ್ಮ ಉದ್ಯಮ ಸೊರಗಿರುವುದಕ್ಕೆ ಎನ್ನುವ ಚರ್ಚೆ ಮತ್ತೊಮ್ಮೆ ಮಾಡೋಣ. ಇಂದಿನ ಉದ್ಯಮಗಳಿಗಂತೂ, ಇದು ಸ್ವಾಗತಾರ್ಹ ಬೆಳವಣಿಗೆ ಆಗಬಹುದು. ಹಾಗೆಯೇ ಈಗ ಸರ್ಕಾರ ಸಾರ್ವಜನಿಕ ಕ್ಷೇತ್ರದಲ್ಲಿ ಮೂಲಭೂತ ಅಭಿವೃದ್ಧಿಗೆ ಹೆಚ್ಚು ಖರ್ಚು ಮಾಡಬಹುದು. ರೈಲು, ರೋಡು, ಹಡಗು, ವಿದ್ಯುತ್, ಗೋದಾಮು ಮುಂತಾದುವುಗಳ ಅಭಿವೃದ್ಧಿ ಆಗಬಹುದು. ಈ ಅಭಿವೃದ್ಧಿ ಇನ್ನಿತರ ಖಾಸಗಿ ಕ್ಷೇತ್ರದ ಅಭಿವೃದ್ಧಿಗೆ ಅಗತ್ಯ. ಯೋಜನಾಬದ್ಧ ಬೆಳವಣಿಗೆ ಕೈ ಬಿಟ್ಟಮೇಲೆ ಈ ಕ್ಷೇತ್ರಗಳು ಸೊರಗಿ, ಸಾಮಾನ್ಯ ಆರ್ಥಿಕ ಕ್ಷೇತ್ರಕ್ಕೆ ಧಕ್ಕೆ ಆಗಿತ್ತು. ತೈಲ ಬೆಲೆಯ ಕುಸಿತದ ಪರಿಸ್ಥಿತಿಯನ್ನು ಸರಿಯಾಗಿ ಬಳಸಿಕೊಂಡರೆ ಈ ಕೊರತೆ ಸ್ವಲ್ಪ ನೀಗಬಹುದು. ಎಡಪಂಥೀಯರು ಹೇಳುತ್ತಲೇ ಬಂದಿರುವ ಮೂಲಭೂತ ಕ್ಷೇತ್ರವೆಂದರೆ ಅದು ಸಾರ್ವಜನಿಕ ಕ್ಷೇತ್ರವೇ ಅನ್ನುವುದು ಮತ್ತೊಮ್ಮೆ ಸಿದ್ಧವಾಗುತ್ತದೆ.

ತೈಲ ಬೆಲೆ ಕೇವಲ ಒಂದು ಸರಕಿನ ವಿಷಯವಲ್ಲ ಅದು ವ್ಯಾಪಕ ಪರಿಣಾಮದ್ದು. ಹಲವು ಪದರಗಳಲ್ಲಿ ಹಲವು ಪರಿಣಾಮ ಉಂಟುಮಾಡುವಂಥದು. ದೇಶದಲ್ಲಿ ಸಾಮಾಜಿಕವಾಗಿ ಹಲವಾರು ಪ್ರಕ್ಷೋಭೆಗಳನ್ನು ಸೃಷ್ಟಿಸುತ್ತ, ಬಿಕ್ಕಟ್ಟು ಉಂಟು ಮಾಡುತ್ತಿರುವ ಇಂದಿನ ಪ್ರತಿಗಾಮಿ ಸರ್ಕಾರ ಈ ಅವಕಾಶವನ್ನು ಧನಾತ್ಮಕವಾಗಿ ಬಳಸಿಕೊಳ್ಳಬಲ್ಲದೇ? ಈ ಸಂದೇಹ ನಮ್ಮ ಬಂಡವಳಿಗ ಉದ್ಯಮಿಗಳನ್ನೇ ಕಾಡಿಸುತ್ತಿರುವುದು ವಾಸ್ತವ. ಚೀನದಲ್ಲಿ ಈ ಸ್ಥಿತಿ ಲಾಭದಾಯಕವೇ ಆಗುತ್ತದೆ. ನಮ್ಮಲ್ಲಿ ಅದೇನೂ ಖಾತರಿಯಿಲ್ಲ. ಇದಕ್ಕೆ ವ್ಯವಸ್ಥೆಯ ಸ್ವರೂಪ ಬಹಳ ಮುಖ್ಯ.




**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ವನಸಿರಿ', ಟೆಲಿಕಾಂ ಬಡಾವಣೆ,
ವಿದ್ಯಾನಗರ ಬೆಟ್ಟಹಲಸೂರು ಅಂಚೆ
ಬೆಂಗಳೂರು – ೫೬೨೧೫೭






**ಆಧುನಿಕ ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದ**
**(ರಾಷ್ಟ್ರೀಯ ವಿಚಾರ ಸಂಕಿರಣದ ಪ್ರಬಂಧಗಳ ಸಂಗ್ರಹ)**

*ಡಾ॥ ಸಿ. ಎಲ್. ಪ್ರಸನ್ನಕುಮಾರ್*

**ಪುಟ : ೧೮+೧೨೨**

**ಬೆಲೆ : ರೂ. ೧೦೦**

**ಪ್ರಕಾಶಕರು : ಸೇಕ್ರೆಡ್ ಹಾರ್ಟ್ ಪ್ರಥಮ ದರ್ಜೆ ಮಹಿಳಾ ಕಾಲೇಜು,** ಬೆಂಗಳೂರು

*ಡಾ॥ ಸಿ. ಎಲ್. ಪ್ರಸನ್ನಕುಮಾರ್ ಸಂಪಾದಿಸಿರುವ, 'ಆಧುನಿಕ ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದ' – ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧಗಳ ಸಂಗ್ರಹವನ್ನೊಳಗೊಂಡ ಕೃತಿ. ಮಹಿಳಾವಾದ ಮತ್ತು ಮಹಿಳಾ ಸಬಲೀಕರಣದ ಕುರಿತಾದ ಸಂವೇದನೆಗಳು ಕನ್ನಡ ಸಾಹಿತ್ಯದಲ್ಲಿ ಹೇಗೆ ರೂಪುಗೊಂಡಿವೆ ಎಂಬುದು ಇಲ್ಲಿನ ಪ್ರಬಂಧಗಳ ಮುಖ್ಯ ಸಾರ. ವರ್ತಮಾನ ಸಂದರ್ಭದಲ್ಲಿ ಶುಷ್ಕ ಬೌದ್ಧಿಕತೆಯನ್ನು ಮೀರಿ, ಸಾಮಾಜಿಕ ಪ್ರಜ್ಞೆಯೊಂದಿಗೆ ರಾಜಕೀಯ ದೃಷ್ಟಿಕೋನವನ್ನು ಇಟ್ಟುಕೊಂಡು ಮಹಿಳೆಯನ್ನು ಸಮಾನತೆಯ ಸ್ತರಕ್ಕೆ ಕೊಂಡೊಯ್ಯಬೇಕಾಗಿರುವುದು ಅನಿವಾರ್ಯವಾಗಿದೆ. ಹೀಗಾಗಿ, ಶೋಷಿತ ಸಮುದಾಯಗಳಲ್ಲಿ ಒಂದಾಗಿರುವ ಹೆಣ್ಣಿನ ಆ ಅವಸ್ಥೆಯ ಬಗ್ಗೆ ಖಚಿತವಾದ ಕಾರಣಗಳನ್ನು ಗುರುತಿಸುವ; ಪರಂಪರೆಯಿಂದ ಬಂದ ಕೌಟುಂಬಿಕ ನೆಲೆಯಿಂದ ಬೇರ್ಪಟ್ಟ ಹೆಣ್ಣಿನ ಪ್ರಾತಿನಿಧ್ಯ ಕಲ್ಪಿಸುವ ನಿಟ್ಟಿನಲ್ಲಿ ಸಮಾಜದ ಆಲೋಚನಾ ದಿಕ್ಕು ಬದಲಾಗಬೇಕಿದೆ. ಸ್ತ್ರೀವಾದವು ಮಹಿಳೆಯ ಶೋಷಿತ ನೆಲೆಯನ್ನು ಶೋಧಿಸುವ, ಅದನ್ನು ಮೀರುವ ಅಗತ್ಯವನ್ನು ಪ್ರತಿಪಾದಿಸುವ ಚಳುವಳಿಯಾಗಬೇಕಿದೆ. ಅಲ್ಲದೆ, ಲಿಂಗ ಸೂಕ್ಷ್ಮ ಆಲೋಚನಾಕ್ರಮವು ನಮ್ಮ ಸಾಂಸ್ಕೃತಿಕ ಚಹರೆಯಾಗ ಬೇಕೆಂದು ಒತ್ತಾಯಿಸುವುದೂ ಆಗಿದೆ. ಈ ನಿಟ್ಟಿನಲ್ಲಿ ಹಮ್ಮಿ ಕೊಳ್ಳಲಾಗಿದ್ದ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಈ ನಾಡಿನ ವಿದ್ವಾಂಸರು, ಚಿಂತಕರು ಮಾಡಿದ ಭಾಷಣ ಗಳನ್ನು, ಮಂಡಿಸಿದ ಪ್ರಬಂಧಗಳನ್ನು ಒಟ್ಟುಗೂಡಿಸಿ ಕೃತಿಯ ರೂಪದಲ್ಲಿ ತಂದಿರುವುದು ಶ್ಲಾಘನೀಯ.*

**ನಿವೃತ್ತಿಯ ನಂತರದ ನೆಮ್ಮದಿಯ ಬದುಕಿಗೆ** — *ಪ್ರೊ॥ ಜಿ. ಎಸ್. ವಡಗಾಂವಿ*

**ಪುಟ : ೧೨೮** — **ಬೆಲೆ : ರೂ. ೧೦೦**

**ನಂದನ ಪ್ರಕಾಶನ,** ರಾಮಪೂರ

*'ನಿವೃತ್ತಿಯ ನಂತರದ ನೆಮ್ಮದಿಯ ಬದುಕಿಗೆ'– ಪ್ರೊ॥ ಜಿ. ಎಸ್. ವಡಗಾಂವಿ ಅವರು, ಸದ್ಯ ನಿರ್ವಹಿಸುತ್ತಿರುವ ನಿವೃತ್ತ ಬದುಕಿನ ಅನುಭವಗಳ ನೆಲೆಯಲ್ಲಿ ಸೃಜಿಸಿದ ಕೃತಿ. ಓರ್ವ ವ್ಯಕ್ತಿ, ನಿವೃತ್ತಿಯ ನಂತರವೂ ಅಂದರೆ ಅರವತ್ತರ ಇಳಿ ವಯಸ್ಸಿನಲ್ಲೂ ಕ್ರಿಯಾಶೀಲ ಬದುಕನ್ನು ನಿರ್ವಹಿಸಲು ಹೇಗೆ ಸನ್ನದ್ಧರಾಗಬೇಕು ಎಂಬುದನ್ನು ಈ ಕೃತಿ ವಿವರಿಸುತ್ತದೆ. ಸೇವಾವಧಿಯಲ್ಲಿ ಯಾಂತ್ರಿಕ ಬದುಕನ್ನು ರೂಢಿಸಿಕೊಂಡಿದ್ದ ಜೀವ, ನಿವೃತ್ತಿಯ ನಂತರದಲ್ಲಿ ಯಾವ ಕಟ್ಟುಪಾಡುಗಳಿಲ್ಲದ ಸ್ವಚ್ಛಂದ ಬದುಕಿಗೆ ತೆರೆದುಕೊಳ್ಳುವಾಗ ಯೋಚನೆಯಲ್ಲಿ ಸ್ವಲ್ಪವೇ ಮುಗ್ಗರಿಸಿದರೂ ಸಾಕು, ಆ ಬದುಕು ರೌರವ ನರಕವಾಗುತ್ತದೆ. ಸೇವೆಯಲ್ಲಿದ್ದಾಗಿನ ಅಂತಸ್ತು, ಗೌರವ, ಘನತೆಗಳೆಲ್ಲವೂ ನಿವೃತ್ತಿಯ ನಂತರ ಇಲ್ಲವಾಗಿ ತಳಮಳ, ತಲ್ಲಣವನ್ನುಂಟುಮಾಡುತ್ತವೆ. ಈ ಬದಲಾವಣೆಗೆ ಹೊಂದಿಕೊಳ್ಳುವ ಗುಣವನ್ನು ಮನುಷ್ಯ ರೂಢಿಸಿಕೊಳ್ಳಬೇಕು. ನಿವೃತ್ತಿಯ ನಂತರದ ಬದುಕು ಯಾತನೆಯಿಂದ ಕೂಡಿರಬಾರದೆಂದರೆ ನಿವೃತ್ತಿಯ ಮುಂಚೆಯೇ ಕೆಲವು ಎಚ್ಚರಿಕೆಗಳನ್ನು ತೆಗೆದುಕೊಳ್ಳುವುದು ಅನಿವಾರ್ಯ. ಅಂತೆಯೇ, ಈ ಕೃತಿಯಲ್ಲಿ ಪ್ರೊ॥ ಜಿ. ಎಸ್. ವಡಗಾಂವಿಯವರು, ನಿವೃತ್ತಿಯ ಬದುಕು ಚಟುವಟಿಕೆಯಿಂದ ಕೂಡಿರಲು ಬೇಕಾದ ಬೇರೆಬೇರೆ ಕೆಲಸಗಳಲ್ಲಿ ಪ್ರವೃತ್ತರಾಗುವ, ಸಂಬಂಧಗಳನ್ನು ನಿರ್ವಹಿಸುವ, ಹಣಕಾಸಿನ ನಿರ್ವಹಣೆ, ಭಾವೋದ್ವೇಗ ನಿರ್ವಹಿಸುವ, ಸಂತೋಷವನ್ನು ಅನುಭವಿಸುವ ಕುರಿತಾಗಿ ವಿವರವಾಗಿ ಬರೆದಿದ್ದಾರೆ. ನಿವೃತ್ತಿಯ ಜೀವನದ ನಿರ್ವಹಣೆಗಾಗಿ ಪ್ರತಿಯೊಬ್ಬರೂ ಓದಲೇಬೇಕಾದ ಕೃತಿ ಇದಾಗಿದೆ.*



**ನಮ್ಮ ಮಕ್ಕಳೇ ಚರಿತ್ರೆ ಬರೆದರೆ... (ಪ್ರಬಂಧಗಳು)** — *ಕೆ. ಸತ್ಯನಾರಾಯಣ*

**ಪುಟ : ೧೨೮** — **ಬೆಲೆ : ರೂ. ೭೫**

**ಅಭಿನವ ಪ್ರಕಾಶನ,** ಬೆಂಗಳೂರು

*'ನಮ್ಮ ಮಕ್ಕಳೇ ಚರಿತ್ರೆ ಬರೆದರೆ...' – ಕೆ. ಸತ್ಯನಾರಾಯಣ ಅವರ ಪ್ರಬಂಧಗಳ ಸಂಕಲನ. ಕಥೆಗಾರರಾಗಿಯೂ ಗುರುತಿಸಿಕೊಂಡಿರುವ ಇವರದು ಓದುಗನನ್ನು ಸಮ್ಮೋಹನಕ್ಕೀಡುಮಾಡುವಂಥ ಬರವಣಿಗೆ ಶೈಲಿಯು ಅಷ್ಟೇ ಆರ್ದ್ರತೆಯನ್ನೂ, ಸಹಜತೆಯನ್ನೂ ಹೊಂದಿರುತ್ತದೆ. ತಮ್ಮ ಜೀವನಾನುಭವಗಳನ್ನು, ಆ ಕುರಿತಾದ ಆಲೋಚನೆಗಳನ್ನು ವಿಶಿಷ್ಟವಾದ ನಿರೂಪಣೆಯಲ್ಲಿ ಒಳಗೊಳಿಸುತ್ತಲೇ ಕಥೆ ಕಟ್ಟುವ ಅಪರೂಪದ ಕಥೆಗಾರ ಕೆ. ಸತ್ಯನಾರಾಯಣರು. ಅಂತೆಯೇ ವಿಭಿನ್ನ ರೀತಿಯ ಬರವಣಿಗೆಯನ್ನು ರೂಢಿಸಿಕೊಂಡಿರುವ ಇವರು ಪ್ರಬಂಧಗಳನ್ನೂ ಸಹ ಬರೆದಿದ್ದಾರೆ.*

*ಸದ್ಯ, 'ನಮ್ಮ ಮಕ್ಕಳೇ ಚರಿತ್ರೆ ಬರೆದರೆ...' ಸಂಕಲನದಲ್ಲಿರುವ ಪ್ರಬಂಧಗಳು ಲೇಖಕರ ಲೋಕಾನುಭವಗಳನ್ನು ಸಾಂದ್ರವಾಗಿ ಒಳಗೊಂಡಿರುವುದರಿಂದಲೂ ತೀರ ಸಹಜವಾಗಿಯೇ ಓದುಗನಿಗೆ ತಟ್ಟುವುದರ ಮೂಲಕ ಕ್ಷಣಕಾಲ ನಮ್ಮ ನಾವೇ ಮರೆಯುವಂತೆ ಮಾಡುತ್ತವೆ. ಹಾಗೆಯೇ ಒಂದು ಕಾಲದ, ಒಂದು ಪ್ರದೇಶದ ಆವರಣದೊಳಗಿನ ಮನುಷ್ಯನ ವರ್ತನೆ, ಪರಿಸರದ ಸಂಸ್ಕೃತಿ, ಸಾಮಾಜಿಕ ಅನುಭವ – ಇವೆಲ್ಲವುಗಳನ್ನು ಲೇಖಕರ ಬಾಲ್ಯದಲ್ಲಿ ಅತೀವ ಕುತೂಹಲ ಕೆರಳಿಸಿದ ರೋಚಕ ಸಂಗತಿಗಳ ಮೂಲಕ ಅನಾವರಣ ಮಾಡುತ್ತವೆ. ಅಲ್ಲದೇ ಆಧುನಿಕ ಜಗತ್ತಿನಲ್ಲಿ ಕಳೆದುಹೋಗುತ್ತಿರುವ ಸಂಬಂಧಗಳು, ಜೀವನ ಪ್ರೀತಿಯಿಲ್ಲದ ಧಾವಂತದ ಬದುಕು ಮತ್ತು ವ್ಯಾಪಾರೀಕರಣಗೊಂಡ ಶಿಕ್ಷಣ ಪದ್ಧತಿ ಹೊಂದಿರಬಹುದಾದ ಹಲವು ಆಯಾಮಗಳು ತಂದೊಡ್ಡಿದ ಅಪಾಯಗಳು – ಈ ಎಲ್ಲ ಕ್ರಿಯೆಗಳನ್ನು ಹಲವು ರೂಪಕಗಳೊಂದಿಗೆ ಸಮೀಕರಿಸಿ ಹೇಳುತ್ತವೆ. ಒಂದು ರೀತಿಯಲ್ಲಿ ಈ ಸಂಕಲನದ ಪ್ರಬಂಧಗಳು ಲೇಖಕರ ಅಗಾಧವಾದ ಓದು ಮತ್ತು ಗಹನವಾದ ಆಲೋಚನಾ ಕ್ರಮಕ್ಕೆ ಕನ್ನಡಿ ಹಿಡಿಯುತ್ತವೆ.*

**ಸಂರಚನಾವಾದಿ ವಿಮರ್ಶಾತ್ಮಕ ಶಿಕ್ಷಣ** — *ಡಾ॥ ಮಹಾಬಲೇಶ್ವರ ರಾವ್*

**ಪುಟ : ೭೨** — **ಬೆಲೆ : ರೂ. ೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧




*'ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು – ೨೦೦೫'. ಇದು, ಪ್ರೊ॥ ಯಶಪಾಲ್ ಅವರ ನೇತೃತ್ವದ ಸಮಿತಿಯು ಕಲಿಕೆಯ ವಿಚಾರದಲ್ಲಿ ವರ್ತಮಾನದ ಪ್ರಭಾವದಿಂದ ಬಿಡಿಸಿಕೊಂಡು ಸಂರಚನವಾದ ಹಾಗೂ ವಿಮರ್ಶಾತ್ಮಕ ಬೋಧನೆಯ ಪರಿಕಲ್ಪನೆಗಳನ್ನು ವಿಶೇಷವಾಗಿ ಪ್ರೋತ್ಸಾಹಿಸುವ ನಿಟ್ಟಿನಲ್ಲಿ ರೂಪಿಸಿರುವ ಪಠ್ಯಕ್ರಮವಾಗಿದೆ. ಕೇಂದ್ರ ಸರಕಾರವು ಈ ಪಠ್ಯಕ್ರಮವನ್ನು ಕೇಂದ್ರೀಯ ವಿದ್ಯಾಲಯಗಳು ಹಾಗೂ ನವೋದಯ ವಿದ್ಯಾಲಯಗಳಲ್ಲಿ ಜಾರಿಗೆ ತಂದಿದೆ. ಅಲ್ಲದೆ ವಿವಿಧ ರಾಜ್ಯಗಳೂ ಸಹ ಈ ಪಠ್ಯಕ್ರಮವನ್ನು ಆಧರಿಸಿ ತಮ್ಮ ತಮ್ಮ ಪ್ರಾಂತಗಳಲ್ಲಿನ ಶಾಲಾ ಶಿಕ್ಷಣಕ್ಕೆ ಅಗತ್ಯವಾದ ಪಠ್ಯಕ್ರಮವನ್ನೂ ಪಠ್ಯಪುಸ್ತಕಗಳನ್ನೂ ರೂಪಿಸಿವೆ. ಆದರೆ, ತಳಮಟ್ಟದಲ್ಲಿ ಕೆಲಸ ಮಾಡುತ್ತಿರುವ ಶಿಕ್ಷಕರಿಗೆ ಸಂರಚನಾವಾದಿ ಹಾಗೂ ವಿಮರ್ಶಾತ್ಮಕ ಬೋಧನೆಯ ಪರಿಕಲ್ಪನೆಗಳ ಬಗ್ಗೆ ಸರಿಯಾದ ಅರಿವು ಮಾತ್ರ ಇಲ್ಲ. ಪ್ರಗತಿಪರವಾದ ಈ ಎರಡು ವಿಚಾರಧಾರೆಗಳ ಬಗ್ಗೆ ಶಿಕ್ಷಕರಿಗೆ ಅರಿವು ಮೂಡಿಸಿ, ಬೋಧನೆ ಕಲಿಕೆಯ ವಿಷಯದಲ್ಲಿ ಸಬಲರನ್ನಾಗಿಸುವುದು ಅಗತ್ಯವಾಗಿದೆ. ಈ ನಿಟ್ಟಿನಲ್ಲಿ, ಡಾ॥ ಮಹಾಬಲೇಶ್ವರ ರಾವ್ ಅವರು, ಸಂರಚನಾವಾದ ಹಾಗೂ ವಿಮರ್ಶಾತ್ಮಕ ಬೋಧನೆಯ ಪರಿಕಲ್ಪನೆಗಳ ಕುರಿತಾಗಿ, 'ಸಂರಚನವಾದಿ ವಿಮರ್ಶಾತ್ಮಕ ಶಿಕ್ಷಣ' ಕೃತಿಯಲ್ಲಿ ಸರಳವಾಗಿ ನಿರೂಪಿಸಿದ್ದಾರೆ. ಶಾಲಾ ಶಿಕ್ಷಣ ವ್ಯವಸ್ಥೆಗೆ ಹೊಸ ರೂಪು ಕೊಡಲು ತಳವರ್ಗದ ಶಿಕ್ಷಕರು, ಈ ಪರಿಕಲ್ಪನೆಗಳ ಬಗ್ಗೆ ಸ್ವಯಂ ಅರಿತುಕೊಳ್ಳಲು ಈ ಕೃತಿ ಸಹಕಾರಿಯಾಗಿದೆ.*

**– ಕಲ್ಲೇಶ್ ಕುಂಬಾರ್**
*ಮಲ್ಲಿಕಾರ್ಜುನ ಹೋಟೆಲ್, ಹಾರೂಗೇರಿ – ೫೯೧ ೨೨೦, ರಾಯಬಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ*

**ವಿಶ್ವ ಮಹಿಳಾ ದಿನದ ರೂವಾರಿ**

ಜರ್ಮನಿಯಲ್ಲಿ ೧೮೫೭ರಲ್ಲಿ ಹುಟ್ಟಿದ ಕ್ಲಾರಾ ಐಸ್ನರ್ ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಮಹಿಳಾ ಮತ್ತು ಕಾರ್ಮಿಕ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಕೊಂಡವಳು. ಕ್ರಾಂತಿಕಾರಿ ಓಸಿಫ್ ಝೆಟ್‌ಕಿನ್‌ನನ್ನು ಮದುವೆಯಾಗಿ ಕ್ರಾಂತಿಕಾರಿ ಜೀವನವನ್ನು ಆಯ್ದುಕೊಂಡವಳು. ೧೮೯೨ರಲ್ಲಿ ಸೋಶಿಯಲ್ ಡೆಮಾಕ್ರಟಿಕ್ ಪತ್ರಿಕೆ "ಡೀ ಗ್ಲಾಯ್ ಖಾಯ್ಟ್" (ಸಮಾನತೆ)ಪತ್ರಿಕೆಯ ಸಂಪಾದಕಳಾಗಿ ಕೆಲಸ ಮಾಡಿದವಳು. ಕ್ಲಾರಾ ಝೆಟ್‌ಕಿನ್ ಅಂತರರಾಷ್ಟ್ರೀಯ ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿದಳು. ಅಂತರರಾಷ್ಟ್ರೀಯ ಮಹಿಳಾ ಸೆಕ್ರೆಟೇರಿಯೆಟ್‌ನ ಮುಖ್ಯಸ್ಥೆಯಾಗಿದ್ದ ಕ್ಲಾರಾ ೧೯೧೦ರಲ್ಲಿ ಕೋಪೆನ್ ಹೇಗನ್‌ನಲ್ಲಿ ನಡೆದ ಎರಡನೆಯ ಸೋಶಿಯಲಿಸ್ಟ್ ಅಂತರರಾಷ್ಟ್ರೀಯದಲ್ಲಿ ವಿಶ್ವ ಮಹಿಳಾ ದಿನವನ್ನು ಆಚರಿಸಬೇಕೆಂಬ ನಿರ್ಣಯವನ್ನು ಮಂಡಿಸಿ, ಆ ಸಮ್ಮೇಳನದಲ್ಲಿ ನೆರೆದಿದ್ದ ವಿವಿಧ ರಾಷ್ಟ್ರಗಳ ಸದಸ್ಯ ಪ್ರತಿನಿಧಿಗಳ ಸಮ್ಮತಿಯನ್ನು ಸರ್ವಾನುಮತದಿಂದ ಪಡೆದುಕೊಂಡಳು. ಹೀಗೆ ಪ್ರತಿಭಟನೆ ಮತ್ತು ರಾಜಕೀಯ ಕ್ರಿಯಾಶೀಲತೆಯ ಪರಂಪರೆಯನ್ನು ತನ್ನಲ್ಲಿ ಹುದುಗಿಸಿಕೊಂಡ ವಿಶ್ವ ಮಹಿಳಾ ದಿನದ ಹುಟ್ಟಿಗೆ ಕಾರಣಳಾದ ಕ್ಲಾರಾ ಝೆಟ್‌ಕಿನ್ ವಿಶ್ವದ ಎಲ್ಲಾ ಮಹಿಳಾ ಹೋರಾಟಗಾರರಿಗೂ ಸ್ಫೂರ್ತಿದಾಯಕಳು. ಇಂತಹ ದಿಟ್ಟ ನಾಯಕಿಯ ನಾಡಿಗೆ ಪ್ರವಾಸ ಹೋಗಿದ್ದ ಎನ್. ಗಾಯತ್ರಿ ತಮ್ಮ ಅನುಭವವನ್ನು ಇಲ್ಲಿ ಹಂಚಿಕೊಂಡಿದ್ದಾರೆ.

# ಮಹಿಳಾ ದಿನದ ರೂವಾರಿ ಕ್ಲಾರಾಳ ಜಾಡನ್ನರಸುತ್ತಾ...

**ಮೂ**ರು ವರ್ಷಗಳ ಹಿಂದೆ ಯುರೋಪ್ ಪ್ರವಾಸ ಕೈಗೊಂಡಾಗ ಹಲವಾರು ಸ್ಥಳಗಳನ್ನು ಮನ ನೋಡಬಯಸಿತ್ತು. ಅದರಲ್ಲೂ ಕ್ರಾಂತಿಕಾರಿಗಳ, ಚಿಂತಕರ, ಬುದ್ಧಿಜೀವಿಗಳ ನಾಡಾದ ಜರ್ಮನಿಯ ಭೇಟಿಗೆ ನಾನು ಹೆಚ್ಚು ಪ್ರಾಶಸ್ತ್ಯ ಕೊಟ್ಟಿದ್ದರೆ, ಅದಕ್ಕೆ ವಿಶೇಷ ಕಾರಣವಿತ್ತು. ಪಶ್ಚಿಮ ಜರ್ಮನಿಯ ಹಿಂದಿನ ರಾಜಧಾನಿಯಾದ ಬಾನ್‌ನಲ್ಲಿ ನನ್ನ ಮಗಳು ಓದುತ್ತಿದ್ದ ಕಾರಣ, ಅವಳ ನೆರವಿನಿಂದ ಚರಿತ್ರೆಯ ಪುಟಗಳಲ್ಲಿ ಭದ್ರವಾಗಿ ರಾರಾಜಿಸುತ್ತಿರುವ ಕಾರ್ಲ್ ಮಾರ್ಕ್ಸ್, ಏಂಗೆಲ್ಸ್, ಬರ್ಟೋಲ್ಟ್ ಬ್ರೆಕ್ಟ್, ರೋಸಾ ಲಕ್ಸೆಂಬರ್ಗ್, ಕ್ಲಾರಾ ಝೆಟ್‌ಕಿನ್, ಇನ್ನು ಮುಂತಾದವರು ಉಸಿರಾಡಿದ, ನಡೆದಾಡಿದ ಸ್ಥಳಗಳಲ್ಲಿ ನಾವು ಓಡಾಡಬಹುದಾದ ಅವಕಾಶ ದಕ್ಕಿಸಿಕೊಳ್ಳಬಹುದಲ್ಲಾ, ಎಂಬುದು ನನ್ನ ಇರಾದೆಯಾಗಿತ್ತು. ಮಗಳಿಗೆ ನನ್ನ ಇಂಗಿತವನ್ನು ರವಾನಿಸಿದ್ದೆ. ಅದಕ್ಕೆ ಅವಳು ನೀಲಿನಕ್ಷೆ ರೂಪಿಸಿದಳು. ಆದರೂ ಈ ಕಾರ್ಯ ನಾವು ಅಂದುಕೊಂಡಷ್ಟು ಸುಲಭವೇನೂ ಆಗಿರಲಿಲ್ಲ.

ಜರ್ಮನಿಗೆ ಹೋಗುವುದಕ್ಕೆ ಮುಂಚೆಯೇ ನಾನು ಬರೆದ ಕ್ಲಾರಾ ಝೆಟ್‌ಕಿನ್‌ಳನ್ನು ಕುರಿತ ಪುಸ್ತಕ ಪ್ರಕಟವಾಗಿತ್ತು. ಅವಳು ಹುಟ್ಟಿದ, ಓದಿ ಬೆಳೆದ, ಹೋರಾಟ ನಡೆಸಿದ ಯಾವುದಾದರೂ ಒಂದು

**ಡಾ|| ಎನ್. ಗಾಯತ್ರಿ**

ಜಾಗವನ್ನಾದರೂ ಜರ್ಮನಿಯಲ್ಲಿ ನೋಡಬೇಕೆಂಬುದು ನನ್ನ ಉದ್ದೇಶವಾಗಿತ್ತು. ೧೮೫೭ರಲ್ಲಿ ಕ್ಲಾರಾ ಹುಟ್ಟಿದ ವೀದರಾವ್ ಹಳ್ಳಿಯಾಗಲೀ, ಅವಳು ಶಿಕ್ಷಣ ಪಡೆದುಕೊಂಡ ಲೈಪ್‌ಝಿಗ್ ನಗರವನ್ನಾಗಲೀ, ಇಲ್ಲವೆ ಅವಳ ಕಾರ್ಯಕ್ಷೇತ್ರವಾದ ಬರ್ಲಿನ್‌ನಲ್ಲಿ ಅವಳ ಹೆಜ್ಜೆಗುರುತುಗಳನ್ನು ನೆನಪಿಸುವ ಯಾವುದಾದರೂ ಒಂದು ಸ್ಥಳವನ್ನಾದರೂ ನೋಡಬೇಕೆಂಬುದು ನನ್ನ ಆಸೆಯಾಗಿತ್ತು. ವಿಶ್ವಮಾನ್ಯಳಾದ ಕ್ಲಾರಾ ಝೆಟ್‌ಕಿನ್‌ಳ ಹೆಸರು ಅವಳ ಊರಿನಲ್ಲೇ ಹಿಂದಕ್ಕೆ ಸರಿದಿರುವ ಕಹಿಸತ್ಯದಿಂದ ಮನಸ್ಸಿಗೆ ಖೇದವಾಯಿತು. ಜರ್ಮನಿಯ ಮೊದಲ ಶಿಕ್ಷಕ ತರಬೇತಿ ಪಡೆದ ಮಹಿಳೆಯೆನಿಸಿಕೊಂಡ ಕ್ಲಾರಾ ಓದಿದ ಮತ್ತು ಕ್ರಾಂತಿಯ ಪಾಠ ಆರಂಭಿಸಿದ ಲೈಪ್‌ಝಿಗ್ ನಗರದಲ್ಲಿ ಅವರ ಮೂರ್ತಿಯಿರುವ ಒಂದು ಉದ್ಯಾನವನ್ನು ಬಿಟ್ಟರೆ ಮತ್ತೆ ನೋಡುವುದೇನೂ ಇಲ್ಲವೆಂದು ತಿಳಿದಾಗ ಅಲ್ಲಿನ ಭೇಟಿಯ ಕೈ ಬಿಟ್ಟೆ.

ಬರ್ಲಿನ್ ನಗರದಲ್ಲಿದ್ದ ಮೂರು ದಿನಗಳಲ್ಲಿ ಕ್ಲಾರಾಳ ಸ್ಮಾರಕ ಸ್ಥಳವನ್ನು ನೋಡುವುದು ನನ್ನ ಮುಖ್ಯ ಉದ್ದೇಶವಾಗಿತ್ತು. ನಾವು ಇಳಿದುಕೊಂಡಿದ್ದ ಹೋಟೆಲ್‌ನಲ್ಲಿ ನಮಗೆ ನೀಡಲಾದ ಪ್ರವಾಸಿ ಮಾಹಿತಿ ಪುಸ್ತಕಗಳಲ್ಲಿ ಕ್ಲಾರಾಳಿಗೆ ಸಂಬಂಧಪಟ್ಟ ಯಾವ




ಕ್ಲಾರಾ ಮತ್ತು ರೋಸಾ : ಮನೆಯ ಉದ್ಯಾನದಲ್ಲಿರುವ ಕ್ಲಾರಾ ಮತ್ತು ರೋಸಾಳ ಪ್ರತಿಮೆಗಳು



ಸ್ಟಡಿ ರೂಮ್ : ಕ್ಲಾರಾ ಬಳಸುತ್ತಿದ್ದ ಪೀಠೋಪಕರಣಗಳುಳ್ಳ ಕೊಠಡಿ

ಮಾಹಿತಿಯೂ ದೊರಕುವಂತಿರಲಿಲ್ಲ. ಮತ್ತೆ ಗೂಗಲ್ ಹುಡುಕಾಟದಲ್ಲಿ ದೊರಕಿಸಿಕೊಂಡ ಮಾಹಿತಿಯಿಂದ ಬ್ರಾಂಡೆನ್‌ಬರ್ಗ್‌ನಲ್ಲಿನ ಬಿರ್ಕೆನ್‌ವೆರ್ಡರ್‌ನಲ್ಲಿ ಕ್ಲಾರಾಳ ಕುರಿತು ಮ್ಯೂಸಿಯಂ ಇರುವ ಮಾಹಿತಿ ಪಡೆದು ನಮ್ಮ ಪ್ರಯಾಣವನ್ನು ಆ ದಿಕ್ಕಿನತ್ತ ಮುಂದುವರಿಸಿದೆವು.

ಜರ್ಮನಿಯ ಬ್ರಾಂಡೆನ್‌ಬರ್ಗ್‌ನಲ್ಲಿರುವ ಪಾಟ್ಸ್‌ಡಾಮ್‌ನಲ್ಲಿದ್ದ ಸೆಸೀಲಿಯೆನ್‌ಹಾಫ್ ಅರಮನೆಯನ್ನು ನೋಡಲೆಂದು ಬೆಳಗ್ಗೆಯೇ ಹೋಗಿದ್ದೆವು. ೧೯೪೫ರ ಪಾಟ್ಸ್‌ಡಾಮ್ ಸಮ್ಮೇಳನದ ಖ್ಯಾತಿಯ ಈ ಅರಮನೆ ಸೋವಿಯೆತ್ ಯೂನಿಯನ್, ಯುನೈಟೆಡ್ ಕಿಂಗ್‌ಡಮ್ ಮತ್ತು ಅಮೆರಿಕೆಯ ನಾಯಕರು ಎರಡನೆಯ ಮಹಾಸಮರದ ನಂತರ ಜಗತ್ತನ್ನು ರೂಪಿಸಿದ ಬಹುಮುಖ್ಯ ನಿರ್ಧಾರಗಳಿಗೆ ಸಹಿ ಹಾಕಿದ ತಾಣವಿದು. ಹಲವು ತಾಸುಗಳ ಕಾಲ ಈ ಅರಮನೆ ಮ್ಯೂಸಿಯಂನ ವೀಕ್ಷಣೆ ಗತಕಾಲದ ಮಹಾನ್ ಘಟನೆಗಳನ್ನು ಚಿತ್ರವತ್ತಾಗಿ ನಮ್ಮ ಕಣ್ಣಮುಂದೆ ತಂದಿತು. ೧೯೩೦ರ ದಶಕದಲ್ಲಿ ನಾಝಿ ಆಡಳಿತದಲ್ಲಿ ತೀವ್ರವಾದ ಆಘಾತಕ್ಕೊಳಗಾದ ಜರ್ಮನಿಯಲ್ಲಿ ನಿಷೇಧಿಸಲ್ಪಟ್ಟ ಕಮ್ಯುನಿಸ್ಟ್ ಪಕ್ಷದ ನಾಯಕಿಯಾಗಿ, ಮಹಿಳಾ ಹಕ್ಕುಗಳ ಹೋರಾಟಗಾರ್ತಿಯಾಗಿ ಹೊರಹೊಮ್ಮಿದ ಕ್ಲಾರಾ ಝೆಟ್‌ಕಿನ್‌ಳನ್ನು ನೆನೆಸಿಕೊಳ್ಳುತ್ತಾ ಬಸ್ಸು ಮತ್ತು ರೈಲು ಹಿಡಿದು ಬಿರ್ಕೆನ್‌ವೆರ್ಡರ್‌ನಲ್ಲಿದ್ದ ಕ್ಲಾರಾಳ ಮ್ಯೂಸಿಯಂನತ್ತ ಧಾವಿಸಿದೆವು.

ಬಿರ್ಕೆನ್‌ವೆರ್ಡರ್ ಬ್ರಾಡೆನ್‌ಬರ್ಗ್‌ನ ಒಂದು ಸಣ್ಣ ಪ್ರಾಂತ್ಯ. ಬರ್ಲಿನ್‌ನ ಉತ್ತರ ಗಡಿಗೆ ೩ ಕಿಲೋ ಮೀಟರ್ ದೂರದಲ್ಲಿದೆ. ಈ ಸ್ಮಾರಕದ ವಿವರಗಳ ಬಗೆಗಿನ ಮಾಹಿತಿಗಾಗಿ ಹುಡುಕಾಡಿದಾಗ ಯಾರಿಗೂ ಇದರ ಮಾಹಿತಿ ಗೊತ್ತಿರಲಿಲ್ಲ. ಕೊನೆಗೆ, ರೈಲ್ವೇ ಮಾಸ್ತರನೂ 'ಗೊತ್ತಿಲ್ಲ'ವೆಂದು ತಲೆಯಾಡಿಸಿದ. ಬಿರ್ಕೆನ್‌ವೆರ್ಡರ್‌ನ ಕೊನೆಯ ನಿಲ್ದಾಣದಲ್ಲಿಳಿದು ಕ್ಲಾರಾಳ ಮ್ಯೂಸಿಯಂ ಹುಡುಕುತ್ತಾ ಹೊರಟರೆ ದಾರಿಯುದ್ದಕ್ಕೂ ಕ್ರಾಂತಿಕಾರಿಗಳ ಹೆಸರಿನ ಬೀದಿಗಳು ಕಂಡುಬಂದವು. ಏನೂ ಪ್ರಯೋಜನವಿಲ್ಲದಿದ್ದರೂ ದಾರಿಯಲ್ಲಿ ಸಿಕ್ಕವರನ್ನು ಕೇಳುತ್ತಾ, ಹುಡುಕುತ್ತಾ ಹೊರಟಂತೆ ಅಂತೂ ಕೊನೆಗೊಮ್ಮೆ ಕ್ಲಾರಾಳ ಹೆಸರಿನಲ್ಲಿರುವ ಮನೆ ಸಿಕ್ಕಿಯೇ ಬಿಟ್ಟಿತು. ಆಗ ಸಮಯ ಸಂಜೆ ೪.೨೦. ಅಂದು ಶನಿವಾರದ ಸಂಜೆಯಾದ್ದರಿಂದ, ಮ್ಯೂಸಿಯಂ ಬಾಗಿಲು ಹಾಕಿತ್ತು. ನಿರಾಸೆಯಾದರೂ, ಕೊನೆಗೂ ಆ ಸ್ಥಳ ಹುಡುಕಿದ್ದಕ್ಕೆ ಸಮಾಧಾನಪಟ್ಟು ಹಿಂತಿರುಗಿದೆವು.

ಮತ್ತೆ, ಸೋಮವಾರದ ದಿನ ಬೆಳಗ್ಗೆ ಎದ್ದು ಎಸ್-ಬಾನ್ ರೈಲು ಹಿಡಿದು ಬಿರ್ಕೆನ್‌ವೆರ್ಡರ್‌ನತ್ತ ನಮ್ಮ ಪಯಣ. ಬಿರ್ಕೆನ್‌ವೆರ್ಡರ್ ಸ್ಟೇಷನ್‌ನಲ್ಲಿಳಿದು ನೇರವಾಗಿ ಕ್ಲಾರಾಳ ಮನೆಗೆ ಹೊರಟೆವು. ಈ ಮನೆಯನ್ನು ಕಲಾವಿದ ಕಾರ್ಲ್ ದ್ರಾಬಿಗ್‌ನಿಗಾಗಿ ಕಟ್ಟಲಾಗಿತ್ತು. ಕ್ಲಾರಾಳ ಎರಡನೇ ಮಗ ಕೊನ್‌ಸ್ಟಾಂಟಿನ್ ತನ್ನ ತಾಯಿಗಾಗಿ ಈ ಮನೆಯನ್ನು ಕೊಂಡುಕೊಂಡ. ೧೯೨೯ರಿಂದ ೧೯೩೨ರವರೆಗೆ ಕ್ಲಾರಾ ಈ ಮನೆಯಲ್ಲಿ ವಾಸವಾಗಿದ್ದಳು. ೧೯೩೩ರಲ್ಲಿ ನಾಝಿಗಳು ಈ ಮನೆಯನ್ನು ವಶಪಡಿಸಿಕೊಂಡರು. ಮತ್ತೆ ಜರ್ಮನ್ ಡೆಮೊಕ್ರಟಿಕ್ ರಿಪಬ್ಲಿಕ್ ಅಧಿಕಾರಕ್ಕೆ ಬಂದನಂತರ ೧೯೪೯ರಲ್ಲಿ ಸೋವಿಯೆತ್ ಯೂನಿಯನ್‌ನಿಂದ ಹಿಂತಿರುಗಿ ಬಂದ ಕ್ಲಾರಾಳ ಹಿರಿಯ ಮಗ ಮ್ಯಾಕ್ಸಿಂ ಝೆಟ್‌ಕಿನ್‌ನಿಗೆ ಈ ಮನೆಯನ್ನು ಹಸ್ತಾಂತರಿಸಿದರು. ಅವನ ಪ್ರಯತ್ನ ಮತ್ತು ಶ್ರಮದಿಂದಾಗಿ ೧೯೫೭ರಲ್ಲಿ ಕ್ಲಾರಾಳ ಜನ್ಮ ಶತಮಾನೋತ್ಸವದ ಸಂದರ್ಭದಂದು ಈ ಮನೆಯನ್ನು ಅವಳ ಸ್ಮಾರಕವಾಗಿ ಪರಿವರ್ತಿಸಲಾಯಿತು. ಎರಡು ಅಂತಸ್ತಿನ ಈ ಕಟ್ಟಡದಲ್ಲಿ ಕೆಳಗಡೆ ಒಂದು ಮಕ್ಕಳ ಗ್ರಂಥಭಂಡಾರವಿದೆ. ಮೇಲ್ ಮಹಡಿಯಲ್ಲಿರುವ ಒಂದು ಕೊಠಡಿಯಲ್ಲಿ ಕ್ಲಾರಾ ಬಳಸುತ್ತಿದ್ದ ಪೀಠೋಪಕರಣಗಳಿವೆ. ಆದರೆ ಈ ಕೊಠಡಿಗೆ ಯಾರಿಗೂ ಪ್ರವೇಶವಿಲ್ಲ. ಗಾಜಿನ ಬಾಗಿಲಿನಿಂದಲೇ ಒಳಗಿರುವ ವಸ್ತುಗಳನ್ನು ನೋಡಬಹುದು. ಪಕ್ಕದಲ್ಲಿರುವ ವಿಶಾಲ ಕೊಠಡಿಯಲ್ಲಿ ಕ್ಲಾರಾಳ ಜೀವನಕ್ಕೆ ಸಂಬಂಧಿಸಿದ ಘಟನಾವಳಿಗಳು, ಅವಳ ಸಮಕಾಲೀನ ಹೋರಾಟಗಾರರ ಪಟಗಳು ಮತ್ತು ಮಾಹಿತಿಗಳನ್ನು ಪ್ರದರ್ಶಿಸಲಾಗಿದೆ. ಈ ಕೊಠಡಿಯಲ್ಲಿ ವಾರಕ್ಕೊಮ್ಮೆ ಪ್ರತಿ ಸೋಮವಾರ ಮಹಿಳೆಯರು ಸೇರಿ ಸಭೆ ನಡೆಸಿಕೊಳ್ಳುವ ರೂಢಿಯಿದೆ. ನಾವು ಮ್ಯೂಸಿಯಂನಲ್ಲಿದ್ದಾಗಲೇ ಮಹಿಳೆಯರು ಒಬ್ಬೊಬ್ಬರಾಗಿ ಸೇರಲು ಪ್ರಾರಂಭಿಸಿದರು. ಮ್ಯೂಸಿಯಂನ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಮಹಿಳೆಯೊಂದಿಗೆ ಮಾತಾಡಿ, ನಾವು ಬಂದ ಉದ್ದೇಶ ತಿಳಿಸಿದಾಗ ಅವಳ ಮುಖದಲ್ಲಿ ಆಶ್ಚರ್ಯ ಕಾದಿತ್ತು. ಹೀಗೆ ಕ್ಲಾರಾಳನ್ನು ಹುಡುಕಿಕೊಂಡು ಈ ಸ್ಥಳಕ್ಕೆ ಬರುವವರು ತುಂಬಾ ಅಪರೂಪ ಎಂದಳು. ಕ್ಲಾರಾಳ ನಾಡಿನಲ್ಲಿ ಅವಳಿಗೊದಗಿದ ಸ್ಥಿತಿ ಕಂಡು ಮನಸ್ಸಿಗೆ ಬೇಸರವಾಗಿ ಹೊರಬಂದೆವು.




ಮ್ಯೂಸಿಯಂ : ಕ್ಲಾರಾ ೪ ವರ್ಷಗಳ ಕಾಲ ವಾಸವಾಗಿದ್ದ ಮನೆ

ಈ ಕಟ್ಟಡದ ಆವರಣದಲ್ಲಿಯೇ ಒಂದು ಉದ್ಯಾನವಿದೆ. ಅಲ್ಲಿ ನಿಂತಿರುವ ಕ್ಲಾರಾ ಮತ್ತು ರೋಸಾ ಲಕ್ಸೆಂಬರ್ಗ್‌ಳ ಪ್ರತಿಮೆಗಳಿವೆ. ಬರ್ಲಿನ್‌ನ ಪ್ರೊಫೆಸರ್ ಗೆರ್‌ಹಾರ್ಡ್ ಥೀಮ ಎಂಬ ಶಿಲ್ಪಿ ನಿರ್ಮಿಸಿದ ಪ್ರತಿಮೆಗಳಿವು. ಕ್ಲಾರಾ ಮತ್ತು ರೋಸಾ ಲಕ್ಸೆಂಬರ್ಗ್‌ಳ ಪ್ರತಿಮೆಗಳ ಜೊತೆಯಲ್ಲಿ ನಿಂತು ಫೋಟೋ ಕ್ಲಿಕ್ಕಿಸಿಕೊಂಡ ನಂತರ ಭಾರವಾದ ಮನಸ್ಸಿನಿಂದ ಹೊರಬಂದೆವು.

ಜರ್ಮನಿಯಲ್ಲಿ ಕ್ಲಾರಾಳ ನೆನಪನ್ನು ತರುವ ಮತ್ತೊಂದು ಸ್ಥಳವೆಂದರೆ ರೈಶ್‌ಸ್ಟಾಗ್. ಜರ್ಮನ್ ಇತಿಹಾಸದಲ್ಲಿಯೇ ಮಹತ್ವದ ಸ್ಥಾನ ಪಡೆದ ಈ ಜರ್ಮನ್ ಪಾರ್ಲಿಮೆಂಟ್ ಭವನಕ್ಕೂ ಕ್ಲಾರಾಳ ಬದುಕಿಗೂ ನಂಟಿದೆ. ಜರ್ಮನಿಯಲ್ಲಿರುವ ಇಂಡಾಲಜಿ ಪ್ರೊಫೆಸರ್ (ವಿವೇಕಾನಂದರನ್ನು ಕುರಿತು ಡಾಕ್ಟರೇಟ್ ಪಡೆದವರು) ಹಿಲ್‌ಟ್ರೂಡ್ ರುಸ್ತಾವ್ ನಮ್ಮೊಡನೆ ಇದ್ದು ಒಂದು ದಿನವಿಡೀ ಕಾಲ್ನಡಿಗೆಯಲ್ಲಿ ಬರ್ಲಿನ್‌ನನ್ನು ಸುತ್ತಿಸಿ ಪ್ರಮುಖ ಸ್ಥಳಗಳನ್ನು ಸುತ್ತಿಸುತ್ತಾ ಕೊನೆಗೆ ರೈಶ್‌ಸ್ಟಾಗ್ ನೋಡಲು ಕರೆದೊಯ್ದರು. ೧೯೩೩ರಲ್ಲಿ ಹಿಟ್ಲರನ ಅಟ್ಟಹಾಸ ತಾರಕಕ್ಕೇರಿದಾಗ ಈ ಭವನಕ್ಕೆ ಬೆಂಕಿ ಬಿದ್ದಾಗ ಹಿಟ್ಲರ್ ಅದಕ್ಕೆ ಕಮ್ಯುನಿಸ್ಟರನ್ನೇ ಕಾರಣವಾಗಿಸಿದ. ೧೯೪೫ರಲ್ಲಿ ಎರಡನೆಯ ಮಹಾ ಜಾಗತಿಕ ಯುದ್ಧ ಕೊನೆಗೊಂಡಾಗ ಅದರ ನೆನಪಿಗೆ ಸುತ್ತಿಗೆ-ಕುಡುಗೋಲಿನ ಬಾವುಟ ಕೈಯಲ್ಲಿ ಹಿಡಿದ ಕೆಂಪು ಸೇನೆಯ ಯೋಧನೊಬ್ಬನ ಚಿತ್ರವನ್ನು ರೈಶ್‌ಸ್ಟಾಗ್‌ನ ಮೇಲ್ಛಾವಣಿಯಲ್ಲಿ ಪ್ರದರ್ಶಿಸಲಾಗಿದೆ.




ನನ್ನ ತಲೆ ಸೈಜಿನೊಂದು ಹೆಲ್ಮೆಟ್ ಕೊಡಿ



*ರಾಯ್‌ಸ್ಟಗ್ : ಜರ್ಮನಿಯ ಪಾರ್ಲಿಮೆಂಟ್*

ರೈಶ್‌ಸ್ಟಾಗ್‌ನ ಮುಂದೆ ನಿಂತಾಗ ಸೋಶಿಯಲ್ ಡೆಮೊಕ್ರಟಿಕ್ ಪಕ್ಷದ ಹಿರಿಯ ಸಂಸತ್ ಸದಸ್ಯೆಯೂ ಅಧ್ಯಕ್ಷಳೂ ಆಗಿದ್ದ ಕ್ಲಾರಾ ಇಲ್ಲಿ ಮಾಡಿದ ಕೊನೆಯ ಭಾಷಣ ನೆನಪಾಯಿತು. ೧೯೩೯ರಲ್ಲಿ ಈ ರೈಶ್‌ಸ್ಟಾಗ್‌ನ ಅಧಿವೇಶನದಲ್ಲಿ ಜರ್ಮನಿಯ ಸಂಪನ್ಮೂಲಗಳು ನಾಶವಾದದ್ದರ ಬಗ್ಗೆ ಬಿಸಿ ಬಿಸಿ ಚರ್ಚೆ ನಡೆಯುತ್ತಿದ್ದುದರ ಸಂದರ್ಭ. ಆಗಿನ ಹಿಂದಿನ ಸಾಮ್ರಾಜ್ಯಶಾಹಿ ಅಧಿಕಾರದಲ್ಲಿದ್ದಾಗಿನ ಸಚಿವ ಹೆಫ್ರಿಚ್ ಮತ್ತು ಸದ್ಯದ ಅಧಿಕಾರದಲ್ಲಿದ್ದ ಡಾ॥ ವರ್ತ್ ಬಗ್ಗೆ ಪರಸ್ಪರ ಬಯ್ದಾಡಿ ಜಗಳವಾಡುತ್ತಿದ್ದಾಗ ವೇದಿಕೆಯೇರಿ ಕ್ಲಾರಾ ಮಾಡಿದ ದಾರ್ಶನಿಕನ ಮುನ್ನೋಟದ ಭಾಷಣ ಮನಸ್ಸಿನಲ್ಲಿ ಹಾದುಹೋಯಿತು : "ಕಾರ್ಮಿಕ ವರ್ಗಕ್ಕೆ ಬೂರ್ಷ್ವಾಗಳು ತಮ್ಮ ಶಸ್ತ್ರಾಸ್ತ್ರಗಳನ್ನು ಒಪ್ಪಿಸಿ ಶರಣಾಗಬೇಕು. ಎಲ್ಲರೂ ಮೈಬಗ್ಗಿಸಿ ದುಡಿಯಲೇಬೇಕಾದ ಸ್ಥಿತಿ ನಿರ್ಮಾಣವಾಗಬೇಕು. ದೇಶದ ವಿಶಾಲ ಭೂಮಿಯನ್ನು ರೈತರಿಗೆ ಹಂಚಬೇಕು." ಇದೇ ಸಭೆಯಲ್ಲಿ ಫ್ಯಾಸಿಸಂನ ಬಗ್ಗೆ ಅತ್ಯಂತ ಕಟುವಾಗಿ ಟೀಕೆ ಮಾಡಿದ್ದಳು.

ಜರ್ಮನಿಯ ಇಂದಿನ ರಾಜಕೀಯ ವಾತಾವರಣದಲ್ಲಿ ಅಲ್ಲಿನ ಕ್ರಾಂತಿಕಾರಿಗಳು ಜನಮಾನಸದಿಂದ ದೂರವಾಗಿ ಕೇವಲ ಮ್ಯೂಸಿಯಂ ಚಿತ್ರಗಳಾಗಿ ಉಳಿದಿರುವುದು ಮನಸ್ಸಿಗೆ ಖೇದವಾಗುತ್ತದೆ. 'ವಿಶ್ವ ಮಹಿಳಾ ದಿನಾಚರಣೆ'ಯ ಪರಿಕಲ್ಪನೆಯನ್ನು ರೂಪಿಸಿ, ಅದರ ಅನುಷ್ಠಾನಕ್ಕಾಗಿ ಒತ್ತಾಯಿಸಿ, ಅದು ವಿಶ್ವದ ಮಹಿಳೆಯರಿಗೆಲ್ಲಾ ಪಸರಿಸುವಂತೆ ಮಾಡಿದ ವಿಶ್ವ ಮಹಿಳಾ ಚಳುವಳಿಯ ಕನಸನ್ನು ಸಾಕಾರಗೊಳಿಸಿದ ಕ್ಲಾರಾಳ ನೆನಪನ್ನು ಮನಸ್ಸಿನಲ್ಲಿ ತುಂಬಿಕೊಳ್ಳಲು ಸಾಧ್ಯವಾದ ಸಾರ್ಥಕತೆಯೊಂದಿಗೆ ಈ ಪ್ರವಾಸ ಮುಗಿಸಿದೆ.

**ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್'
ಛತ್ರಂ ಬಾಕ್ಸ್, ಕೆಂಪೇಗೌಡ ನಗರ
ಗವೀಪುರಂ, ಬೆಂಗಳೂರು – ೫೬೦ ೦೧೯




# ಪಂಜುಹಿಡಿದು ಸಾಗಬೇಕು



ಉರಿವ ಪಂಜಿನಂಥ ಕವಿತೆಗಳನ್ನು
ಹಿಡಿದು ರಭಸದಿಂದ ಸಾಗಬೇಕು
ದಾಳಿ ಮಾಡಲು ಬರುವ ಮಾನವ ಮೃಗಗಳ
ಮೈತುಂಬಾ ಬರೆ ಎಳೆಯಬೇಕು
ಗಾಂಧಿ ಬುದ್ಧ ಬಸವ ತತ್ವಗಳಿಂದ
ಜೋಳಿಗೆ ತುಂಬಿಕೊಂಡು ಹೊರಟರೆ
ಕಪಿಗಳು ಮುಗಿಬಿದ್ದು ಮಣ್ಣಾಗಿಸುತ್ತವೆ
ಐಟಿಬಿಟಿಗಳ ಮೈ ಕಾವು
ಬುದ್ಧೋ ಧ್ಯಾನಗಳನ್ನು ಸುಡುತ್ತಿದೆ
ತಂಪು ಕನ್ನಡಕದೊಳಗಿಂದ ಗಾಂಧಿಗಿಂತ
ಗಾಡ್ಸೆಯೇ ಮುದ್ದು ಬರಿಸುವನು
ಬಸವಣ್ಣರ ಧವಲಗಿರಿಯನ್ನು
ರೆಸಾರ್ಟ್ ನಕ್ಷತ್ರಗಳು ಅಟ್ಟೋಡಿಸಿವೆ
ಕಾಯಕ ಜೀವಿಯ ಎದೆಹಾಡನ್ನು ಚಚ್ಚುತ್ತಿದೆ
ಕರ್ಮಣ್ಯೇ ವಾಧಿಕಾರಸ್ತೇ ಎಂಬ ಘೀಳು !
ಸದಾ ಸನಾತನ ಶಿಶಿರದಲ್ಲಿರುವ ಧರ್ಮಾಂಧರದು
ಹುಚ್ಚು ನಾಯಿಗಳಷ್ಟೇ ಆಕ್ರಮಣ ಗುಣ
ಹಾಗಾಗಿ ಅಕ್ಷರಗಳು ಬೆಂಕಿಯುಂಡೆಗಳಂತಿರಬೇಕು
ಮತದಾನ ಭಾರೀ ಮದುವೆಯಂತೆ
ಮತದಾರರು ಕಂಡವರು ಉಂಡ ಎಲೆ ಎತ್ತುವವರಂತೆ
ಹಕ್ಕಿನೂಟಕ್ಕೆ ಬದಲು ಕೊನೆಪಂಕ್ತಿ ಕರುಣೆಗೆ ಕಾಯುತ್ತಿದ್ದಾರೆ
ಚುರುಕು ಮುಟ್ಟಿಸದಿದ್ದರೆ ಯಾರೂ ಚೀರುವುದಿಲ್ಲ
ನಿದ್ರೆಯಿಂದಲೇಳುವುದಿಲ್ಲ !
ಅದಕ್ಕಾಗಿಯೇ ಹೇಳಿದ್ದು
ಕಾವ್ಯಗಳು ಉರಿವ ಪಂಜುಗಳಂತಿರಬೇಕು
ಹೆಜ್ಜೆಗಳು ಭೂಮಿ ಗುದ್ದಿ
ಪ್ರೇಮಜಲ ಹೊರಹೊಮ್ಮುವ ತನಕ
ಆರದ ಸೂರ್ಯಮುಖೀ ಪಂಜುಗಳಂತಿರಬೇಕು !

**ಕೆ. ವಿ. ಚಂದ್ರಜ್ಯೋತಿ**
ಪಿ–೨೬, ತೋಟಗಾರಿಕೆ ಇಲಾಖೆ ರಸ್ತೆ
ಎಸ್. ಎಸ್. ಪುರಂ
ತುಮಕೂರು – ೫೭೨ ೧೦೨



# ಉತ್ತರ ಕೊರಿಯಾ : ನ್ಯೂಕ್ಲಿಯರ್ ಅಸ್ತ್ರ ಎಷ್ಟು ಸುರಕ್ಷಿತ

**ಉ**ತ್ತರ ಕೊರಿಯಾ ಏಷ್ಯಾ ಖಂಡದ ಪೂರ್ವಕ್ಕಿರುವ ಪರ್ಯಾಯ ದ್ವೀಪದ ಉತ್ತರದ ಅರ್ಧ ಭಾಗ. ಸುಮಾರು ಎರಡೂವರೆ ಕೋಟಿ ಜನಸಂಖ್ಯೆಯ ಈ ಪುಟ್ಟ ದೇಶ ಇದೀಗ ದೊಡ್ಡ ಸುದ್ದಿ ಮಾಡಿದೆ, ಸದ್ದೂ ಮಾಡಿದೆ. ಏಷ್ಯಾ ಖಂಡದಲ್ಲಿ ಜಲಜನಕ ಬಾಂಬು ಹೊಂದಿರುವ ಎರಡನೇ ದೇಶ ಇದು. ಚೀಣಾದ ಗಡಿಗೆ ಅಂಟಿಕೊಂಡಿರುವ ಈ ದೇಶದ ದಕ್ಷಿಣದಲ್ಲಿರುವುದು ದಕ್ಷಿಣ ಕೊರಿಯಾ. ಎರಡೂ ದೇಶಗಳು ಶೀತಯುದ್ಧದ ಸೃಷ್ಟಿ. ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ ಜಪಾನಿನ ವಸಾಹತು ಆಗಿದ್ದ ಈ ಪರ್ಯಾಯ ದ್ವೀಪ ಇಬ್ಭಾಗವಾದದ್ದು ಎರಡನೇ ಮಹಾಯುದ್ಧದ ನಂತರ. ಉತ್ತರ ಭಾಗವನ್ನು ಸೋವಿಯತ್ ರಷ್ಯ ಆಕ್ರಮಿಸಿಕೊಂಡು ಕಮ್ಯುನಿಸ್ಟ್ ಸರಕಾರ ಸ್ಥಾಪಿಸಿದರೆ, ಅಮೆರಿಕ ಆಕ್ರಮಿಸಿಕೊಂಡ ದಕ್ಷಿಣ ಭಾಗ ಬಂಡವಾಳಶಾಹಿ ಸರಕಾರ ಹೊಂದಿತು. ವಿಶ್ವಸಂಸ್ಥೆಯ ನಿರ್ಣಯದ ಪ್ರಕಾರ ಎರಡೂ ಒಂದಾಗಬೇಕಾಗಿತ್ತು. ಆದರೆ ಎಪ್ಪತ್ತು ವರ್ಷಗಳಿಂದ ಪ್ರತ್ಯೇಕವಾಗಿಯೇ ಉಳಿದಿವೆ. ಶೀತಯುದ್ಧದ ಪರೋಕ್ಷ ಯುದ್ಧಕ್ಕೆ ಮೊದಲ ಬಲಿಪಶುವಾದ ಉತ್ತರ ದಕ್ಷಿಣ ಕೊರಿಯಾಗಳು ಬದ್ಧದ್ವೇಷಿಗಳಾಗಿಯೇ ಉಳಿದಿವೆ. ಆಗಾಗ ಎರಡೂ ಭಾಗಗಳ ಮಧ್ಯೆ ಸಶಸ್ತ್ರ ಘರ್ಷಣೆಗಳು ನಡೆಯುತ್ತಲೇ ಇರುತ್ತವೆ. ಹಲವು ದಶಕಗಳಿಂದ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳ ಆರ್ಥಿಕ ದಿಗ್ಬಂಧನಕ್ಕೊಳಗಾಗಿರುವ ಉತ್ತರ ಕೊರಿಯಾ ನ್ಯೂಕ್ಲಿಯರ್ ಶಕ್ತ ರಾಷ್ಟ್ರವಾಗಿ ಬೆಳೆದಿರುವುದು ವಿಸ್ಮಯಕಾರಿ ಸಂಗತಿ. ದುಬಾರಿ ವೆಚ್ಚದ ಇಂಥ ಸಾಹಸ ಪ್ರವೃತ್ತಿಗೆ ಬೇಕಾದ ತಂತ್ರಜ್ಞಾನ ಹಾಗೂ ಇನ್ನಿತರ ಪರಿಕರಗಳು ಈ ಬಡರಾಷ್ಟ್ರಕ್ಕೆ ಇದೆಯೇ ಎಂಬ ಸಂದೇಹ ಕಾಡದಿರದು. ಆದರೂ ಅದು ನಿಜ. ದೇಶ ರಕ್ಷಣೆಗಾಗಿ ಅನಿವಾರ್ಯ ಎನ್ನುವುದು ಉತ್ತರ ಕೊರಿಯಾದ ನಾಯಕರ ವಾದ. ಇದು ಎಷ್ಟು ಮಟ್ಟಿಗೆ ಸಮರ್ಥನೀಯ ಎನ್ನುವುದೇ ಪ್ರಶ್ನೆ.

ಅಮೆರಿಕ ಶಾಂತಿ ಒಪ್ಪಂದಕ್ಕೆ ಬರುವವರೆಗೆ ಉತ್ತರ ಕೊರಿಯಾ ನ್ಯೂಕ್ಲಿಯರ್ ಅಸ್ತ್ರಗಳ ಪ್ರಯೋಗಗಳನ್ನು ನಡೆಸುತ್ತಿರುವುದು ಎಂಬುದಾಗಿ ವರದಿಯಾಗಿದೆ. ೧೯೯೦ರಲ್ಲಿ ಅಮೆರಿಕ ಆರ್ಥಿಕ ದಿಗ್ಬಂಧನವನ್ನು ತೆರವುಗೊಳಿಸಿದರೆ ನ್ಯೂಕ್ಲಿಯರ್ ಪ್ರಯೋಗ ನಿಲ್ಲಿಸುವುದಾಗಿ ಉತ್ತರ ಕೊರಿಯಾ ಹೇಳಿತ್ತು. ೧೯೯೪ರಲ್ಲಿ ಅಮೆರಿಕದೊಂದಿಗೆ ಒಪ್ಪಂದವೂ ಆಗಿತ್ತು. ಆದರೆ ಅಮೆರಿಕದಲ್ಲಿ ಜಾರ್ಜ್ ಬುಷ್ ಅಧ್ಯಕ್ಷರಾದ ಮೇಲೆ ಪರಿಸ್ಥಿತಿ ಬಿಗಡಾಯಿಸಿ ಒಪ್ಪಂದ ಮುರಿದುಬಿತ್ತು. ೨೦೦೬ರಲ್ಲಿ ಉತ್ತರ ಕೊರಿಯಾ ಮೊದಲ ನ್ಯೂಕ್ಲಿಯರ್ ಪ್ರಯೋಗ ನಡೆಸಿತು. ೨೦೦೯ರಲ್ಲಿ ಎರಡನೇ ಪ್ರಯೋಗ ನಡೆಸಿತು. ಈಗ ೨೦೧೬ರಲ್ಲಿ ಅದು ಜಲಜನಕ ಬಾಂಬು ಪ್ರಯೋಗ ನಡೆಸಿರುವುದಾಗಿ ಪ್ರಕಟಿಸಿದೆ. ೨೦೧೫ರ ಸೆಪ್ಟೆಂಬರ್ ತಿಂಗಳಲ್ಲಿ ಅಮೆರಿಕ – ದಕ್ಷಿಣ ಕೊರಿಯಾಗಳು ಕೊರಿಯಾ ಪರ್ಯಾಯ ದ್ವೀಪದ ಬಳಿ ನಡೆಸಿದ ಜಂಟಿ ಸಮರಾಭ್ಯಾಸದ ನಂತರವೇ ಉತ್ತರ ಕೊರಿಯಾ ಜಲಜನಕ ಬಾಂಬು ಸ್ಫೋಟದ ಸುದ್ದಿ ಪ್ರಕಟಿಸಿದ್ದು, ದಕ್ಷಿಣ ಕೊರಿಯಾದಲ್ಲಿ ಅಮೆರಿಕ ಹದಿನೈದು ಮಿಲಿಟರಿ ನೆಲೆಗಳನ್ನು ಹೊಂದಿದ್ದು, ಖಾಯಂ ಆಗಿ ೨೫,೦೦೦ ಸೈನಿಕರನ್ನು ಇರಿಸಿಕೊಂಡಿದೆ. ನ್ಯೂಕ್ಲಿಯರ್ ಅಸ್ತ್ರ ರಕ್ಷಣೆಯ ಭರವಸೆಯನ್ನೂ ನೀಡಿದೆ.

ಇಂದಿನ ದಿನಗಳಲ್ಲಿ ನ್ಯೂಕ್ಲಿಯರ್ ತಂತ್ರಜ್ಞಾನ ವ್ಯಾಪಕವಾಗಿ ಲಭ್ಯವಿದೆ. ಹಣದ ಬೆಂಬಲ ಇರುವ ಯಾವುದೇ ದೇಶವಾಗಲಿ ನ್ಯೂಕ್ಲಿಯರ್ ಅಸ್ತ್ರ ತಯಾರಿಸಬಹುದಾಗಿದೆ. ಅತ್ಯಂತ ದುಬಾರಿಯಾಗಿರುವ ಈ ಮಾರಕಾಸ್ತ್ರ ಪಡೆದುಕೊಳ್ಳುವುದರಿಂದ ಭದ್ರತೆ ಇರುತ್ತದೆ ಎಂಬುದು ಒಂದು ಭ್ರಮೆ. ಜಗತ್ತಿನ ಕೆಲವು ರಾಷ್ಟ್ರಗಳು ನ್ಯೂಕ್ಲಿಯರ್ ಅಸ್ತ್ರ ಹೊಂದಿರುವುದು, ಅದನ್ನು ನಿರಂತರವಾಗಿ ಅಭಿವೃದ್ಧಿಗೊಳಿಸುತ್ತಿರುವುದು ವಾಸ್ತವ ಸಂಗತಿ. ಉತ್ತರ ಕೊರಿಯಾ ಕೂಡ ಭದ್ರತೆಯ ಭರವಸೆಯಲ್ಲಿ, ಎದುರಾಳಿ ಅಮೆರಿಕಾವನ್ನು ಮಣಿಸುವ ಗುರಿಯಿಂದ ಜಲಜನಕ ಬಾಂಬು ಹಾಗೂ ಕ್ಷಿಪಣಿಗಳನ್ನು ವೃದ್ಧಿಗೊಳಿಸಿದೆ. ತನ್ನ ಜನತೆಯ ಅಭಿವೃದ್ಧಿಯನ್ನು ಕಡೆಗಣಿಸಿ ಇಂಥ ದುಂದುಗಾರಿಕೆಯಲ್ಲಿ ಅದು ತೊಡಗಿರಲು ಸಾಕು. ಉತ್ತರ ಕೊರಿಯಾದ ಈ ದುಸ್ಸಾಹಸವನ್ನು ಎಲ್ಲ ದೇಶಗಳೂ ಖಂಡಿಸಿವೆ. ಆತಂಕ ವ್ಯಕ್ತಗೊಳಿಸಿವೆ. ಹಿಂದಿನಂತೆ ಅಲ್ಲದಿದ್ದರೂ ಒಂದಷ್ಟು ಬೆಂಬಲ ನೀಡುತ್ತಿರುವ ರಷ್ಯ, ಚೀಣಾಗಳೂ ಕೂಡ ಈ ಬಗ್ಗೆ ಕಳವಳ ವ್ಯಕ್ತಗೊಳಿಸಿವೆ. ವಿಶ್ವಸಂಸ್ಥೆ ಕೂಡ ಜಲಜನಕ ಬಾಂಬು ಪ್ರಯೋಗವನ್ನು ಖಂಡಿಸಿದೆ.

ಎರಡನೇ ಮಹಾಯುದ್ಧ ಮುಕ್ತಾಯ ಘಟ್ಟದಲ್ಲಿದ್ದಾಗ, ಸೋಲಿನ ಅಂಚಿನಲ್ಲಿದ್ದ ಜಪಾನಿನ ಪ್ರಾಂತಗಳ ಮೇಲೆ ಪರಮಾಣು ಬಾಂಬು ದಾಳಿ ನಡೆಸಿದ ಮೊದಲ ದೇಶ ಅಮೆರಿಕ ಎಂಬುದನ್ನು ಮರೆಯದಿರೋಣ. ಭಯಾನಕವಾದ ಈ ಅಸ್ತ್ರದ ಪೈಪೋಟಿಯನ್ನು ಪ್ರಾರಂಭಿಸಿದ್ದು ಕೂಡ ಅಮೆರಿಕವೆ. ಇಂದು ಭಾರತ, ಪಾಕಿಸ್ತಾನ, ಇಸ್ರೇಲ್‌ಗಳನ್ನು ಒಳಗೊಂಡಂತೆ ಒಂಬತ್ತು ದೇಶಗಳು ನ್ಯೂಕ್ಲಿಯರ್ ಅಸ್ತ್ರ ಹೊಂದಿವೆ. ಇಪ್ಪತ್ತೊಂಬತ್ತು ದೇಶಗಳಿಗೆ ಅಮೆರಿಕ ನ್ಯೂಕ್ಲಿಯರ್ ಅಸ್ತ್ರದ ರಕ್ಷಣೆ ಒದಗಿಸಿದೆ. ಬೇರಾವ ದೇಶವೂ ನ್ಯೂಕ್ಲಿಯರ್ ಅಸ್ತ್ರ ಹೊಂದದಂತೆ ನೋಡಿಕೊಳ್ಳಲು ಅಣ್ವಸ್ತ್ರ ಪ್ರಸರಣ ನಿಷೇಧ ಒಪ್ಪಂದವೊಂದು ವಿಶ್ವಸಂಸ್ಥೆಯ ಆಶ್ರಯದಲ್ಲಿ ಜಾರಿಯಲ್ಲಿದೆ. ಹಾಗೆಯೇ ನ್ಯೂಕ್ಲಿಯರ್ ಅಸ್ತ್ರ ಪ್ರಯೋಗಗಳ ನಿಷೇಧ ಒಪ್ಪಂದವೂ ಅಮಲಿನಲ್ಲಿದೆ. ಅಮೆರಿಕ ಇವತ್ತಿನವರೆಗೆ ಅಣ್ವಸ್ತ್ರ ಪ್ರಯೋಗಗಳ ನಿಷೇಧ ಒಪ್ಪಂದಕ್ಕೆ ಸಹಿ ಹಾಕಿಲ್ಲ. ಇಂದಿಗೂ ಅದು ನ್ಯೂಕ್ಲಿಯರ್ ಅಸ್ತ್ರಗಳನ್ನು ಅಭಿವೃದ್ಧಿಗೊಳಿಸಲು ಪ್ರತಿವರ್ಷ ಒಂದು ಟ್ರಿಲಿಯನ್ ಡಾಲರುಗಳನ್ನು ವಿನಿಯೋಗಿಸುತ್ತಿದೆ. ಅಂದರೆ ಅರ್ಥಾತ್ ಈ ವಿನಾಶಕಾರಿ ಅಸ್ತ್ರಗಳ ಪೈಪೋಟಿ ಮುಂದುವರಿಯುತ್ತಿದೆ ಎಂದಾಯಿತು. ಇಂದು ಪ್ರಪಂಚದಲ್ಲಿ ದಾಸ್ತಾನಿರುವ ನ್ಯೂಕ್ಲಿಯರ್ ಅಸ್ತ್ರಗಳು ಈ ಭೂಮಂಡಲವನ್ನು ಹಲವು ಪಟ್ಟು ಧೂಳೀಪಟ ಮಾಡಲು ಸಾಕು. ಎಲ್ಲಿಯವರೆಗೆ ಈ ಮಾರಕಾಸ್ತ್ರಗಳ ಸಂಪೂರ್ಣ ನಿಷೇಧ ಇಲ್ಲವೊ ಅಲ್ಲಿಯವರೆಗೆ ಅಪಾಯ ಕಟ್ಟಿಟ್ಟ ಬುತ್ತಿ. ಪ್ರಪಂಚದಲ್ಲಿ ಹೆಚ್ಚುತ್ತಿರುವ ಭಯೋತ್ಪಾದನಾ ಕೃತ್ಯಗಳು ಸೃಷ್ಟಿಸಿರುವ ಆತಂಕದ ಇಂದಿನ ದಿನಗಳಲ್ಲಿ, ಅಂಥ ತಂಡಗಳು ನ್ಯೂಕ್ಲಿಯರ್ ಅಸ್ತ್ರ ಪಡೆದುಕೊಳ್ಳಬಹುದಾದ ಸಂಭವ ಇಲ್ಲದಿಲ್ಲ. ಹಾಗಿರುವಾಗ ಇಂಥ ಅಸ್ತ್ರಗಳ ಸಂಪೂರ್ಣ ನಿಷೇಧಕ್ಕಾಗಿ ಪ್ರಪಂಚದಾದ್ಯಂತ ಜನಾಂದೋಳನ ನಡೆಸುವುದು ಅನಿವಾರ್ಯವಾಗಿದೆ. ಉತ್ತರ ಕೊರಿಯಾದ ನ್ಯೂಕ್ಲಿಯರ್ ಪ್ರಯೋಗವನ್ನು ಈ ಹಿನ್ನೆಲೆಯಲ್ಲಿ ನೋಡಬೇಕು.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು – ೫೬೦ ೦೮೫









ಲೇಖಕರು : **ಡಾ॥ ಎಚ್. ಎಸ್. ಅನುಪಮಾ**
ಪುಟಗಳು : ೧೧೪+೪ ಬೆಲೆ : ರೂ. ೧೦೦/-
ಪ್ರಕಾಶಕರು : **ರಾಘವೇಂದ್ರ ಪ್ರಕಾಶನ**
ಅಂಬರಕೊಡ್ಲ, ಅಂಕೋಲಾ – ೫೮೧೩೧೪

# ಡಾ॥ ಎಚ್. ಎಸ್. ಅನುಪಮಾ ಅವರ 'ಸಹಗಮನ'

**ಡಾ॥** ಎಚ್. ಎಸ್. ಅನುಪಮಾ ಅವರದು ನಾನಾ ಬಗೆಯ ವ್ಯಕ್ತಿತ್ವ. ಇವರು ವೈದ್ಯೆಯಾಗಿ, ಕತೆಗಾರರಾಗಿ, ಕವಿಯಾಗಿ, ಅಂಕಣಕಾರರಾಗಿ, ಸಂಘಟಕರಾಗಿ, ಮಹಿಳಾ ಹಿತಚಿಂತಕರಾಗಿ, ವಿಮರ್ಶಕರಾಗಿ, ವಾಗ್ಮಿಯಾಗಿ ಪ್ರಸಿದ್ಧರು. ಅನುಪಮಾ ಅವರ 'ಸಹಗಮನ' ಕವಿತಾ ಸಂಕಲನವು ೨೦೧೫ರಲ್ಲಿ ರಾಘವೇಂದ್ರ ಪ್ರಕಾಶನ, ಅಂಕೋಲಾದಿಂದ ಪ್ರಕಟವಾಗಿದೆ. ಇದರಲ್ಲಿ ಒಟ್ಟು ನಲವತ್ತೆಂಟು ಕವಿತೆಗಳಿವೆ. ಸಹಗಮನ ಧ್ವನಿಪೂರ್ಣವಾದ ಶೀರ್ಷಿಕೆಯಾಗಿದ್ದು, ಸಹಗಮನವೆಂದರೆ ಪತಿಯೊಂದಿಗೆ ಜೊತೆಯಾಗಿ ಒಂಟಿಯಾಗಿ, ತ್ಯಾಗಿಯಾಗಿ ಬಾಳುವುದು ಎಂಬ ಅರ್ಥ ಮುಖ್ಯವೆನಿಸುತ್ತದೆ. ಜೀವನಾನುಭವ ಸುತ್ತುವರಿದ ಪರಿಸರದಲ್ಲಿ ಆಕೃತಿ ಪಡೆಯುವ ಕವಿತೆಗಳು ಕವಯತ್ರಿಯ ಪ್ರತಿಭೆ ಬಲಿತಿರುವುದನ್ನು ಹೇಳುತ್ತದೆ. ಕವಯತ್ರಿ ಹೇಳುವಂತೆ "ಈ ಸಂಕಲನದಲ್ಲಿ ಆರಂಭದ ಅರ್ಪಣಾ ಲಹರಿಯ ಪ್ರೇಮಕವನಗಳ ಸಂಖ್ಯೆ ಹೆಚ್ಚಿದ್ದರೂ ತಾಯ್ತನದ ಅನುಭವ ಹೇಳುವ, ಸದ್ದಿಲ್ಲದೆ ಜಗಳಕ್ಕೆ ಕರೆವ ಕವನಗಳೂ ಇವೆ. ನನ್ನ ತಡೆದುಕೊಂಡ ಬೆಳೆಸಿದ ಸಾಂಗತ್ಯಕ್ಕೆ ಇವು ಸಲ್ಲುತ್ತದೆ" ಎಂಬ ಮಾತು ಕವಯತ್ರಿಯ ಆತ್ಮಚರಿತ್ರೆಯ ಒಳನೋಟದ ಬಿಂಬಗಳಿರುವುದನ್ನು ತಿಳಿಸುತ್ತದೆ.

'ನೀರು ಕುದಿಯಬೇಕು ಎಂದರೆ ನೀರು ತುಂಬಿದ ಪಾತ್ರೆಯೂ ಸುಡಬೇಕು'; ಕುದಿದ ನೀರು ಆರೋಗ್ಯದ ಪ್ರತೀಕವಾಗಿರುವುದರ ಜೊತೆಗೆ ಕುದಿದು ಬೆಂದು ಪಾಕವಾದ ಬದುಕು ಗಟ್ಟಿತನದ ಪ್ರೌಢತೆಯ ಪ್ರತಿಮೆಯಾಗಿ ಬದುಕಿನಲ್ಲಿ ನೊಂದು ಬೆಂದು ಪರಿತಪಿಸಿ ಬೆವರು ಸುರಿಸಿದ ಜೀವನಾನುಭವವು ಆತ್ಮವಿಕಾಸದ ಪ್ರತೀಕವಾಗಿ ನಿಲ್ಲುತ್ತದೆ. ನೋವಿನ ಕಾವಿನಿಂದ ಅರಳಬೇಕು ಎನ್ನುವುದಕ್ಕೆ 'ಕುದಿ' ಕವನ ಸಾಕ್ಷಿಯಾಗಿ ನಿಲ್ಲುತ್ತದೆ. ಸೂರ್ಯನ ಮೊಗ ಕೆಂಪಾಗಿಯೇ ದಿನ ಶುರುವಾದರೂ ತಂಗಾಳಿಯಾಗಿ, ಮಂಜುಹನಿಯಾಗಿ, ಸೋನೆಮಳೆಯಾಗಿ, ಹೂವಾಗಿ, ಚಿಗುರಾಗಿ, ಚಿಲುಮೆಯಾಗಿ, ತಂಪಿನ ಇರುಳಾಗಿ ಶಾಂತಗೊಳ್ಳುವುದನ್ನು ಚಿತ್ರಿಸುತ್ತದೆ. ಮನುಷ್ಯ ಪ್ರವೃತ್ತಿ ರೂಪಕವು ಕವನವನ್ನು ಕಲಾಕೃತಿಯನ್ನಾಗಿಸಿದೆ. ಹೆಂಡತಿಯೊಂದಿಗೆ ಮುನಿಸಿಕೊಳ್ಳುವ ಗಂಡಂದಿರ ನಡಾವಳಿಗೆ ಈ ಸಾಲುಗಳು ಕನ್ನಡಿ ಹಿಡಿಯುತ್ತವೆ. ಸಿಟ್ಟಿನಿಂದ ಎದ್ದವನು ಮತ್ತೆ ಉನ್ಮತ್ತನಾಗಿ ಹಿಂದಿರುಗಿ ದಿನ–ಋತು–ವರ್ಷಗಳ ದಿನ – ರಾತ್ರಿಗಳಲ್ಲಿ ಉಕ್ಕುತ್ತ ಬರಿದಾಗುತ್ತ, ಹೊಸ ಕಾವ್ಯ ಕಟ್ಟುತ್ತ ಪ್ರೀತಿಯ ಮಮತೆಯನ್ನು ಕಾಪಿಟ್ಟುಕೊಳ್ಳುವ ಪರಿ ಕಾವ್ಯಾತ್ಮಕವಾಗಿ ಹೆಣೆಯಲ್ಪಟ್ಟಿದೆ. ಪ್ರೀತಿಯ ಮುಂದೆ ಸಿಟ್ಟು ಗೌಣವಾಗಿ ಪರಸ್ಪರ ಒಂದಾಗುವ ಪರಿ ಕೆನೆಗಟ್ಟಿದೆ. ಹಕ್ಕಿ ಹನಿ ನೀರಿಗಾಗಿ ಪರಿತಪಿಸುತ್ತದೆ. 'ಚರಿತ್ರೆಯೆಂದರೆ ಮುಳುಗಿಹೋದ ಹಡಗಿನ ತೇಲುವ ಹಲಗೆಗಳ ಕೂಡಿಸಿ ಊಹಿಸುವ ಕೆಲಸ... ನಿನ್ನೆಯ ಸುಳ್ಳುಕತೆಗೆ ಹೊಸಬಣ್ಣ ತುಂಬಿ ಕೋಲೂರಿ ನಾಳೆಗೆ ದಾಟಿಸುತ್ತವೆ...' ಎಂಬ ಮಾತು ನಮ್ಮ ಚರಿತ್ರೆಯು ನಿಜದ ನೆಲೆಯನ್ನು ಹೇಳದೆ ಸುಳ್ಳನ್ನು ಹೇಳುವುದರ ಬಗ್ಗೆ ತಣ್ಣನೆಯ ಪ್ರತಿಭಟನೆಗಳಿವೆ. ರಾಜಮಹಾರಾಜರನ್ನು ವೈಭವಿಸಿ ಬರೆದ ಈ ಇತಿಹಾಸವು ನೊಂದು ಬೆಂದವರ ಕಥೆಯನ್ನು ಹೇಳದ ಅವಾಸ್ತವಿಕತೆಯ ಇತಿಹಾಸ ಎಂದು ವಿಷಾದಿಸುತ್ತಾರೆ.

'ಸರಳರೇಖೆಯಲ್ಲದ ವರ್ತುಲಪ್ರೇಮದ ಪರಿಮಳವನ್ನು ನಿನಗೆ ಕೊಡಲಾರದೆ ಬಚ್ಚಿಟ್ಟುಕೊಳ್ಳಲಾರೆ ನಿನ್ನ ಖಾತರಿಸುವಿಕೆಗೆ ಸದಾ ತೆರೆದು ಮೊಗೆಮೊಗೆದು ಕೊಡುತ್ತೇನೆ' ಎಂಬ ಮಾತು ಎಂಥವರನ್ನಾದರೂ ಭಾವಪರವಶಗೊಳಿಸುವಂತಿದೆ. ಎಷ್ಟು ಕೊಟ್ಟರೂ ಖಾಲಿಯಾಗದ ಪ್ರೀತಿ ಸದಾ ಹಂಚುತ್ತಲೇ ಇರಬೇಕು ಎಂಬ ಜೀವಂತಿಕೆಯ ಪ್ರತೀಕಗಳು ಸಾಂಗತ್ಯದ ಪಾಠವನ್ನು ಬೋಧಿಸುತ್ತದೆ.

*ಸಂಕೋಚದ ಪೊರೆ ಕಳಚಿ, ಪಕ್ಕನೊಮ್ಮೆ ನಕ್ಕುಬಿಡು*
*ಅದುವೆ ಸಾವಿರ ಮಾತು, ಪೋಲಾಗದು ಪೊಳ್ಳಾಗದು*
*ಮೂಕಪ್ರೇಮ*

– ಎಂದು ಕರೆ ಕೊಡುವ ಈ ಸಾಲುಗಳು ಪ್ರೀತಿ ಮಾಡುವ ಮನಸ್ಸುಗಳಿಗೆ ದಿಕ್ಸೂಚಿಯಾಗಬಲ್ಲ ಸೂಕ್ತಿಯಂತಿವೆ. ಚಲಿಸುವ ಭೂಮಿಯ ಮೇಲೆ ಪತನಗೊಳ್ಳದೆ ಇರುವ ವಸ್ತು 'ಪ್ರೀತಿ' ಮಾತ್ರ ಎಂಬ ನಿಲುವಿನಲ್ಲಿ ಸತ್ಯವಿದೆ. ಇದು ಜೀವದ ಉಸಿರಾಗಿ ಕಾಡುವ ಪರಿ ಶಬ್ದಾತೀತವಾದದ್ದು. ತನ್ನತನವನ್ನು ಪ್ರೀತಿಯ ಸೆರೆಯಲ್ಲಿ ಸೆಳೆಯುವ, ಮನುಷ್ಯ ಸಂಬಂಧದ ಅಡ್ಡಗೋಡೆಯನ್ನು ಕೆಡವಿ ಸಂಬಂಧವನ್ನು ಬಲಪಡಿಸಲು ಮದ್ದಾಗುವ ಶಕ್ತಿಯನ್ನು ಹೊಂದಿದೆ.

ಮಗುವಿನ ಬರ್ತಡೇಗೆಂದು ಹೊಸ ಬಟ್ಟೆ, ಆಟಿಕೆ ಏನನ್ನಾದರೂ ಕೊಳ್ಳಬೇಕೆಂದು ಹೋದಾಗ ಬೆಲೆ ಏರಿಕೆಯಿಂದ ತತ್ತರಿಸಿ ತನ್ನ ಬೆವರ ಸುರಿಸಿ ತಂದ ನೋಟು ಕೊಡಲಾಗದೆ, ಕೊಳ್ಳಲಾಗದೆ, ನೋಟುಗಳಲ್ಲಿ ಗಾಂಧೀ ಅಳುತ್ತಿದ್ದಾನೆ ಎಂದು ಧ್ವನಿಪೂರ್ಣವಾಗಿ ವರ್ತಮಾನದ ಬೆಲೆ ಏರಿಕೆಯನ್ನು ಖಂಡಿಸುತ್ತಾರೆ. 'ಗಡಿಯಾರ' ಕವಿತೆಯು ಬದುಕಿನಲ್ಲಿ ಸಮಯಕ್ಕಾಗಿ ಯಾರೂ ಯಾರಿಗೂ ಕಾಯದೆ ಆಯಾಯ ಕೆಲಸ ಕಾರ್ಯಗಳು ನಿತ್ಯವೂ ಸಾಗುತ್ತಿರುತ್ತವೆ. ಇದು 'ಕ್ರಿಯಾಶೀಲವೇ ಜೀವನ ಕ್ರಿಯಾಹೀನವೇ ಮರಣ' ಎಂಬ ಮಾತನ್ನು ನೆನಪಿಸುವುದರೊಂದಿಗೆ ಹೆಣ್ಣಿನ ಬದುಕಿನ ಆಯಾಮಗಳನ್ನು ಮುಖಾಮುಖಿಗೊಳಿಸುತ್ತದೆ. ನೀರೇ ಜೀವಜಲದ ಅಮರಪ್ರೇಮದ ಗುಂಗಾಗಿ ಶೃಂಗಾರರಸದ ಚಿಲುಮೆಯಾಗಿ ಸಹೃದಯರನ್ನು ಸೆಳೆಯುತ್ತವೆ.

'ರಸ್ತೆ ಮತ್ತು ನಾನು' ಕವಿತೆಯು ಹಾದಿಯಲ್ಲಿ ಸಾಗುವಾಗ ತೂಗುವ ತೆನೆಯನ್ನು ನೋಡಿ ಕಣ್ ತುಂಬಿಕೊಂಡರೂ ರಸ್ತೆಯಲ್ಲಿ ಓಡಾಡುವ ಜನ ಅದೂ ತನ್ನ ಪೈರು ಎಂದು ಹಕ್ಕು ಸಾಧನೆಯ ಮಾತನ್ನಾಡುವುದನ್ನು ಕೇಳಿ ಅವರ ಮುಗ್ಧತೆಗೆ ಮರುಗುವುದನ್ನು ಕಾಣುತ್ತೇವೆ. ಕವಯತ್ರಿಗೆ ಪ್ರಕೃತಿಯಲ್ಲಿ ಅರಳಿನಿಂತ ಫಸಲಿಗಿಂತ ಪ್ರೀತಿಯ ಜೀವವೇ ಹೆಚ್ಚಾಗಿ ಕಂಡಿದೆ. ಈ ಭೂಮಂಡಲದಲ್ಲಿ ಯಾವುದಕ್ಕೂ 'ಅಳಿವು' ಎಂಬುದಿಲ್ಲ, ತುಂಡುಬಟ್ಟೆಯನ್ನು ಬತ್ತಿಯನ್ನಾಗಿಸಿ ದೀಪ ಬೆಳಗಿ ಕತ್ತಲೆಯನ್ನು ಓಡಿಸಬಹುದು. ಕಸದಲ್ಲಿಯೂ ರಸವನ್ನು ಕಾಣುವ ಮನೋಗುಣದೊಂದಿಗೆ ಯಾವುದೂ ನಿರುಪಯುಕ್ತ ಎಂಬುದಿಲ್ಲ, ಅರಿತು

**ಡಾ॥ ಸುರೇಶ ನಾರಾಯಣ ನಾಯ್ಕ**

ಮರುಉಪಯೋಗಿಸಿದಲ್ಲಿ ಅದು ಉಪಯುಕ್ತವಾದದ್ದೆ ಎಂಬ ಸಲಹೆ ಇದೆ. 'ವಸಂತ' ಕವಿತೆಯಲ್ಲಿ ವಸಂತಮಾಸದ ಪ್ರಕೃತಿಯ ಸೊಬಗನ್ನು ಮೂರ್ತಗೊಳಿಸಿದ್ದಾರೆ. ಆಲಿಕಲ್ಲು ಕರಗುವ ಮುನ್ನವೇ ಮುಪ್ಪಾವರಿಸುತ್ತಿರುವ ಕವಯತ್ರಿ ತನ್ನ ಬೊಗಸೆಯಲ್ಲಿ ಪ್ರೇಮವನ್ನೇ ಹೊತ್ತುತಂದಂತಿದೆ. 'ಏನು ಬದಲಾಗಿದೆ?' ಎಂಬ ಕವಿತೆ ವರ್ತಮಾನದ ಟೊಳ್ಳು ಪ್ರಗತಿಯ ವಾಸ್ತವಿಕತೆಗೆ ಕನ್ನಡಿ ಹಿಡಿಯುತ್ತದೆ. ನಮ್ಮ ರಾಷ್ಟ್ರ ನಾಯಕನ 'ಅಚ್ಚೆ ದಿನ ಆಯೇಗಾ...' ಎಂಬ ಮಾತನ್ನು ಕುರಿತು ವ್ಯಂಗ್ಯವಾಡಿದಂತಿದೆ. ನಮ್ಮ ಕಾರ್ಮಿಕರ ಸ್ಥಿತಿಗತಿ ಹೇಳಲು ಅಸಾಧ್ಯವಾದದ್ದು. 'ಜಲ್ಲಿರಾಶಿಯ ಧೂಳನುಟ್ಟ ಬಸುರಿ ಅಮ್ಮ ತನ್ನ ಮಗುವಿನ ಆಸರೆ ತಣಿಸಲು ತನ್ನ ಹಾಲಿಲ್ಲದ ಬರಡು ಮೊಲೆಯನ್ನು ಒತ್ತುತ್ತಿದ್ದಾಳೆ' ಎಂಬ ಮಾತು ಎಂಥವರ ಮನವನ್ನಾದರೂ ಸಹ ಆರ್ದ್ರಗೊಳಿಸಬಲ್ಲದು. ಇದು ವರ್ತಮಾನದ ಪ್ರಗತಿ ಯಾವ ದಿಕ್ಕಿನತ್ತ ಸಾಗುತ್ತಿದೆ ಎಂಬುವುದಕ್ಕೆ ಒಂದು ಉತ್ತಮ ನಿದರ್ಶನವಾಗಿ ಮತ್ತೆಮತ್ತೆ ಕಾಡುತ್ತದೆ. ಶ್ರಮಸಂಸ್ಕೃತಿಗೆ ಬಸುರಿ ಕಾರ್ಮಿಕ ಹೆಣ್ಣು ಪ್ರತೀಕವಾಗುತ್ತಾಳೆ. ಬಂಡವಾಳಗಾರರಿಂದ ಶೋಷಿತಳಾಗುವುದನ್ನು ಚಿತ್ರಿಸುತ್ತದೆ. 'ಪ್ರೇಮವೆಂದರೆ ಸುಖ–ದುಃಖ, ಆರ್ತತೆ–ಆರ್ದ್ರತೆಯಲ್ಲಿ ಪರಿಮಳದ ಹೂವು ಅರಳಿದಂತೆ. ಅದು ಎಲ್ಲವೂ ಆಗಿರುತ್ತದೆ ಅದೆಲ್ಲವೂ ಇಡೇರಲಿ' ಎಂದು ಹರಸುತ್ತಾರೆ. ಲೋಕವೆಲ್ಲಾ ಮಲಗಿರುವಾಗ ಸಂಭ್ರಮಿಸುವ ಹಾವು, ಕಾಮಾಸಕ್ತಿಯ ಸಂಕೇತವಾಗಿ ಮತ್ತೆಮತ್ತೆ ಕಾಡುತ್ತದೆ. ಶೃಂಗಾರ ರಸವನ್ನು ಉಕ್ಕಿಸುತ್ತದೆ. 'ಅಕ್ಕಾ' ಕವಿತೆಯು ಶೋಷಣೆಗೆ ಒಳಗಾದವರ ನೋವಿನ ಕತೆಯನ್ನು ಧ್ವನಿಸುತ್ತದೆ. ಹದಿಹರೆಯದಲ್ಲಿ 'ಬುದ್ಧಿ' ಬಲಿಯುವ ಹೊತ್ತಲ್ಲಿ ಹಲ್ಲು ಮೊಳಕೆಯೊಡೆದು ಬರುತ್ತದೆ. ಅದು ಬುದ್ಧಿಯ ಸಂಕೇತ. ಅದು ಸಂಕಟದ ಕಾಲವೂ ಹೌದು (ಋತುಮತಿ) ಎಂದು ತನ್ನ ಜೀವನಾನುಭವಗಳನ್ನು ಕಾವ್ಯದ ಚೌಕಟ್ಟಿನಲ್ಲಿ ಕಂಡರಿಸಿದ್ದಾರೆ.

ಪ್ರೀತಿಗಾಗಿ ಹಪಹಪಿಸುವ 'ಮಾಗಿಯ ಕವಿತೆ', ಎದೆಯ ತೋಟದಲ್ಲಿ ಎಚ್ಚರದ ಹೂವಾಗಿ ಅರಳುವ 'ಬಯಕೆ', ಗಡಿಯಾರದ ತಪ್ಪು ಲೆಕ್ಕಕ್ಕಿಂತ ವರ್ತಮಾನದಲ್ಲಿ ಸೆಲ್‌ಫೋನೇ ಉಪಯುಕ್ತವಾಗಿದ್ದು, ಗಡಿಯಾರ ಅಲರ್ಜಿಯಾದ ಬಗೆ ಹೇಳುತ್ತದೆ. ದಣಿದಾಗ ತಂಪಾಗಿ, ಮುನಿಸು ಮಂಜನ್ನೆಲ್ಲ ಮೈಮುಟ್ಟಿ ಕರಗಿಸಿದ 'ನನ್ನ ಸೂರ್ಯ' ಕವಿತೆ ಕೆನ್ನೆ ಮೇಲಿನ ಕುರುಹು, ನಸುನಗುತ್ತಿದ್ದ ಎಳೆಯ ಚಂದ್ರ ಬರಿದಾದ ಕೋಣೆ, ಚಳಿರಾತ್ರಿಯಲ್ಲಿ ಭೀಮಬಾಹುಗಳ ನೆನೆದು ಬಿಸಿಯುಸಿರು ಸುರಿಸುವ ಪರಿ, ಪ್ರೇಮಕಥೆಯನ್ನು ಹೇಳುವ ಶೃಂಗಾರ ರಸದೊರತೆಯಂತಿದೆ. ಕಣ್ಣ ಕಡಲಲ್ಲಿ ಈಜಾಡಿ ಹೋಗುವ ತೋಟದ ಹೂವುಗಳು, ಎಲ್ಲ ಪುಂಗಿಗಳ ನಾದಕ್ಕೂ ಒಲಿಯುವ ಪುರುಷರನ್ನು 'ಹಾವು' ಸಂಕೇತದ ಮೂಲಕ ವ್ಯಂಗ್ಯವಾಡಿದ್ದಾರೆ. ತನ್ನ ಸಂಗಾತಿಯೊಡನೆ ಸೇರಬೇಕೆಂಬ ಹಂಬಲಕ್ಕೆ ಶಬ್ದಗೋಡೆ ಬೆಳೆಯದೆ ಶಾಂತ ಬಯಲು ಒದಗಿ ಬರಲಿ ಎಂಬ ಆಶಾಭಾವನೆ ಕವಯತ್ರಿಯ ಪರಿಶುದ್ಧ ಪ್ರೇಮವನ್ನು ಎತ್ತಿ ಹಿಡಿಯುತ್ತದೆ. ವರ್ತಮಾನಕ್ಕೆ ಹೆಚ್ಚು ಪ್ರಸ್ತುತವಾದ ಔಷಧದಂತಹ ಮಾತಾಗಿ ಧ್ವನಿಸುತ್ತದೆ. 'ಪ್ರೇಮಮುಖಿ' ಪ್ರೇಮ ಮರುಳಾಗಿ ಮತ್ತೆ ಮತ್ತೆ ಕಾಡಿ ಕಾವ್ಯ ಏಕತಾನತೆಯಿಂದ ಸೊರಗಿದೆ. ಸಂಸಾರದ ತಾಪತ್ರಯಗಳನ್ನು ಸಹಿಸಿಕೊಂಡು ಹೆಜ್ಜೆ ಹಾಕಿ ಸಾಗುತ್ತಿರುವ ಕವಯತ್ರಿಯ ಕಾವ್ಯನಡಿಗೆಯಲ್ಲಿ ತಾಳ್ಮೆಯ ಉಪದೇಶಗಳಿವೆ.

'ಪ್ರೀತಿಪ್ರೇಮಗಳ ಶಾರೀರಿಕ ಸಂಬಂಧವಷ್ಟೇ ಸಂಬಂಧವಾಗಿರದೆ ನಿಜವಾದ ಸಂಬಂಧ ದೇಹದ ಬಿಸಿಯಾಚೆಯ ಮಾನವೀಯ ಸಂಬಂಧಗಳಲ್ಲಿದೆ' ಎಂದು ಕರೆ ಕೊಡುವ ಅನುಪಮಾ ಅವರ ಈ ಸಾಲು ಮನುಷ್ಯ ಸಂಬಂಧಗಳನ್ನು ಬೆಸೆಯುವಲ್ಲಿ ಮದ್ದಾಗಬಲ್ಲದು. ಜೊತೆಗೆ, ಪ್ರೇಮಿಗಳ ಭಾವನೆಗಳಿಗೆ ಕನ್ನಡಿ ಹಿಡಿಯುತ್ತದೆ. ಪ್ರದೂಷಣೆಗೊಂಡಿರುವ ನಗರ ಬದುಕಿನ ಅಸಹನೆಯ ಕುರಿತು 'ಗುರುವೇ' ಕವನದಲ್ಲಿ ಪರಿಸರ ಪ್ರಜ್ಞೆ ಮಿಂಚಿದೆ. ಪ್ರೇಮಸ್ಥಾಯಿಯಾಗಬೇಕೆಂಬ ಹಂಬಲ 'ಅಯಸ್ಕಾಂತ ಭೇದದಲ್ಲಿದೆ.' ಉಳಿದೆಲ್ಲವು ಗೌಣವಾಗಿ ಕಂಡಿವೆ. ನಿಜವಾದ ಮಮತೆಯು ಕಾಮವಾಸನೆಗಳ ಎಲ್ಲೆಯನ್ನು ಮೀರಿ ನಿಲ್ಲುತ್ತದೆ. ಮೋಹ ಮಾಯೆಯಿಂದ ಗೆಲ್ಲುಗೆಲ್ಲಿಗೆಲ್ಲಾ ಹೊಸ ಆಸೆ ಚಿಗುರಿ ಪ್ರೀತಿ ಹೆಪ್ಪುಗಟ್ಟಿದೆ. ತನ್ನ ಎಳವೆಯಲ್ಲಿರುವ ಕಾಮಾಸಾಕ್ತಿ ಇಂದು ಬರಿದಾಗಿ ಬರೀ ಪ್ರೀತಿ ಮಾತ್ರ ಉಳಿದುಕೊಂಡಿದೆ. ಅದು ಏನಾಯಿತು? ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಂಡಂತಿದೆ. ಉದುರುವ ತಲೆಗೂದಲು ಮುಪ್ಪಿನ ಸಂಕೇತವಾಗಿ ಪ್ರತಿನಿಧಿಸಿದೆ. ಪ್ರೇಮಿಗಳ ಭಾವನೆಗಳು ಹೆಚ್ಚಿನ ಕವಿತೆಗಳಲ್ಲಿ ಮಾತನಾಡಿವೆ.

'ಕೈ ತೋರಿಸಿದಲ್ಲಿ' ನಿಲ್ಲುವ ಸರ್ಕಾರಿ ವಾಹನಗಳ ಪ್ರತಿರೂಪವನ್ನು ಸೃಜಿಸಿ, ವರ್ಗೀಕರಣ. ನಾಮಫಲಕ, ವೇಗದ ಮಿತಿ, ಲಾಂಛನ, ಹತ್ತಿಳಿಯುವ ಪ್ರಯಾಣಿಕರನ್ನು ಪಡಿಮೂಡಿಸಿದ ರೀತಿ ಪರಿಣಾಮಕಾರಿಯಾದದ್ದು. 'ಪೂರ್ಣ' ಕವಿತೆಯು ಜೀವಸಂಗಾತದಲ್ಲಿಯ ಪೂರ್ಣ–ಅಪೂರ್ಣತೆಯ ಕುರಿತು ಚರ್ಚಿಸುತ್ತದೆ. ನೋವಿಗೆ, ಒಂಟಿ ಕ್ಷಣಕ್ಕೆ ಸ್ವರವಾಗಿ, ಧ್ವನಿಯಾಗಿ ಬಂದರೂ ತಾನು ಸಂತೃಪ್ತಳೆಂಬ ಭಾವ ಕೆನೆಗಟ್ಟಿದೆ. 'ಅಂದು–ಇಂದು' ಕವಿತೆಯು ಕಾಡುವ ಹಾವುಗಳ ಮುಂದೆ ಒಂಟಿ ಪೋರಿಯರು ವಹಿಸಿಕೊಳ್ಳಬೇಕಾದ ಎಚ್ಚರಿಕೆಗಳಿವೆ. ಸಂಗಾತಿಯೊಂದಿಗಿನ ತಾನತಂದಾನದಲ್ಲಿ ಕಳೆದುಹೋಗದೆ ತನ್ನರಿವಿನ ಒತ್ತಡಕ್ಕೆ ಮೌನದಲ್ಲಿ ಮನಸ್ಸಿಗೆ ತೋಚಿದ್ದನ್ನು, ಅನುಭವಕ್ಕೆ ದಕ್ಕಿದ್ದನ್ನು ಸಾಧರಣೀಕರಣಗೊಳಿಸಿ ಕಾವ್ಯ ಚರಿತ್ರೆಯಲ್ಲಿ ತಾಳ್ಮೆಯಿಂದ ಬದುಕಿನಲ್ಲಿ ಹೆಜ್ಜೆ ಹಾಕುತ್ತಿರಬೇಕೆಂಬ ಸಲಹೆಗಳಿವೆ. ಅನುಪಮಾ ಹೇಳುವಂತೆ "ಸಹಗಮನ ಸಂಗಾತಿಯೊಡನಷ್ಟೇ ಅಲ್ಲ, ಬದುಕಿನೊಡನೆ, ಕಾಲದೊಡನೆ ಹಾಗೂ ಕಾವ್ಯದೊಡನೆಯೂ ಹೌದು, ಹೆಣ್ತನವನ್ನು, ಹೆಣ್ತನಕ್ಕೆ ಕಾರಣವಾದ ಎಲ್ಲವನ್ನೂ ಅವನೊಡನೆ ಅನುಭವಿಸಿದ್ದೇನೆ. ಮುಟ್ಟಿನ ರಕ್ತದ ಬೆಚ್ಚನೆಯ ಅನುಭವದಿಂದ ಹಿಡಿದು ಹಾಲುಣಿಸಿದ ಮೊಲೆಗಳ ಮೃದುತನದವರೆಗೆ ಶರಣಾಗತಿಯಿಂದ ಹಿಡಿದು ಆಡಾಡುತ್ತಲೇ ಮಾತು ಬಿಟ್ಟು ಸೆಡವಿನವರೆಗೆ ಇದೆಲ್ಲದರಿಂದ ಅವನೂ ಬಿಸಿ ಅನುಭವಿಸುತ್ತ, ಮಾಡುತ್ತ ನನ್ನ ಕಲ್ಪನೆಯಲ್ಲೂ ನಿಜಜೀವನದಲ್ಲೂ ಪಕ್ವವಾಗಿದ್ದಾನೆ."

ಮಾನವೀಯತೆ, ಪ್ರಾಮಾಣಿಕತೆ, ತ್ಯಾಗ, ಪ್ರೀತಿ, ಪರಿಸರಪ್ರಜ್ಞೆಗಳನ್ನು ಪ್ರತಿನಿಧಿಸುವ ಕವಿತೆಗಳೇ ಹೆಚ್ಚು. ಕವಿತೆಗಳಿಗೆ ವಸ್ತುವೈವಿಧ್ಯತೆಯ ಅಗತ್ಯವಿದೆ. ಪ್ರೀತಿಯ ಕಲ್ಪನೆಯ ಬಾಗಿಲುಗಳನ್ನು ತೆರೆದು ಬದುಕಿನೊಳಗಡಗಿರುವ ವಾಸ್ತವಿಕತೆಯ ದರ್ಶನ ನೀಡುವ ಕನಸು ಸಂಕಲನದಲ್ಲಿದೆ. ಸ್ತ್ರೀ ಪುರುಷರ ಹಕ್ಕುಗಳನ್ನು ಮುಖಾಮುಖಿಯಾಗಿಸುವ ಸಾಲುಗಳಿವೆ. ಅವು ಶೋಷಣೆ, ಅನ್ಯಾಯ, ಸುಳ್ಳು ಸಂಪ್ರದಾಯಗಳಿಗೆ ಸಿಕ್ಕಿರುವ ಧ್ವನಿಯಾಗಿವೆ. ತಾಳ್ಮೆಯಿಂದ ಬದುಕು ಅರಳಲು ಸಾಧ್ಯ ಎಂಬ ಕಿವಿಮಾತನ್ನು ಕವಿತೆ ಧ್ವನಿಸುತ್ತದೆ. ವ್ಯಾವಹಾರಿಕ ಸಂಬಂಧಗಳು ಬಲಗೊಳ್ಳುತ್ತಾ ಭಾವನಾತ್ಮಕ ಸಂಬಂಧಗಳ ಕೊಂಡಿ ಕಳಚಿಕೊಳ್ಳುವುದನ್ನು ಪ್ರೀತಿಯ, ತ್ಯಾಗದ ಮೂಲಕ ತಡೆಹಿಡಿಯಬೇಕೆಂಬ ಎಚ್ಚರಿಕೆಯ ಸಾಲುಗಳಿವೆ. ಕವಯತ್ರಿ ತನ್ನ ಕೌಟುಂಬಿಕ ನೆಲೆಯಲ್ಲಿ ಪಟ್ಟ ಪಾಡೇ ಕಾವ್ಯದ ನೇಯ್ಗೆ ಪಡೆದಿದೆ. ಸಾಂಗತ್ಯದ ಗುಟ್ಟನ್ನು ಬಯಲಾಗಿಸುವ ಸತ್ಯದರ್ಶನಗಳಿವೆ. ಮಾತೃ ಮತ್ತು ಪಿತೃ ಸಂಸ್ಕೃತಿಗಳ ಸಂಘರ್ಷವನ್ನು ಒರಸಿಹಾಕುವ ಹಂಬಲಗಳಿವೆ. ಗಂಡು–ಹೆಣ್ಣಿನ ಸಂಬಂಧದ ಕೊಂಡಿ ಸಡಿಲವಾಗಿರುವ ವರ್ತಮಾನದಲ್ಲಿ ಅನುಪಮಾರ ಕವಿತೆಗಳು ಮದ್ದಾಗಬಲ್ಲವು. ಪತಿವ್ರತೆಯನ್ನು ಹೊಸ ಚಹರೆಯಲ್ಲಿ ಕಟ್ಟಿಕೊಡುವ ಸಾಂಸ್ಕೃತಿಕ ಪರಿಸರ ನಿರ್ಮಾಣ ಮಾಡುವ ಮೌಲ್ಯವನ್ನು ಪ್ರತಿನಿಧಿಸುವ ಒಳತುಡಿತಗಳಿವೆ. ಬದುಕನ್ನು ಬೆಸೆಯುವ ಪ್ರೀತಿಯ ಪ್ರತಿಪಾದನೆಯತ್ತ ಹೆಣೆದ ಕವಿತೆಗಳಲ್ಲಿ ಒಂದೇ ವಸ್ತು ವಿವಿಧ ಸ್ವರೂಪದಲ್ಲಿ ಕಾಣಿಸಿಕೊಳ್ಳುವ ಏಕತಾನತೆ ಎದ್ದು ಕಾಣುತ್ತದೆ.

ಈ ಸಂಕಲನದ 'ಪ್ರೀತಿ' ಪದವನ್ನು ಹೊಸ ನಿರ್ವಚನದಲ್ಲಿ ಚಿಂತಿಸಿದಾಗ ಇಲ್ಲಿ ಅಂತರ್ಗತವಾಗಿರುವ ಹರವು ಸತ್ಯದ ಪರಿಕಲ್ಪನೆಗಳ ಬದುಕಿನ ಮೂರ್ತ–ಅಮೂರ್ತ ಮಗ್ಗಲುಗಳು ತೆರೆದು ತೋರಲು ಸಾಧ್ಯ. ಕವಿತೆ ರೂಪುಗೊಂಡಿರುವ ಹಿಂದಿನ ಸತ್ಯವನ್ನು ಪ್ರಜ್ಞಾಪೂರ್ವಕವಾಗಿ ಧ್ಯಾನಿಸಿದಾಗ ಕಾವ್ಯದ ಒಳಜೀವಾಳ ಸ್ಫುರಿಸುವ ಧ್ವನಿ ತಿಳಿಯುತ್ತದೆ. ಮುನ್ನುಡಿಯಲ್ಲಿ ಕವಿ ವಿಷ್ಣುನಾಯ್ಕ ಅವರು ಹೇಳುವಂತೆ "ಉಮ್ಮಳವಿಲ್ಲದ ಶಾಂತಕವಿಯಾಗಿ, ಲೋಕದ ಅತಿ ಮತ್ತು ಮಿತಿಗಳನ್ನು ಧೈರ್ಯವಾಗಿ ಎದುರಿಸಬಲ್ಲ ಜಾಗೃತ ಮನಸ್ಸಿನ ಹೆಣ್ಣಾಗಿ ಬದುಕಿನ ಬಂಧ–ನಿರ್ಬಂಧ–ಸಾಂಗತ್ಯ ಚೆಲುವುಗಳ ಬಗ್ಗೆ ಸ್ಪಷ್ಟವಾದ ಅರಿವಿರುವುದನ್ನು ಈ ಸಂಕಲನದಲ್ಲಿ ದಾಖಲಾದ ಮಾತುಗಳ ಮೂಲಕವೇ ಕಂಡುಕೊಳ್ಳಬಹುದಾಗಿದೆ." ಅನುಪಮಾ ಹೇಳುವಂತೆ "ನನ್ನದಷ್ಟೇ ಅಲ್ಲ, ಎದೆಗೆ ತಟ್ಟಿ ತುದಿಬೆರಳಿನಲ್ಲಿ ಎಂಬಂತೆ ಅನುಭವಕ್ಕೆ ದಕ್ಕಿದ ಉಳಿದ ಜೀವಗಳ ಅಳಲನ್ನು ನನ್ನದೇ ಆಗಿಸಿಕೊಂಡಿದ್ದೇನೆ" ಎಂದು ಕವಿತೆ ಬರೆಯಹೊರಟ ಅನುಪಮಾ ಅನುರೂಪವಾದ ಪ್ರತಿಮೆಯ ಮುಖೇನ ಹೆಣೆದ ಕವಿತೆಗಳು ಧ್ಯಾನಸ್ಥ ಸ್ಥಾಯಿಭಾವದಲ್ಲಿ ಅರಳಿ ನಿಂತಿವೆ.

ಡಾ॥ ಸುರೇಶ ನಾರಾಯಣ ನಾಯ್ಕ
ಹೊನ್ನಾವರ (ಉ.ಕ)



# ನೈಜ ಸ್ವಾತಂತ್ರ್ಯದ ನಿರೀಕ್ಷೆಯಲ್ಲಿ ಹೈದರಾಬಾದ ಕರ್ನಾಟಕ

**ಡಾ॥ ಪ್ರಕಾಶ ದೇಸಾಯಿ**

'**ನಾ**ಗರಿಕ ಸ್ವಾತಂತ್ರ್ಯ' ಎಂಬ ಪರಿಕಲ್ಪನೆ ಕುರಿತು ಸೈದ್ಧಾಂತಿಕ ನೆಲೆಯಲ್ಲಿ ಬಹಳಷ್ಟು ಚರ್ಚೆಯಾಗಿದೆ. ಉದಾರವಾದದಿಂದ ಪ್ರಾರಂಭವಾಗಿ ಇಲ್ಲಿಯವರೆಗೂ ಹಲವಾರು ಸಿದ್ಧಾಂತಿಗಳು ಹಲವಾರು ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ. ಇಂತಹ ಇತ್ತೀಚಿನ ಚರ್ಚೆಗಳಲ್ಲಿ ಅಮರ್ತ್ಯ ಸೇನರು ನಾಗರಿಕ ಸ್ವಾತಂತ್ರ್ಯದ ಕುರಿತು ಹೇಳಿರುವ ವಿಚಾರಗಳು ಬಹು ಮುಖ್ಯವಾಗಿ ಕಾಣಿಸಿಕೊಂಡಿವೆ. ಸೇನರ ಪ್ರಕಾರ ಸ್ವಾತಂತ್ರ್ಯ ಎಂಬುದು ಕೇವಲ ರಾಜಕೀಯ ಆಯಾಮಕ್ಕೆ ಸೀಮಿತವಾಗದೆ ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳನ್ನು ಕೂಡ ಒಳಗೊಂಡಿರಬೇಕು. ಇದನ್ನು ಇನ್ನೂ ಹೆಚ್ಚಿಗೆ ಸ್ಪಷ್ಟೀಕರಿಸಿ ಹೇಳಬೇಕೆಂದರೆ, ಒಬ್ಬ ವ್ಯಕ್ತಿ ಸ್ವತಂತ್ರನೆಂದಾದರೆ ಆತನು ರಾಜಕೀಯವಾಗಿ ಸ್ವತಂತ್ರನಾಗಿರುವುದರ ಜೊತೆಗೆ ಸಾಮಾಜಿಕವಾಗಿಯೂ ಆರ್ಥಿಕವಾಗಿಯೂ ಸ್ವತಂತ್ರನಾಗಿರಬೇಕು ಎಂದರ್ಥ. ಇಂತಹ ಸ್ವಾತಂತ್ರ್ಯ ವಸಾಹತುಶಾಹಿ ಆಡಳಿತದಿಂದ ಮುಕ್ತಗೊಂಡ ದೇಶಗಳು ತಮ್ಮ ವಿವಿಧ ಆಡಳಿತಾತ್ಮಕ ಪ್ರದೇಶಗಳಿಗೆ ಮತ್ತು ಅಲ್ಲಿರುವ ಎಲ್ಲ ಪ್ರಜೆಗಳಿಗೆ ಎಷ್ಟರ ಮಟ್ಟಿಗೆ ಒದಗಿಸಿವೆ ಎಂಬುವದನ್ನು ತಿಳಿದುಕೊಳ್ಳುವದು ಬಹು ಮುಖ್ಯ.

ಭಾರತವು ಬ್ರಿಟಿಷರ ಆಳ್ವಿಕೆಯಿಂದ ಸ್ವತಂತ್ರಗೊಂಡಾಗ ದೇಶದಲ್ಲಿ ಎಲ್ಲಿಲ್ಲದ ಸಂಭ್ರಮ, ಸಂತೋಷ ಆವರಿಸಿತ್ತು. ದೇಶ ಸ್ವತಂತ್ರವಾಗಿರುವದರಿಂದ ನಾಗರಿಕ ಸ್ವಾತಂತ್ರ್ಯ ದೊರಕಿತಲ್ಲದೆ ದೇಶದ ಎಲ್ಲ ಜನರ ಕಲ್ಯಾಣದ ಕೆಲಸಕ್ಕೆ ಹೊಸ ಅವಕಾಶ ಒದಗಿ ಬಂದಿತು ಎಂಬುವದು ಈ ಸಂತೋಷದ ಹಿಂದಿನ ಕಾರಣವಾಗಿತ್ತು. ಆದರೆ, ಈ ನಾಗರಿಕ ಸ್ವಾತಂತ್ರ್ಯ ಮತ್ತು ದೇಶದ ಕಲ್ಯಾಣದ ಕುರಿತು ವ್ಯಕ್ತವಾಗಿರುವ ಸಂತೋಷ ಇತರ ಕೆಲವು ಪ್ರದೇಶದ ಜನರಿಗೆ ಸಿಗಲಿಲ್ಲ. ಅಂತಹ ಪ್ರದೇಶಗಳಲ್ಲಿ ಈಗಿನ ಹೈದರಾಬಾದ ಕರ್ನಾಟಕವೂ ಒಂದು. ೧೯೪೭ರ ಆಗಸ್ಟ್ ೧೫ರಂದು ವಸಾಹತು ಮತ್ತು ಸಾಮ್ರಾಜ್ಯಶಾಹಿಗಳಿಂದ ಭಾರತಕ್ಕೆ ಸ್ವಾತಂತ್ರ್ಯ ದೊರಕಿತಾದರೂ ಈ ಭಾಗದ ಜನರು ಮುಂದೆ ಹಲವಾರು ತಿಂಗಳುಗಳವರೆಗೆ ಹೈದರಾಬಾದಿನ ನಿಜಾಮರ ನಿರಂಕುಶ ಆಳ್ವಿಕೆಯಿಂದ ವಿಮೋಚನೆಗೊಳ್ಳಲು ಕಾಯಬೇಕಾಯಿತು. ಅಂದು ಭಾರತ ಸರ್ಕಾರದ ಗೃಹ ಮಂತ್ರಿಗಳಾಗಿದ್ದ ಪಟೇಲರ ಪ್ರಯತ್ನ ಮತ್ತು ನಿಜಾಮರ ಪ್ರಭುತ್ವಕ್ಕೆ ವಿರೋಧವಾಗಿ ಸ್ಥಳೀಯರು ಮಾಡಿದ ಹೋರಾಟದ ಫಲವಾಗಿ ಈ ಭಾಗದ ಜನರು ನಿರಂಕುಶ ಪ್ರಭುತ್ವದಿಂದ ವಿಮೋಚನೆಗೊಂಡು ಇವರು ಭಾರತೀಯರ ಹಾಗೆ ಸ್ವತಂತ್ರರಾದರು. ಹೈದರಾಬಾದ ಕರ್ನಾಟಕವು ೧೯೫೬ರಿಂದ ಭಾರತ ಒಕ್ಕೂಟದ ಒಂದು ರಾಜ್ಯವಾಗಿರುವ ಕರ್ನಾಟಕದ ಭಾಗವಾಗಿದೆ. ಈ ಭಾಗವು ಸ್ವತಂತ್ರ ಭಾರತದ ರಾಜ್ಯಗಳಲ್ಲಿ ಅಭಿವೃದ್ಧಿ ದೃಷ್ಟಿಯಿಂದ ಪ್ರಗತಿಪರವೆನಿಸಿಕೊಂಡ ಕರ್ನಾಟಕದ ಭಾಗವಾದರೂ ಈವರೆಗೆ ಈ ಭಾಗದ ಬಹುಭಾಗದ ಜನರಲ್ಲಿ ಅಭಿವೃದ್ಧಿಯ ನಿಜ ಅನುಭವ ದೊರಕಿಲ್ಲ. ಅಂದರೆ ಅಮರ್ತ್ಯ ಸೇನರ ವಿಚಾರಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಈ ವಿಷಯವನ್ನು ವಿಶ್ಲೇಷಿಸಿದಾಗ ಈ ಭಾಗದ ಬಹಳಷ್ಟು ಜನರಿಗೆ ನಿಜವಾದ ಸ್ವಾತಂತ್ರ್ಯದ ಅನುಭವ ಇನ್ನು ದೊರಕಿಲ್ಲ ಎಂದು ಹೇಳಲೇ ಬೇಕು.

ರಾಜ್ಯದಲ್ಲಿರುವ ಕೆಲವು ಪ್ರದೇಶಗಳನ್ನು ಹೊರತುಪಡಿಸಿ, ಇತರ ಪ್ರದೇಶಗಳೊಂದಿಗೆ ಹೈದರಾಬಾದ ಕರ್ನಾಟಕ ಭಾಗವನ್ನು ಅಭಿವೃದ್ಧಿ ದೃಷ್ಟಿಯಲ್ಲಿ ತುಲನೆ ಮಾಡಿದಾಗ ಈ ಭಾಗವು ಇನ್ನೂ ಹಿಂದುಳಿದ ಪ್ರದೇಶವಾಗಿದೆ. ಅಭಿವೃದ್ಧಿಯ ಯಾವುದೇ ಸೂಚಕಗಳನ್ನು ತೆಗೆದುಕೊಂಡರೂ ಈ ಭಾಗವು ಬಹಳ ಹಿಂದುಳಿದಿದೆ. ಈ ಭಾಗದ ಹಿಂದುಳಿಯುವಿಕೆಯ ವಿಷಯ ಕುರಿತು ಈ ಮೊದಲು ಮಾಡಿದ ಅಧ್ಯಯನ ವರದಿಗಳು ಮತ್ತು ಇತ್ತೀಚಿನ ಅಧ್ಯಯನಗಳು ಬಹಳಷ್ಟು ಬೆಳಕು ಚೆಲ್ಲಿವೆ. ಇಲ್ಲಿನ ಅಭಿವೃದ್ಧಿಯ ಬಗ್ಗೆ ಪಕ್ಷಿನೋಟ ಹರಿಸಿದರೆ ರಸ್ತೆ, ಸಾರಿಗೆ ಸಂಪರ್ಕ, ಕೈಗಾರಿಕೆಗಳು, ನೀರಾವರಿಗೆ ಅನುಕೂಲವಾಗುವ ಅಣೆಕಟ್ಟುಗಳು, ಇವಾವುವೂ ಗಮನೀಯ ಮಟ್ಟದಲ್ಲಿ ಅಭಿವೃದ್ಧಿಯಾಗಿಲ್ಲ. ಮಾನವ ಅಭಿವೃದ್ಧಿಗೆ ಅನುಕೂಲವಾಗುವ ಶೈಕ್ಷಣಿಕ ಸವಲತ್ತುಗಳು, ಆರೋಗ್ಯದ ಸವಲತ್ತುಗಳು, ಅವಶ್ಯಕತೆಗೆ ತಕ್ಕಂತೆ ಸರಿಯಾದ ಪ್ರಮಾಣದಲ್ಲಿಲ್ಲ. ಹೀಗಿರುವಾಗ ಇಲ್ಲಿಯ ಬಹಳಷ್ಟು ಜನರನ್ನು ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯ ಪಡೆದಿರುವ ಮತ್ತು ಅದನ್ನು ಅನುಭವಿಸುತ್ತಿರುವ ಸ್ವತಂತ್ರ ಭಾರತದ ಪ್ರಜೆಗಳೆಂದು ಕರೆಯಲು ಇಲ್ಲಿರುವ ವಾಸ್ತವ ಅಡ್ಡಿಮಾಡುತ್ತದೆ.

ಈ ಅನಭಿವೃದ್ಧಿ ಸ್ಥಿತಿಗೆ ಕೆಲವೊಂದು ಐತಿಹಾಸಿಕ ಕಾರಣಗಳಿದ್ದರೂ ಕೂಡ ರಾಜ್ಯ ಸರ್ಕಾರ ಇದರ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳಲಿಕ್ಕಾಗುವದಿಲ್ಲ. ಈ ಭಾಗವು ೧೯೪೮ರವರೆಗೆ ನಿಜಾಮರ ಆಳ್ವಿಕೆಯಲ್ಲಿದ್ದಾಗ ಈ ಭಾಗದ ಅಭಿವೃದ್ಧಿಗೆ ಅನುಕೂಲವಾಗುವ ಯಾವುದೇ ಕ್ರಮಗಳು ಪ್ರಭುತ್ವದಿಂದ ಜರುಗಲಿಲ್ಲ. ಅದಲ್ಲದೆ, ಇಲ್ಲಿನ ಆಡಳಿತ ಭಾಷೆಯು ಕೂಡಾ ಬೇರೆ ಆಗಿತ್ತು. ಹಳೆ ಮೈಸೂರು ಪ್ರಾಂತ್ಯದ ಅಭಿವೃದ್ಧಿಗಾಗಿ ಮೈಸೂರು ಮಹಾರಾಜರು ಪ್ರಗತಿಪರ ಕಾರ್ಯಗಳು ತಂದ ಹಾಗೆ ಹೈದರಾಬಾದ ಕರ್ನಾಟಕದಲ್ಲಿ ಇಲ್ಲಿನ ಪ್ರಭುತ್ವವು ಜಾರಿಗೆ ತರಲು ಮನಸ್ಸು ಮಾಡಲಿಲ್ಲ. ೧೯೫೬ರಿಂದ ಈ ಭಾಗವು ಈಗಿನ ಕರ್ನಾಟಕ ರಾಜ್ಯದಲ್ಲಿದ್ದರೂ ರಾಜ್ಯ ಸರ್ಕಾರವು ಈ ಭಾಗದ ಅಭಿವೃದ್ಧಿಗೆ ಗಣನೀಯವಾಗಿ ಗಮನ ಹರಿಸಲಿಲ್ಲ. ರಾಜ್ಯ ಸರ್ಕಾರದ ಹೊಣೆಗಾರಿಕೆಯ ಬಗ್ಗೆ ಮಾತನಾಡುವಾಗ ರೂಢಿಯಲ್ಲಿರುವ ವಿಶ್ಲೇಷಣೆಗಳಾದ ಈ ಭಾಗದ ಹಿಂದುಳಿಯುವಿಕೆಗೆ ದಕ್ಷಿಣ ಭಾಗದ ರಾಜಕಾರಣಿಗಳ ಮಲತಾಯಿ ಧೋರಣೆಯೇ ಕಾರಣ ಎಂದು ಪುನಃಪುನಃ ಹೇಳುವದನ್ನು ಬಿಟ್ಟು ಸರ್ಕಾರ ಮತ್ತು ಅದಕ್ಕೆ ಪ್ರತಿಯಾಗಿ ಹಿಂದುಳಿದ ಪ್ರದೇಶಗಳು ಎಂದು ವಿಶ್ಲೇಷಿಸಬೇಕಾಗುತ್ತದೆ. ಏಕೆಂದರೆ, ರಾಜ್ಯ ಕಂಡ ಈವರೆಗಿನ ಸರ್ಕಾರಗಳಲ್ಲಿ ಹಿಂದುಳಿದ ಪ್ರದೇಶದ ಅನೇಕ ಧುರೀಣರು ಮಹತ್ವದ ಮತ್ತು ಅಧಿಕಾರಯುತ ಸ್ಥಾನಮಾನಗಳನ್ನು ಅಲಂಕರಿಸಿದವರಾಗಿದ್ದಾರೆ. ಮುಖ್ಯಮಂತ್ರಿ, ಕೇಂದ್ರ ಮಂತ್ರಿ, ರಾಜ್ಯ ಸರ್ಕಾರದಲ್ಲಿ ಮಂತ್ರಿ ಪದವಿ ಮತ್ತು ಇತ್ಯಾದಿ ಸ್ಥಾನಮಾನಗಳನ್ನು ಹೈದರಾಬಾದ ಕರ್ನಾಟಕ ಭಾಗದ ಧುರೀಣರು ಪಡೆದಿದ್ದಾರೆ. ಹೀಗಿರುವಾಗ ಹಿಂದುಳಿದ ಭಾಗಗಳ ಅಭಿವೃದ್ಧಿ ವಿಷಯದಲ್ಲಿ

ಈ ಧುರೀಣರ ಪಾತ್ರಗಳ ಬಗ್ಗೆ ಕೂಡಾ ಪ್ರಶ್ನೆಗಳು ಏಳುವುದು ಸಹಜ. ಕೇವಲ ಸೀಮಿತ ಭಾಗದ ರಾಜಕಾರಣಿಗಳು ಅನಭಿವೃದ್ಧಿ ಸ್ಥಿತಿಗೆ ಕಾರಣವೆಂದು ಆರೋಪಿಸದೆ ರಾಜ್ಯ ಸರ್ಕಾರದಲ್ಲಿ ಅಧಿಕಾರದ ರುಚಿಯನ್ನು ಸವಿದ ಬಹಳಷ್ಟು ರಾಜಕಾರಣಿಗಳು ಕಾರಣರು ಎಂದು ಹೇಳುವದರಲ್ಲಿ ತಪ್ಪೇನಿಲ್ಲ. ಒಂದರ್ಥದಲ್ಲಿ ಹೈದರಾಬಾದ ಕರ್ನಾಟಕದಂತಹ ಪ್ರದೇಶಗಳು ಹಿಂದುಳಿಯಲು ಸ್ಥಳೀಯ ರಾಜಕೀಯ ಹಾಗೂ ಅಧಿಕಾರಿ ವರ್ಗ ಮತ್ತು ಹೊರಗಿನ ಅಂದರೆ ರಾಜ್ಯದ ಬೇರೆ ಪ್ರದೇಶಗಳ ರಾಜಕೀಯ ಮತ್ತು ಇಲ್ಲಿಗೆ ವರ್ಗಾವಣೆಯಾಗಿ ಬಂದ ಅಧಿಕಾರ ವರ್ಗ ಸಮನಾಗಿ ಕಾರಣವಾಗಿದ್ದಾರೆಂದು ಹೇಳಬಹುದು. ಇವರೆಲ್ಲರ ಸುಳಿಯಲ್ಲಿ ನಿಸ್ಸಹಾಯಕನಾಗಿರುವವನು ಈ ಭಾಗಗಳ ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದ ಸಾಮಾನ್ಯ ವ್ಯಕ್ತಿ.

ಅಭಿವೃದ್ಧಿ ಪ್ರಕ್ರಿಯೆಯ ಬಗ್ಗೆ ಮಾತನಾಡುವಾಗ ಅದರ ವ್ಯಾಪಕ ಅರ್ಥದ ಬಗ್ಗೆ ಕೂಡಾ ಚರ್ಚಿಸ ಬೇಕಾಗುತ್ತದೆ. ಅಭಿವೃದ್ಧಿಯ ಕೆಲಸ ಕೇವಲ ಸರ್ಕಾರದ ಹೊಣೆಗಾರಿಕೆಯಾಗಿರದೆ ಅದರಲ್ಲಿ ಸಮಾಜದ, ಇದಕ್ಕಿಂತಲೂ ಮೇಲಾಗಿ ನಾಗರಿಕ ಸಮಾಜದ ಸಂಘ ಸಂಸ್ಥೆಗಳು ಕೂಡಾ ಪಾತ್ರಧಾರಿಗಳಾಗಿರಬೇಕು. ಇಡೀ ಕರ್ನಾಟಕ ರಾಜ್ಯದ ಕಳೆದ ಕೆಲವು ದಶಕಗಳ ಇತಿಹಾಸವನ್ನು ಗಮನಿಸಿದಾಗ ನಾಗರಿಕ ಸಮಾಜದ ಭಾಗಗಳಾದ ಸಂಘ-ಸಂಸ್ಥೆಗಳು, ಕಾರ್ಯಕರ್ತರು ರಾಜ್ಯದ ಅಭಿವೃದ್ಧಿ ಮತ್ತು ಯಾವುದೇ ಸಾಮಾಜಿಕ ಮತ್ತು ಆರ್ಥಿಕ ವಿಷಯಗಳ ಕುರಿತು ಸರ್ಕಾರದ ಜೊತೆಗೆ ಚಳುವಳಿಗಳ ಮೂಲಕ ಅಥವಾ ಚರ್ಚೆಗಳ ಮುಖಾಂತರ ಗಣನೀಯ ಮಟ್ಟದಲ್ಲಿ ನಾಗರಿಕ ತಾಕಲಾಟ ಮಾಡಲಿಲ್ಲ. ನಾಗರಿಕ ಸಮಾಜದ ಕೆಲವು ಸಂಘ-ಸಂಸ್ಥೆಗಳು ಮತ್ತು ಕಾರ್ಯಕರ್ತರು ಕೆಲವು ಮಟ್ಟಿಗೆ ಕೆಲವು ವಿಷಯಗಳ ಕುರಿತು ಹೋರಾಡಿದರೂ ಅವುಗಳ ಪ್ರಭಾವ ರಾಜ್ಯಾದ್ಯಂತ ಹರಡಲಿಲ್ಲ. ಇದು ಸಮಗ್ರ ಕರ್ನಾಟಕದ ನಾಗರಿಕ ಸಮಾಜದ ಸಂಗತಿಯಾದರೆ ಹೈದರಾಬಾದ ಕರ್ನಾಟಕ ಭಾಗದ ನಾಗರಿಕ ಸಮಾಜದ ಉತ್ಕೃಷ್ಟತೆ ಇನ್ನೂ ಕಡಿಮೆ.

ರಾಜ್ಯದ ಕೆಲವು ಪ್ರದೇಶಗಳ ಅಭಿವೃದ್ಧಿಯ ಪ್ರಗತಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅಲ್ಲಿರುವ ಶೈಕ್ಷಣಿಕ ಸಂಸ್ಥೆಗಳು, ಸರ್ಕಾರೇತರ ಉಪಕ್ರಮಗಳು, ನಾಗರಿಕ ಸಮಾಜದ ಸಂಘ-ಸಂಸ್ಥೆಗಳು ಕೂಡ ಬಹು ಮುಖ್ಯ ಪಾತ್ರವನ್ನು ವಹಿಸಿವೆ. ರಾಜ್ಯದ ವಿವಿಧ ಭಾಗಗಳಲ್ಲಿ ಇರುವ ಹಾಗೆ ಹೈದರಾಬಾದ ಕರ್ನಾಟಕದಲ್ಲಿಯೂ ಅನೇಕ ದೊಡ್ಡ ದೊಡ್ಡ ಶೈಕ್ಷಣಿಕ ಸಂಸ್ಥೆಗಳಿವೆ, ನಾಗರಿಕ ಸಮಾಜದ ಭಾಗಗಳಾದ ಕಾರ್ಯಕರ್ತರು, ಸಂಘ-ಸಂಸ್ಥೆಗಳಿವೆ. ಆದರೆ, ಅನಭಿವೃದ್ಧಿ ಸ್ಥಿತಿಯ ಕುರಿತು ಇಲ್ಲಿನ ಸಾಮಾನ್ಯ ಜನರಲ್ಲಿರುವ ಪ್ರಜ್ಞೆಯ ಅನುಪಸ್ಥಿತಿಯನ್ನು ಗಮನಿಸಿದರೆ ಇಲ್ಲಿರುವ ನಾಗರಿಕ ಸಮಾಜ ಮತ್ತು ಮುಖ್ಯವಾಗಿ ಶೈಕ್ಷಣಿಕ ಸಂಸ್ಥೆಗಳು ಗಣನೀಯ ಕೆಲಸ ಮಾಡಿಲ್ಲವೆಂದು ತೋರುತ್ತದೆ. ಶಿಕ್ಷಣ ಜನರಲ್ಲಿ ತಮ್ಮ ಬೇಡಿಕೆಗಳ ಬಗ್ಗೆ ಪ್ರಜ್ಞೆ ತರುವಲ್ಲಿ ಮಹತ್ವದ ಸಾಧನ. ಅದರಲ್ಲೂ ಪ್ರಾಥಮಿಕ ಶಿಕ್ಷಣ ಈ ದಿಸೆಯಲ್ಲಿ ಬಹು ಪರಿಣಾಮಕಾರಿಯಾದ ಸಾಧನ. ಈ ಭಾಗದ ಗ್ರಾಮೀಣ ಪ್ರದೇಶಗಳಲ್ಲಿ ಪ್ರಾಥಮಿಕ ಶಿಕ್ಷಣದ ಕುರಿತು ಇನ್ನೂ ನೂರಾರು ಸಮಸ್ಯೆಗಳಿವೆ. ಇಲ್ಲಿನ ಖಾಸಗಿ ಶೈಕ್ಷಣಿಕ ಸಂಸ್ಥೆಗಳ ಬಗ್ಗೆ ಹೇಳಬೇಕೆಂದರೆ, ಅವುಗಳು ವೃತ್ತಿಪರ ಶಿಕ್ಷಣಗಳಾದ ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣಕ್ಕೆ ಕೊಟ್ಟಷ್ಟು ಮಹತ್ವವನ್ನು ಗ್ರಾಮೀಣ ಪ್ರದೇಶಗಳ ಪ್ರಾಥಮಿಕ ಶಿಕ್ಷಣಕ್ಕೆ ಕೊಟ್ಟಿಲ್ಲ.

ಜನರಲ್ಲಿ ತಮ್ಮ ಬೇಡಿಕೆಗಳ ಬಗ್ಗೆ ತಮ್ಮ ರಾಜಕೀಯ ಪ್ರತಿನಿಧಿಗಳಿಗೆ ಈಡೇರಿಸುವಂತೆ ಒತ್ತಾಯ ಮಾಡುವ ಪ್ರಜ್ಞೆ ಬರಲು ನಾಗರಿಕ ಸಮಾಜ ನಮ್ಮಂತಹ ದೇಶಗಳಲ್ಲಿ ಇನ್ನೂ ಹೆಚ್ಚು ಕ್ರಿಯಾಶೀಲವಾಗಿ ಕೆಲಸ ಮಾಡುವ ಅನಿವಾರ್ಯತೆ ಇದೆ. ಈ ವಿಷಯದಲ್ಲಿ ಈ ಭಾಗದ ನಾಗರಿಕ ಸಮಾಜವು ಸಫಲವಾಗಿಲ್ಲ. ಈ ಪ್ರದೇಶದ ಸಾಮಾನ್ಯ ಜನರ ಬೇಡಿಕೆಗಳನ್ನು ಅರಿತುಕೊಂಡು ಜನರ ಜೊತೆ ಬೆರೆತು ಸರ್ಕಾರಕ್ಕೆ ಅವರ ಬೇಡಿಕೆಗಳನ್ನು ಸರಿಯಾಗಿ ಸ್ಪಷ್ಟೋಚ್ಚಾರಣೆ ಮಾಡುವ ಇಡೀ ಹೈದರಾಬಾದ ಕರ್ನಾಟಕಕ್ಕೆ ಸಂಬಂಧಿಸಿದ ಅಖಂಡ ನಾಗರಿಕ ಸಮಾಜದ ಕೊರತೆ ಈ ಭಾಗದಲ್ಲಿದೆ.




ಈ ಭಾಗದ ಚಳುವಳಿಗಳ ಇತಿಹಾಸದತ್ತ ಸ್ವಲ್ಪ ಗಮನ ಹರಿಸಿದಾಗ ಈ ಭಾಗವು ರಾಜ್ಯದ ಯಾವುದೇ ಇತರ ಪ್ರದೇಶಗಳಿಗೆ ಹಿಂದಿಲ್ಲ. ಇಲ್ಲಿಯೂ ಬಹು ಕಾಲದಿಂದ ಅನೇಕ ಚಳುವಳಿಗಳು ಜರುಗಿವೆ. ಸಾಮಾಜಿಕ ಬದಲಾವಣೆಗಾಗಿ ಬಸವಣ್ಣನವರು ಕ್ರಾಂತಿ ಪ್ರಾರಂಭಿಸಿದ ಇದೇ ಭಾಗದಿಂದ. ಸಾಹಿತ್ಯದ ಮುಖಾಂತರ ಸಾಮಾಜಿಕ ಸಮಸ್ಯೆಗಳನ್ನು ವಿರೋಧಿಸಿದ ಅನೇಕ ವಚನಕಾರರು ಈ ಭಾಗದವರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮತ್ತು ನಿಜಾಮರ ಆಳ್ವಿಕೆಯನ್ನು ತೊಲಗಿಸುವ ಚಳುವಳಿಯಲ್ಲಿ ಈ ಭಾಗದ ಅನೇಕ ಹೋರಾಟಗಾರರು ಬಹು ಮುಖ್ಯವಾದ ಪಾತ್ರವನ್ನು ವಹಿಸಿದ್ದಾರೆ. ಆದರೆ, ಏಕೀಕರಣದ ಫಲವಾಗಿ ಈ ಭಾಗವು ಈಗಿನ ಕರ್ನಾಟಕ ರಾಜ್ಯಕ್ಕೆ ಸೇರಿದಾಗಿನಿಂದ ಈವರೆಗೆ ಇಲ್ಲಿ ಯಾವುದೇ ಮಹತ್ತರ ಹೋರಾಟಗಳು ನಡೆಯಲಿಲ್ಲ.

ಇತ್ತೀಚೆಗೆ ಚಳುವಳಿ ಮತ್ತು ಹೋರಾಟಗಳ ವಿಷಯದಲ್ಲಿ ಕೆಲವೊಂದು ಅಲ್ಪ ಸ್ವಲ್ಪ ಬದಲಾವಣೆ ಗಳನ್ನು ಈ ಭಾಗದಲ್ಲಿ ಕಾಣಬಹುದು. ಕೆಲವೊಂದು ಸಾಮಾಜಿಕ ಕಳಕಳಿ ಇರುವ ಕಾರ್ಯಕರ್ತರು ಮೇಲಿಂದ ಮೇಲೆ ಹೋರಾಟ ಮತ್ತು ಪ್ರತಿಭಟನೆಗಳ ಮುಖಾಂತರ ಇಲ್ಲಿನ ಕೆಲವು ಸಮಸ್ಯೆಗಳನ್ನು ಸಾರ್ವಜನಿಕ ವಲಯಕ್ಕೆ ತಂದು ಜನರನ್ನು ಜಾಗೃತಗೊಳಿಸುತ್ತಿದ್ದಾರೆ. ಆದರೆ, ಈ ಹೋರಾಟಗಳನ್ನು ಹೈದರಾಬಾದ ಕರ್ನಾಟಕಾದ್ಯಂತ ಪಸರಿಸಿದ ಮತ್ತು ಪ್ರಭಾವ ಬೀರುವ ಹೋರಾಟಗಳೆಂದು ಕರೆಯಲು ಬರುವದಿಲ್ಲ. ಈ ಭಾಗದ ಅಭಿವೃದ್ಧಿಯ ಕುರಿತು ಚರ್ಚೆ ಮತ್ತು ಹೋರಾಟಗಳನ್ನು ಮಾಡುವ ಈಗಿರುವ ಅನೇಕ ಚಳುವಳಿಗಳು ಬಹುಮಟ್ಟಿಗೆ ರಾಜಕೀಯ ಧುರೀಣರ ನೇತೃತ್ವದಲ್ಲಿರುವದರಿಂದ ಈ ಹೋರಾಟಗಳಿಗೆ ರಾಜಕೀಯದಿಂದ ಸ್ವತಂತ್ರವಿರುವ ನಾಗರಿಕ ಹೋರಾಟಗಳೆಂದು ಕರೆಯಲಾಗುವದಿಲ್ಲ. ಇಂತಹ ಹೋರಾಟಗಳಲ್ಲಿ ಸಕ್ರಿಯವಾಗಿರುವ ರಾಜಕೀಯ ಧುರೀಣರು ತಾವು ಗುರುತಿಸಿಕೊಂಡ ಪಕ್ಷಗಳು ಅಧಿಕಾರಕ್ಕೆ ಬಂದಾಗ ಹೋರಾಟದ ಆಶಯಗಳಿಗೆ ಪೂರಕವಾಗಿ ವರ್ತಿಸುತ್ತಾರೆಂಬುದಕ್ಕೆ ಯಾವುದೇ ಖಾತ್ರಿ ಇಲ್ಲ. ಹೀಗಾದಾಗ ಈ ಹೋರಾಟದಲ್ಲಿ ವಿಶ್ವಾಸವಿಟ್ಟಿರುವ ಸಾಮಾನ್ಯ ಜನತೆ ಇಂತಹ ಹೋರಾಟಗಳ ಬಗ್ಗೆ ತಿರಸ್ಕಾರ ಮನೋಭಾವನೆ ಬೆಳೆಸಿಕೊಳ್ಳುವ ಸಾಧ್ಯತೆಗಳೇ ಹೆಚ್ಚು. ರಾಜಕೀಯ ಪಕ್ಷಗಳು ಮತ್ತು ಅವುಗಳ ಆದರ್ಶಗಳಿಂದ ದೂರಾದ ಸ್ವತಂತ್ರ ನಾಗರಿಕ ಸಮಾಜದ ಚಳುವಳಿಗಳಾದರೆ ಅವುಗಳಲ್ಲಿ ಸ್ಥಿರತೆ ಮತ್ತು ಆಶಯಗಳ ಪೂರೈಕೆಗಳಿಗಾಗಿ ಹೋರಾಡಲೇಬೇಕೆಂಬ ದೃಢಮನಸ್ಸು ಕಾಣಬಹುದಾಗಿದೆ. ನಾಗರಿಕ ಸಮಾಜವು ಸ್ವತಂತ್ರವಾಗಿ ಹೋರಾಟ ಮಾಡಿ ಅನೇಕ ವಿಷಯಗಳಲ್ಲಿ ಸಫಲವಾದ ಉದಾರಣೆಗಳು ಇತ್ತೀಚೆಗೆ ದೇಶದಲ್ಲಿ ಬಹಳಷ್ಟು ಇವೆ. ಅಭಿವೃದ್ಧಿ ಕುರಿತು ಸಫಲತೆಗಾಗಿ ಹೈದರಾಬಾದ ಕರ್ನಾಟಕ ಭಾಗಕ್ಕೂ ಸ್ವತಂತ್ರವಾದ ನಾಗರಿಕ ಸಮಾಜದ ಅವಶ್ಯವಿದೆ.

ಈ ಭಾಗದ ಸಮಗ್ರ ಅಭಿವೃದ್ಧಿಯ ನಿಟ್ಟಿನಲ್ಲಿ ರಾಜ್ಯ ಸರ್ಕಾರವು ಇಲ್ಲಿನ ಸ್ಥಳೀಯ ಕುಂದುಕೊರತೆಗಳನ್ನು ಸರಿಯಾಗಿ ಅರಿತು ಇಲ್ಲಿಯ ನಾಗರಿಕ ಸಮಾಜ ಮತ್ತು ನೌಕರಶಾಹಿಯ ನಡುವೆ ಸಾಮರಸ್ಯ ಬೆಳೆಸಿ, ಇಲ್ಲಿಯ ಜನರಿಗೆ ನಿಜವಾದ ಸ್ವಾತಂತ್ರ್ಯ ಮತ್ತು ವಿಮೋಚನೆ ಒದಗಿಸಿದರೆ ಪ್ರತಿವರ್ಷ ಆಚರಿಸುವ ಸ್ವಾತಂತ್ರ್ಯ ಮತ್ತು ವಿಮೋಚನಾ ದಿನಗಳಿಗೆ ನಿಜವಾದ ಅರ್ಥ ಸಿಗುತ್ತದೆ. ಅಲ್ಲದೆ, ಇಲ್ಲಿನ ನಾಗರಿಕ ಸಮಾಜದ ಭಾಗಗಳಾದ ಕಾರ್ಯಕರ್ತರು, ಸಂಘ-ಸಂಸ್ಥೆಗಳು, ಮತ್ತು ಸಮೂಹ ಮಾಧ್ಯಮಗಳು ನೈಜ ಸ್ವಾತಂತ್ರ್ಯ ಮತ್ತು ವಿಮೋಚನೆಯ ಬಗ್ಗೆ ಜನರಲ್ಲಿ ಪ್ರಜ್ಞೆ ಮೂಡಿಸಲು ಇನ್ನೂ ಹೆಚ್ಚಿನ, ಪ್ರಜ್ಞಾಪೂರ್ವಕವಾದ ಕೆಲಸ ಮಾಡಬೇಕಾದ ಅವಶ್ಯಕತೆ ಇದೆ.

**ಡಾ|| ಪ್ರಕಾಶ ದೇಸಾಯಿ**
ಸಹಾಯಕ ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ವಿಭಾಗ
ಗೋವಾ ವಿಶ್ವವಿದ್ಯಾಲಯ, ಗೋವಾ

# ಇವರಿಗಿಷ್ಟು ಬೆಳಕ ನೀಡಿ

ಅಮೇರಿಕದ ಅಧ್ಯಕ್ಷ ಬರಾಕ್ ಒಬಾಮಾ ಭಾರತದ ಯುವಜನತೆಯನ್ನು ನೋಡಿ ನಾವು ಕಲಿಯಬೇಕಾದ್ದು ಬಹಳ ಇದೆ ಎಂದು ಅಲ್ಲಿನ ವಿಶ್ವವಿದ್ಯಾಲಯದ ಕಾರ್ಯಕ್ರಮವೊಂದರಲ್ಲಿ ಹೇಳಿದ್ದರು. ಇಂದು ಅಮೇರಿಕದ ಆರ್ಥಿಕ ಅಭಿವೃದ್ಧಿಯಲ್ಲಿ ಭಾರತೀಯ ಯುವಜನತೆಯದು ಸಿಂಹಪಾಲು ಮಾತ್ರವಲ್ಲ, ಅಲ್ಲಿನ ರಾಜಕೀಯ ವಲಯದಲ್ಲೂ ಭಾರತೀಯ ಯುವಜನತೆ ತನ್ನ ಸ್ಥಾನವನ್ನು ಗಟ್ಟಿಮಾಡಿ ಕೊಳ್ಳುತ್ತಿದೆ. ಇದು ಅಮೇರಿಕದಲ್ಲಿ ಸಾಧ್ಯವಾಗಬಹುದಾದರೆ ಭಾರತದಲ್ಲಿ ಏಕೆ ಸಾಧ್ಯವಾಗುತ್ತಿಲ್ಲ ಎಂಬ ಪ್ರಶ್ನೆಯನ್ನು ನಮಗೆ ನಾವೇ ಹಾಕಿಕೊಳ್ಳುವುದು ಉಚಿತ. ಇಲ್ಲಿ ಯುವಜನತೆಯನ್ನು ಅನ್ಯಮಾರ್ಗಕ್ಕೆ ಎಳೆಯಬಲ್ಲ ಸಾಕಷ್ಟು ಶಕ್ತಿ (?)ಗಳು ಕೆಲಸ ಮಾಡುತ್ತಿವೆ. ಅವು ಕೆಲವು ನಾಯಕರ ಛತ್ರಛಾಯೆಯಲ್ಲಿ ನಡೆಯುತ್ತವೆ.

**ನೂತನ ಎಂ. ದೋಶೆಟ್ಟಿ**

**ಉದಾಹರಣೆ – ೧**

ಸ್ನೇಹಿತೆಯೊಬ್ಬಳು ಸುಂದರಿ. ಅದಕ್ಕೆ ಒಪ್ಪುವಂತೆ ಚೆನ್ನಾಗಿ ಉಡುಪು ತೊಡುವವಳು. ಕೆಲ ವರ್ಷಗಳ ಹಿಂದೆ ಆಕೆ ತನ್ನ ಉದ್ಯೋಗವನ್ನೇ ಬಿಟ್ಟುಬಿಡುತ್ತೇನೆ ಎನ್ನುವ ನಿರ್ಧಾರಕ್ಕೆ ಬಂದಿದ್ದಳು. ಅವಳು ಕೊಟ್ಟ ಕಾರಣ ತನ್ನ ಆಫೀಸಿನಲ್ಲಿ ಸಹೋದ್ಯೋಗಿ ಸ್ತ್ರೀಯರಿಂದ ಮಾನಸಿಕ ಹಿಂಸೆ. ತನ್ನ ಉಡುಪು, ತೊಡಪುಗಳಿಂದ ಹಿಡಿದು ಎಲ್ಲ ಚಲನವಲನಗಳ ಮೇಲೆ ನಿಗಾ ಇಡುವ ಅವರ ನಡುವೆ ನನಗೆ ಕೆಲಸ ಮಾಡಲು ಕಷ್ಟ ಎಂಬುದು ಅವಳ ನೋವು. ಅದಕ್ಕೆ ಅವಳ ಸಹೃದಯ ವೈದ್ಯ ಪತಿ ಅವಳನ್ನು ಸಂತೈಸಿ, ಈಗ ಅವಳು ಆ ಅರೆಬೆಂದ ಮಾತುಗಳನ್ನು ಜೀರ್ಣಿಸಿಕೊಂಡು ಬದುಕುವುದನ್ನು ಕಲಿತಿದ್ದಾಳೆ. ಅವಳ ಸಹೋದ್ಯೋಗಿಗಳಲ್ಲಿ ಬಹುತೇಕರು ಮಧ್ಯವಯಸ್ಸಿನವರು.

**ಉದಾಹರಣೆ – ೨**

ಅಂದು ಗೆಳತಿಯ ಕಛೇರಿಯ ಆವರಣದಲ್ಲಿ ಭೇಟಿಗಾಗಿ ಬರುತ್ತಿರುವ ಅತಿಥಿಗಾಗಿ ನಾವಿಬ್ಬರೂ ಕಾಯುತ್ತಿರುವಾಗ ಎದುರಿಂದ ಅವಳ ಇಬ್ಬರು ಸಹೋದ್ಯೋಗಿಗಳು ಮುಸಿಮುಸಿ ನಗುತ್ತ ಬಂದರು. ತಮ್ಮ ತಮ್ಮಲ್ಲೇ ಏನೋ ಹೇಳಿಕೊಂಡು ತಮ್ಮ ಎದುರಿಗಿದ್ದವರನ್ನು ಆಡಿಕೊಂಡು ನಕ್ಕರು. ಅವರನ್ನು ಅವಮಾನಿಸಲೆಂದೇ ಹಾಗೆ ಮಾಡಿದ್ದು ಎಂದು ಅವರು ಮೂವರಿಗೆ ಬಿಟ್ಟು ಬೇರೆಯವರಿಗೆ ತಿಳಿಯದ ಹಾಗೆ ಅವರ ನಡವಳಿಕೆ ಇತ್ತು. ಗೆಳತಿ ಹೇಳಿದಂತೆ ಅವರಿಬ್ಬರೂ ಸಮಾಜಬಂಧದ ಹೊರಗೆ ಸಂಬಂಧವನ್ನು ಹೊಂದಿದ್ದವರು ಎಂಬುದನ್ನು ಇಲ್ಲಿ ಹೇಳಲೇಬೇಕು. ಈ ಅಪಹಾಸ್ಯ, ಅವಮಾನ ಹೊಸದೇನಲ್ಲ. ಕಛೇರಿ, ಮನೆ, ನೆರೆ ಹೊರೆ ಮುಂತಾದ ಆಪ್ತ ವಲಯಗಳಲ್ಲಿ ಇದು ತೀರ ಸಾಮಾನ್ಯ ಎನ್ನುವ ಹಂತಕ್ಕೆ ತಲುಪಿದ್ದೇವೆ. ಆದರೆ ಈಗ ಹೇಳಿದ ಯಾರೂ ಸಣ್ಣ ವಯಸ್ಸಿನವರಲ್ಲ. ಮಧ್ಯವಯಸ್ಸಿನವರು ಎಂಬುದು ಇಲ್ಲಿ ಮುಖ್ಯ.

**ಉದಾಹರಣೆ – ೩**

ದಿನವೂ ನಾವು ವಾಯುವಿಹಾರಕ್ಕೆ ಹೋಗುವಲ್ಲಿ ಸುಮಾರು ೬೫ ವರ್ಷ ಪ್ರಾಯ ದಾಟಿದ ಆರೇಳು ಹೆಂಗಸರು ವಾಕ್ ಮಾಡುತ್ತ ನಡೆಸುವ ಸಂಭಾಷಣೆ ಸದಾ ತಮ್ಮ ಮನೆಯ, ಅದರಲ್ಲೂ ಸೊಸೆಯ–ಮಗನ ಸುತ್ತಲೇ ಇರುತ್ತದೆ ಎನ್ನುವುದು ಸ್ವಲ್ಪ ಸೋಜಿಗವೇ. ಅವರೆಲ್ಲರೂ ತಮ್ಮ ಮಗಳು–ಅಳಿಯನನ್ನು ಹೊಗಳುತ್ತ, ಮಗ–ಸೊಸೆಯನ್ನು ತೆಗಳುವುದು ಸರ್ವೇಸಾಮಾನ್ಯ. ಇಲ್ಲಿ ಒಂದು ಕಡೆ ಒಳ್ಳೆಯತನವಾಗಿ ಕಾಣಿಸುವುದು ಇನ್ನೊಂದು ಕಡೆ ಅಪರಾಧವಾಗಿದೆ.

* * *

ಈ ಮೂರು ಉದಾಹರಣೆಗಳನ್ನು ಕೊಡುವ ಸಂದರ್ಭದಲ್ಲಿ ಮನದಲ್ಲಿ ಕಾಡುತ್ತಿದ್ದುದು ಇಂದಿನ ಯುವಜನರ ಮುಂದಿರುವ ಸವಾಲು. ಇಂದಿನ ಯುವಜನತೆ ಗೊಂದಲದ ಸ್ಥಿತಿಯಲ್ಲಿದೆ ಎಂಬುದು ಎಲ್ಲ ಕಡೆಯಿಂದ ಕೇಳಿಬರುತ್ತಿರುವ ಮಾತು. ಅಂದರೆ ಹಿಂದೆಂದೂ ಅವರ ಬಗ್ಗೆ ಇಂತಹ ಕಳವಳ, ಭಯ, ಆತಂಕ ವ್ಯಕ್ತವಾಗಿರಲೇ ಇಲ್ಲ ಎಂದಲ್ಲ. ಇದು ಈ ಹಿಂದಿನ ಎಲ್ಲ ತಲೆಮಾರುಗಳಿಂದಲೂ ಕೇಳಿಬರುತ್ತಿರುವ ಮಾತೇ. ಒಂದು ಜನಾಂಗಕ್ಕೆ ತನ್ನ ಮುಂದಿನ ಜನಾಂಗವನ್ನು ಅರಿಯಲಾಗದೆಯೋ ಅಥವಾ ಅದರ ವೇಗಕ್ಕೆ ಹೊಂದಿಕೊಳ್ಳಲಾಗದೆಯೋ ಇಂತಹ ಮಾತುಗಳು ಸಹಜವಾಗಿ ಕೇಳಿಬರುತ್ತವೆ. ಆದರೆ ಪ್ರತಿ ಜನಾಂಗದ ಬಗ್ಗೆ ಈ ಮಾತು ವ್ಯಕ್ತವಾದಾಗಲೂ ಪ್ರಕಟವಾಗುವ ತೀವ್ರತೆಯ ಪ್ರಮಾಣವೂ ಸಾಕಷ್ಟು ಇರುತ್ತದೆ ಎಂಬುದನ್ನೂ ನಾವು ಗಮನಿಸಬೇಕು.

ಇತ್ತೀಚೆಗೆ ಅನೇಕ ಸಂಘ ಸಂಸ್ಥೆಗಳು ಯುವಜನರ ಬಗ್ಗೆ ಕೈಗೊಂಡಿರುವ ಸರ್ವೇಗಳು ಕೆಲವು ಕಳವಳಕಾರಿ ಫಲಿತಾಂಶಗಳನ್ನು ಹೊರಹಾಕಿವೆ. ಅವುಗಳಲ್ಲಿ ಯುವಜನರಲ್ಲಿ ಹೆಚ್ಚುತ್ತಿರುವ ಮದ್ಯವ್ಯಸನದಿಂದ ಹಿಡಿದು ಹಿರಿಯರ ಬಗ್ಗೆ ಗೌರವವೇ ಇಲ್ಲದಿರುವುದರ ತನಕ ವಿಭಿನ್ನ ಸಮಸ್ಯೆಗಳನ್ನು ಇವು ಬಿಂಬಿಸುತ್ತವೆ. ಅಂಕಿ–ಅಂಶಗಳು ಬಹುತೇಕವಾಗಿ ಕೆಲವು ಊರು,



ಕೆಲವು ಜಿಲ್ಲಾ ಕೇಂದ್ರಗಳು, ಬೇರೆ ಬೇರೆ ರಾಜ್ಯಗಳ ಕೆಲವು ಪ್ರದೇಶಗಳನ್ನು ಪರಿಗಣಿಸಿ ಮಾಡಿದಂಥವು. ಹೀಗೆ ಸಾವಿರವೋ ಅಥವಾ ಕೆಲವಾರು ಸಾವಿರವೋ ಇರುವಷ್ಟು ಪುಟ್ಟ ಜನಸಂಖ್ಯೆಯಿಂದ ಹೊರಹೊಮ್ಮಿದ ಫಲಿತಾಂಶ ರಾಷ್ಟ್ರವ್ಯಾಪಿ ಗಣನೆಗೆ ಎಷ್ಟು ಸೂಕ್ತ ಎನ್ನುವ ಮೂಲಭೂತ ಪ್ರಶ್ನೆಯನ್ನು ಹಾಕಿಕೊಳ್ಳುತ್ತಲೇ ಆ ಫಲಿತಾಂಶ ಒಂದು ದೊಡ್ಡ ಸಮಾಜದ ಮೇಲೆ ಬೀರುವ ಪರಿಣಾಮದ ಅಗಾಧತೆಯ ಬಗ್ಗೆಯೂ ಕಳವಳವಾಗುತ್ತದೆ. ಇಂತಹ ಸರ್ವೇಗಳು ಬಹುತೇಕವಾಗಿ ಇಂದಿನ ಯುವಜನತೆ ನಿಷ್ಪ್ರಯೋಜಕ ಎಂದೇ ಬಿಂಬಿಸುತ್ತಿರುವುದು ಆಘಾತಕಾರಿ ಅಂಶ.



ಮೇಲೆ ಹೇಳಿದ ಮೂರು ಉದಾಹರಣೆಗಳನ್ನು ಇನ್ನೊಮ್ಮೆ ಪರಿಶೀಲಿಸೋಣ. ಅವರೆಲ್ಲ ಮಧ್ಯವಯಸ್ಕರು. ಅದಕ್ಕೆ ತಕ್ಕುದಾದ ಅಪೇಕ್ಷಿತ ಬೌದ್ಧಿಕ ಮಟ್ಟ ಹೊಂದಿದವರು ಎಂದು ಒಪ್ಪಿಕೊಳ್ಳುವುದಾದಲ್ಲಿ ಅವರ ನಡವಳಿಕೆಗಳು ಯಾವ ಮಾದರಿಗಳನ್ನು ಪ್ರತಿನಿಧಿಸುತ್ತಿವೆ? ಇವರ ಮನೆಯಲ್ಲಿರುವ ಯುವಜನತೆ ಅಥವಾ ಇವರನ್ನು ನೋಡಿ ಬೆಳೆಯುವ ಯುವಜನತೆ, ಇವರ ಸುತ್ತಮುತ್ತಲ ಪರಿಸರದಲ್ಲಿರುವ ಯುವಜನತೆ, ಇವರಿಂದ ಕಲಿಯುವುದಾದರೂ ಏನು? ಹಿಂದೆ ಗುರು ಇದ್ದ, ಮುಂದೆ ಗುರಿ ಇತ್ತು ಎಂದು ಇವತ್ತಿಗೂ ಅಲವತ್ತುಕೊಳ್ಳುವ ನಾವು ನಮ್ಮ ಯುವಜನತೆಯ ಎದುರು ಎಂತಹ ಮಾದರಿಗಳನ್ನು ನಿಲ್ಲಿಸಿದ್ದೇವೆ ಎಂಬುದನ್ನು ನೋಡೋಣ.

ದೇಶದಲ್ಲಿ ಈಗ ಅಪ್ರಾಪ್ತರ ಮೇಲೆ ಆಗುತ್ತಿರುವ ಅತ್ಯಾಚಾರ, ದೌರ್ಜನ್ಯಗಳಲ್ಲಿ ಭಾಗಿಗಳಾಗುತ್ತಿರುವವರಲ್ಲಿ ಮಧ್ಯವಯಸ್ಕರೂ ಇದ್ದಾರೆ ಎಂಬುದನ್ನು ನಾವು ಗಮನಿಸಬೇಕಾಗಿದೆ. ಲಿವಿಂಗ್ ರಿಲೇಶನ್‌ಶಿಪ್, ವಿವಾಹೇತರ ಸಂಬಂಧಗಳು ಇವುಗಳಲ್ಲೂ ಮಧ್ಯವಯಸ್ಕರ ಕೊಡುಗೆಯೇನೂ ಕಮ್ಮಿಯಿಲ್ಲ. ಈ ಎಲ್ಲವನ್ನು ತಾವು ಮಾಡದಿದ್ದರೂ ಅವುಗಳನ್ನು ಬಾಯಿ ಚಪ್ಪರಿಸಿ ಮಾತಾಡುವ ಮಧ್ಯ ವಯಸ್ಸಿನ ಗಂಡು-ಹೆಣ್ಣುಗಳ ದೊಡ್ಡ ಸಮೂಹವೇ ಇರುವುದು ಸುಳ್ಳಲ್ಲ. ಇದಕ್ಕೆ ವಿದ್ಯಾವಂತ-ಅವಿದ್ಯಾವಂತ ಎಂಬ ಭೇದವಿಲ್ಲ. ಕಛೇರಿಗಳಲ್ಲಿ ಚಹಾ ಸೇವನೆಯ ಸಮಯದಲ್ಲೋ, ಊಟದ ಸಮಯದಲ್ಲೊ ಕಛೇರಿಯ ಕೆಲಸಕ್ಕೆ ಸೀಮಿತವಾದ ಮಾತುಗಳೊಂದಿಗೆ ಅಲ್ಲಿರುವ ಗಂಡು-ಹೆಣ್ಣುಗಳ ಬಗೆಗಿನ ಮಾತುಕತೆಗಳು, ಸರ್ಕಾರದಿಂದ ವೇತನ ಪರಿಷ್ಕರಣೆ, ಮನೆ, ಬಾಡಿಗೆ, ಸೈಟು, ಬಂಗಾರ, ಒಡವೆ ಮುಂತಾದ ಮಾತುಕತೆಗಳೇ ಹೆಚ್ಚು ನಡೆಯುತ್ತವೆ. ಆದರೆ ಇವುಗಳ ಬಗ್ಗೆ ಯಾವ ಸರ್ವೇಗಳೂ ನಡೆಯುವುದಿಲ್ಲ. ಅಧಿಕಾರಿ ವರ್ಗ ತನ್ನ ಕೈ ಕೆಳಗೆ ದುಡಿಯುವ ಕೆಲ ಹೆಣ್ಣುಗಳನ್ನು ತನಗೆ ಬೇಕಾದ ರೀತಿಯಲ್ಲಿ ದುಡಿಸಿಕೊಂಡರೆ, ತನಗೆ ಅನುಕೂಲವಾಗುವಂತಹ ವಾತಾವರಣವನ್ನು ನಿರ್ಮಾಣ ಮಾಡಿಕೊಳ್ಳಲು ಇನ್ನೊಂದು ಹೆಣ್ಣು ವರ್ಗವೂ ಪ್ರಯತ್ನಿಸುವುದು ಈ ಹಿಂದಿನ ವರ್ಷಗಳಂತೆ ತೆರೆಮರೆಯ ಆಟವಾಗಿ ಉಳಿದಿಲ್ಲ. ಇದೆಲ್ಲ ರಾಜಾರೋಷವಾಗಿ ನಡೆದು ಒಂದು ವೇಳೆ ಮಿತಿಮೀರುವ ಪ್ರಸಂಗ ಬಂದರೆ ತೇಪೆ ಹಚ್ಚುವ ಕಾರ್ಯವಂತೂ ಇದ್ದೇ ಇದೆ. ಇಂತಹ ಹಿರಿಯರು ಯಾವ ಮಾದರಿಗಳನ್ನು ಇಂದಿನ ಯುವಜನತೆಗೆ ಕೊಡಬಲ್ಲರು? ಈ ಮಾತುಗಳು ಬಹಳ ಕಟು ಎನ್ನಿಸಿದರೂ ಅವುಗಳ ಹಿಂದಿನ ಸತ್ಯಾಸತ್ಯತೆಗಳ ಪರಿಶೀಲನೆಯಾಗಲಿ ಎನ್ನುವುದು ಓದುಗರಲ್ಲಿ ನನ್ನ ಮನವಿ.

ಹಿರಿಯರಿಗೆ ಇಂದಿನ ಯುವಜನತೆ ಗೌರವ ನೀಡುವುದಿಲ್ಲ ಎನ್ನುವ ಒಂದು ಪುಕಾರು ಈಗ ಹೆಚ್ಚು ಕೇಳಿಬರುತ್ತಿದೆ. ಮಹಾನಗರಗಳಲ್ಲಿ ವೃದ್ಧಾಶ್ರಮಗಳು ಪ್ರಾರಂಭವಾಗಿ ದಶಕಗಳೇ ಕಳೆದಿವೆ. ಇಲ್ಲಿರುವ ವೃದ್ಧರನ್ನು ಆಶ್ರಮಗಳ ಆಶ್ರಯದಲ್ಲಿ ತಂದು ನಿಲ್ಲಿಸಿದವರು ಇಂದಿನ ಯುವಜನರ ಎರಡು ತಲೆಮಾರುಗಳ ಹಿಂದಿನವರು ಎಂಬುದನ್ನು ಮರೆಯಬಾರದು. ವಿದೇಶದಲ್ಲಿ ನೆಲೆಸಿರುವ ಉದ್ಯೋಗಸ್ಥ ಪತಿ - ಪತ್ನಿಯರು ತಮ್ಮ ವಯೋವೃದ್ಧ ತಂದೆ - ತಾಯಿಯರ ದೇಖರೇಖಿಗೆ, ತಮ್ಮ ಭಾರತದ ಮಿತ್ರನಿಗೆ ಎಷ್ಟು ಹಣ ಬೇಕಾದರೂ ಕೊಟ್ಟಾರು. ಆದರೆ ಇಳಿವಯಸ್ಸಿನಲ್ಲಿ ಅವರಿಗೆ ಬೇಕಾಗುವ ಮಾನಸಿಕ, ಸಾಮಾಜಿಕ ಭದ್ರತೆಯನ್ನು ಮಾತ್ರ ನೀಡಲಾರರು. ಇಂತಹ ಮಾದರಿಗಳ ಎದುರು ಬೆಳೆದ ಅವರ ಮಕ್ಕಳಿಗೆ ವೃದ್ಧ ತಂದೆ-ತಾಯಿಯರ ಆರೈಕೆಯ ಮಹತ್ವ, ಅದರ ಅಗತ್ಯ, ಅವರಿಗೆ ಗೌರವ ಮುಂತಾದುವುಗಳ ಬಗ್ಗೆ ಕಲಿಯಲು ಸಾಧ್ಯವೇ ? ಅವರು ಬೆಳೆದಂತೆ ತಮ್ಮ ತಂದೆ-ತಾಯಿಯರ ಬಗ್ಗೆ ಅಂತಹುದೇ ಪ್ರತಿಕ್ರಿಯೆ ತೋರಿಸುವುದಿಲ್ಲವೇ ?




ನಮ್ಮ ದೇಶದಲ್ಲಿ ಅತಿ ಹೆಚ್ಚು ಅಕ್ಷರಸ್ಥರನ್ನು, ಅಂದರೆ ೯೩.೯೧ % ಹೊಂದಿರುವ ಕೇರಳದಲ್ಲಾಗಲಿ, ಅತಿ ಕಡಿಮೆ ಅಂದರೆ ೬೩.೮೨ % ಇರುವ ಬಿಹಾರದಲ್ಲಾಗಲಿ ನಡೆಯುತ್ತಿರುವ ವಿವಿಧ ದೌರ್ಜನ್ಯಗಳಿಗೆ ಹೋಲಿಸಿದಾಗ ಎರಡರಲ್ಲೂ ಬಹಳ ವ್ಯತ್ಯಾಸ ಕಾಣುವುದಿಲ್ಲ. ಬಿಹಾರದಲ್ಲಿ ಅತ್ಯಾಚಾರಗಳು ಹೆಚ್ಚಿದ್ದರೆ, ಕೇರಳದಲ್ಲಿ ವರದಕ್ಷಿಣೆಯ ಅಟ್ಟಹಾಸವಿದೆ. ಅತಿ ಹೆಚ್ಚು ಅಕ್ಷರಸ್ಥರನ್ನು ಹೊಂದಿರುವ ಕೇರಳದಲ್ಲಿ, ದೇಶದ ಉಳಿದ ಭಾಗಗಳಿಗೆ ಹೋಲಿಸಿದರೆ ಸಾವಿರ ಪುರುಷರಿಗೆ ಅತಿ ಹೆಚ್ಚು ಮಹಿಳೆಯರನ್ನು ಹೊಂದಿರುವ ಈ ರಾಜ್ಯದಲ್ಲಿ ವರದಕ್ಷಿಣೆ ಏಕೆ ತೊಲಗಿಲ್ಲ ? ಇದು ದಶಕಗಳಿಂದ ನಡೆದು ಬಂದ ಪರಂಪರೆ ಎಂದಾದರೆ ಅದಕ್ಕೆ ಯಾರು ಹೊಣೆ ?

ಈ ಮಾತುಗಳನ್ನು ಹೇಳುವಾಗ ಯುವಜನತೆಯ ತಪ್ಪು ಏನೂ ಇಲ್ಲ ಎನ್ನುವ ವಾದದ ಪುಷ್ಟೀಕರಣ ಖಂಡಿತಾ ಇಲ್ಲ. ಆದರೆ ಯುವಜನತೆಯ ಎದುರು ಆದರ್ಶ ಸಾಮಾಜಿಕ, ಕೌಟುಂಬಿಕ ಮಾದರಿಗಳನ್ನೇ ಇಡದೆ ಅವರಿಂದ ಎಲ್ಲ ಒಳಿತನ್ನೂ ನಿರೀಕ್ಷಿಸುವುದು ಒಂದು ರೀತಿಯಲ್ಲಿ ಅಪರಾಧವಾದೀತು ಎಂಬ ಮಾತನ್ನು ಹೇಳುವುದೇ ಆಗಿದೆ.

ಇನ್ನು ರಾಜಕೀಯವಾಗಿ ಯಾವ ಮಾದರಿಗಳನ್ನು ಇಂದಿನ ಯುವಜನತೆ ನೋಡುತ್ತಿದೆ? ರಾಜಕೀಯ ಸಭೆ-ಸಮಾರಂಭಗಳಲ್ಲಿ ಅವರು ಖರೀದಿಸಲ್ಪಟ್ಟ ಪ್ರೇಕ್ಷಕರು. ಪ್ರಚಾರಗಳಲ್ಲಿ ಅವರು ಹಣ ಗಳಿಸಿ ಜೇಬು ತುಂಬಿಸಿಕೊಳ್ಳುವವರು. ತಮ್ಮ ಸೇವೆಯ ಅಗತ್ಯ ಇದೆ ಎಂದು ಅರಿವಾದ ಸಂದರ್ಭದಲ್ಲೆಲ್ಲ ಇದೇ ಯುವಜನತೆ ರಾಜಕೀಯವಾಗಿಯೂ ಸಕ್ರಿಯವಾಗಿ ನಿಂತ ಉದಾಹರಣೆಗಳು ನಮ್ಮೆದುರು ಇವೆ. ಆದರೆ ಮೌಲ್ಯಗಳ ತಾಕಲಾಟದಲ್ಲಿ ಅವರಿಗೆ ಭ್ರಮನಿರಸನವಾಗಿ ಇದರಿಂದ ಮಾರು ದೂರ ಓಡಿದ್ದೂ ಇದೆ. ಇವು ಇಂದಿನ ಯುವಜನತೆಯ ಮುಂದಿರುವ ರಾಜಕೀಯ ಮಾದರಿಗಳು !

ಇಂದಿನ ಔದ್ಯೋಗಿಕ ಕ್ಷೇತ್ರದ ಮುಖ್ಯ ಗುರಿ ಯುವಜನತೆ. ಅವರಿಗಾಗಿ ವಿಶೇಷವಾಗಿ ವಿನ್ಯಾಸವಿರುವ ಬೈಕುಗಳು, ಮೊಬೈಲುಗಳು, ಸಿಮ್‌ಗಳು, ಬಟ್ಟೆ-ಬರೆ ಹೀಗೆ ಪಟ್ಟಿ ಹನುಮಂತನ ಬಾಲದಂತೆ ಬೆಳೆಯಬಲ್ಲದು. ಜಾಗತೀಕರಣ, ಔದ್ಯೋಗೀಕರಣ ಈ ಎರಡರ ಗುರಿ ಹಾಗೂ ಬಲಿಪಶುಗಳು ಯುವಜನತೆ. ಇದರಲ್ಲಿ ಹಣ ಉಳ್ಳವರು ಹಾಯಾಗಿ ಈಜಿದರೆ, ಬಡ ಹಾಗೂ

ಮಧ್ಯಮ ವರ್ಗ ಹಣಕ್ಕಾಗಿ ಯಾವ ಮಾರ್ಗವನ್ನು ಬೇಕಾದರೂ ಹಿಡಿಯಲು ಸಿದ್ಧ. ತತ್ಪರಿಣಾಮವಾಗಿ ಹೆಚ್ಚಿದ ಕಳ್ಳತನ, ಕೊಲೆ, ಸುಲಿಗೆಗಳು. ಇವುಗಳಲ್ಲಿ ಹೆಚ್ಚಿನ ಪಾಲು ಯುವಜನರದು. ಇಂದಿನ ಆರ್ಥಿಕತೆ ಅವರಿಗೆ ದುಡಿಯುವುದನ್ನು ಹೇಳಿಕೊಡದೆ ಅತಿ ವೇಗವಾಗಿ ಹಣ ಮಾಡಬೇಕೆಂಬುದನ್ನು ಮಾತ್ರ ಬೋಧಿಸುತ್ತದೆ. ಇವುಗಳ ಬಗ್ಗೆ ಯಾವ ಸರ್ವೇಗಳೂ ನಡೆಯುವುದಿಲ್ಲ.

ಮಾಧ್ಯಮಗಳಾದರೂ ಈ ಮೇಲೆ ಹೇಳಿದ ಕ್ಷೇತ್ರಗಳಿಂದ ಬಹಳ ಭಿನ್ನವಾದದ್ದೇನನ್ನೂ ಮಾಡುತ್ತಿಲ್ಲ. ಎಲ್ಲ ಎಲೆಕ್ಟ್ರಾನಿಕ್ ಮಾಧ್ಯಮಗಳ ಗುರಿಯೂ ಯುವಜನತೆ. ಅವರನ್ನು ಆಕರ್ಷಿಸಬಲ್ಲ ಕಾರ್ಯಕ್ರಮಗಳಿಗೆ ಮಾತ್ರ ಆದ್ಯತೆ. ಯುವಜನತೆಯೇ ಹೆಚ್ಚಾಗಿ ಕಾರ್ಯ ನಿರ್ವಹಿಸುತ್ತಿರುವ ಮಾಧ್ಯಮಗಳು ನಡೆಸುವ 'ಕುಟುಕು ಕಾರ್ಯಾಚರಣೆಗಳು', 'ಪೇಯ್ಡ್ ಸುದ್ದಿಗಳು' ಅವರಲ್ಲಿ ತಮ್ಮ ಕೆಲಸದ ಬಗ್ಗೆಯಾಗಲಿ, ಈ ದೇಶದ ಬಗ್ಗೆಯಾಗಲಿ, ಯಾವ ಅಭಿಮಾನವನ್ನು ತಾನೆ ಬೆಳೆಸಲು ಸಾಧ್ಯ ? ಇನ್ನು ಅಲ್ಲಿಯೂ ಹಣ ಪಡೆದು ಸುದ್ದಿಯನ್ನು ಹಿಡಿಯುವ ಅಥವಾ ಬಿಡುವ ವ್ಯಾಪಾರ ಇತ್ತೀಚಿನ ವರ್ಷಗಳಲ್ಲಿ ಜೋರಾಗಿದೆ ಎನ್ನುವುದು ಎಲ್ಲ ಕಡೆಯಿಂದ ಕೇಳಿಬರುತ್ತಿರುವ ಆರೋಪ. ಏನೂ ಇಲ್ಲದೆ ನಿರ್ಗತಿಕರಾಗಿ ಈ ಕ್ಷೇತ್ರಗಳಿಗೆ ಬಂದ ಅನೇಕರು ಕೋಟ್ಯಧಿಪತಿಗಳಾದದ್ದು ತಮ್ಮ ಇಂತಹ 'ಸಾರ್ವಜನಿಕ ಸೇವೆಯಿಂದ' ಎನ್ನುವುದು ಜಗಜ್ಜಾಹೀರಾಗಿರುವ ವಿಷಯ. ಇಷ್ಟೆಲ್ಲ ಇದ್ದೂ ಇವರೆಲ್ಲ ಸಮಾಜದಲ್ಲಿ ಗಣ್ಯಾತಿಗಣ್ಯರಾಗಿ ಮೆರೆಯುತ್ತಿರುವಾಗ ಅವರ ಹಾದಿಯನ್ನು ತಾವೂ ಏಕೆ ಹಿಡಿಯಬಾರದು ಎಂದು 'ಒಂದು ಕೈ ನೋಡಲು' ಹೊರಡುವ ಯುವಜನತೆಯನ್ನು ಆಸೆಬುರುಕರು ಅಥವಾ ತಲೆಹಿಡುಕರು ಎಂದು ಕರೆಯುವುದಾದರೂ ಹೇಗೆ..?

ಇನ್ನು ಚಲನಚಿತ್ರ ಮಾಧ್ಯಮವಂತೂ ಯುವಜನರನ್ನು ಆಕರ್ಷಿಸುವ 'ಜನಪ್ರಿಯ ಫಾರ್ಮುಲಾ'ಗೆ ಎಂದೋ ತನ್ನನ್ನು ತಾನು ಧಾರೆ ಎರೆದುಕೊಂಡಿದೆ. ಕನ್ನಡದ ಸಿನಿಮಾಗಳ ಬಗ್ಗೆ ಹಿರಿಯ ಪೊಲೀಸ್ ಅಧಿಕಾರಿಯೊಬ್ಬರು "ನಿಮ್ಮಲ್ಲಿ ಇನ್ನೂ ಮಚ್ಚು, ಲಾಂಗುಗಳೇ ನಡೆಯುತ್ತಿವೆ. ಬೇರೆ ಕಡೆಗಳಲ್ಲಿ ಆಗಲೇ ಪೇಟಿಗಳು..." ಎಂದು ಲೇವಡಿ ಮಾಡಿದ್ದೂ ಇದೆ.

ಈ ಮಾತಿನೊಂದಿಗೆ ನೆನಪಾಗುವ ಇನ್ನೊಂದು ಮಾತು ಅಮೇರಿಕದ ಅಧ್ಯಕ್ಷ ಬರಾಕ್ ಒಬಾಮಾರದ್ದು. ಭಾರತದ ಯುವಜನತೆಯನ್ನು ನೋಡಿ ನಾವು ಕಲಿಯಬೇಕಾದ್ದು ಬಹಳ ಇದೆ ಎಂದು ಅಲ್ಲಿನ ವಿಶ್ವವಿದ್ಯಾಲಯದ ಕಾರ್ಯಕ್ರಮವೊಂದರಲ್ಲಿ ಹೇಳಿದ್ದರು. ಇಂದು ಅಮೇರಿಕದ ಆರ್ಥಿಕ ಅಭಿವೃದ್ಧಿಯಲ್ಲಿ ಭಾರತೀಯ ಯುವಜನತೆಯದು ಸಿಂಹಪಾಲು ಮಾತ್ರವಲ್ಲ, ಅಲ್ಲಿನ ರಾಜಕೀಯ ವಲಯದಲ್ಲೂ ಭಾರತೀಯ ಯುವಜನತೆ ತನ್ನ ಸ್ಥಾನವನ್ನು ಗಟ್ಟಿಮಾಡಿಕೊಳ್ಳುತ್ತಿದೆ. ಇದು ಅಮೇರಿಕದಲ್ಲಿ ಸಾಧ್ಯವಾಗಬಹುದಾದರೆ ಭಾರತದಲ್ಲಿ ಏಕೆ ಸಾಧ್ಯವಾಗುತ್ತಿಲ್ಲ ಎಂಬ ಪ್ರಶ್ನೆಯನ್ನು ನಮಗೆ ನಾವೇ ಹಾಕಿಕೊಳ್ಳುವುದು ಉಚಿತ. ಇಲ್ಲಿ ಯುವಜನತೆಯನ್ನು ಅನ್ಯಮಾರ್ಗಕ್ಕೆ ಎಳೆಯಬಲ್ಲ ಸಾಕಷ್ಟು ಶಕ್ತಿ (?)ಗಳು ಕೆಲಸ ಮಾಡುತ್ತಿವೆ. ಅವು ಕೆಲವು ನಾಯಕರ ಛತ್ರಛಾಯೆಯಲ್ಲಿ



ನಡೆಯುತ್ತವೆ. ರಾತ್ರಿ ಬಾರುಗಳನ್ನು ಮುಚ್ಚಲು ಸಮಯ ನಿಗದಿಯನ್ನು ಒಬ್ಬರು ಮಾಡಿದರೆ ಅದನ್ನು ಇನ್ನೋರ್ವ ಧುರೀಣರೇ ಮುರಿಯುತ್ತಾರೆ. ಮದ್ಯಪಾನ ನಿಷೇಧವನ್ನು ಕಡ್ಡಾಯವಾಗಿ ಜಾರಿಗೊಳಿಸಬೇಕು ಎನ್ನುತ್ತಲೇ ಗಲ್ಲಿಗಲ್ಲಿಯಲ್ಲಿ ಗಡಂಗುಗಳಿಗೆ ಅನುಮತಿ ದೊರೆಯುತ್ತದೆ. ರಿಯಾಯಿತಿ ದರದಲ್ಲಿ ಮದ್ಯದ ಸಗಟು ಮಾರಾಟಕ್ಕೆ ಸರ್ಕಾರವೇ ಅನುಮತಿ ನೀಡಿದೆ. ಇದರೊಂದಿಗೆ ಸಿಗರೇಟು, ತಂಬಾಕು ಸೇವನೆಗೆ ಯಾವ ಕಡಿವಾಣವೂ ಇಲ್ಲ. ಅದು ಮುಕ್ತವಾಗಿ ಎಲ್ಲರಿಗೂ ಲಭ್ಯವಿದೆ. ಗುಟ್ಕಾ ಸೇವನೆ ಹಾನಿಕಾರಕ ಎನ್ನುತ್ತಲೇ ಅದರ ವ್ಯಾಪಾರ ಯಾವುದೇ ಕುಂದಿಲ್ಲದಂತೆ ನಡೆಯುತ್ತಿದೆ. ಮಾದಕ ವ್ಯಸನವಂತೂ ಬಹುತೇಕ ಯುವಕರನ್ನು ಮಾರುವ ಜಾಲದ ಹಿಂದೆ ಅನೇಕ ಶಕ್ತಿಗಳು ಕೆಲಸ ಮಾಡುತ್ತವೆ. ಹೀಗೆ ಬೋಧನೆ ವೇದಿಕೆಗೆ ಮಾತ್ರ ಸೀಮಿತವಾಗಿ ಅಥವಾ ಕೆಲವು ದೇಶಭಕ್ತರ ದಿನಾಚರಣೆಗಳಲ್ಲಿ ಮಾತ್ರ ನೆನಪಿಸಿಕೊಳ್ಳುವಂತಹ ಅಗ್ಗದ ವಿಷಯವಾಗಿರುವುದು ದುರಂತ.

ಇತ್ತೀಚೆಗೆ ಯುವಜನತೆಯನ್ನು ಭಯೋತ್ಪಾದಕ ಚಟುವಟಿಕೆಗಳಿಗೂ ಸೆಳೆಯುತ್ತಿರುವುದು ಭಯೋತ್ಪಾದನಾ ಕೃತ್ಯಗಳಿಂದ ವೇದ್ಯವಾಗುತ್ತಿದೆ. ಹಣದ ಆಮಿಷಕ್ಕಿಂತಲೂ ಹಿರಿದದ್ದೇನಾದರು ಅವರ ಮುಂದೆ ಇರಬಹುದಾದರೆ ಅವರು ಇಂತಹ ಕೃತ್ಯಗಳಿಂದ ದೂರ ಇದ್ದಾರು. ಆದರೆ ಅವರಿಗೆ ತಮ್ಮ ಜೀವನದ ಭದ್ರತೆಗೆ ಬೇಕಾಗುವ ಕನಿಷ್ಠ ಅವಶ್ಯಕತೆಗಳೂ ಪೂರೈಕೆಯಾಗದ ಕಾರಣ ಅವರು ಕುಕೃತ್ಯಗಳಿಗೆ ಸುಲಭವಾಗಿ ಜಾರುತ್ತಿದ್ದಾರೆ. ಇತರ ಮಕ್ಕಳಿಂದ, ಹಿರಿಯರಿಂದ ಭಿಕ್ಷೆ ಬೇಡಿಸಿ ತಿನ್ನುವ ಅಮಾನವೀಯರು ಈ ಭಾರತದಂತಹ ಪುಣ್ಯಭೂಮಿಯಲ್ಲಿ ಇರುವವರೆಗೂ ಇಂತಹ ಎಲ್ಲ ಸಮಾಜವಿರೋಧಿ ಕೆಲಸಗಳು ಅನಿಯಂತ್ರಿತವಾಗಿ ನಡೆಯುತ್ತವೆ. ಇಂತಹ ಸಮಾಜಘಾತುಕ ಜಾಲಗಳ ವಿರುದ್ಧ ಸೆಡ್ಡು ಹೊಡೆಯುವ ಕೆಲಸ ಯಾವ ಸರ್ಕಾರಕ್ಕೂ ಏಕೆ ಸಾಧ್ಯವಾಗಿಲ್ಲ ? ಇನ್ನು ಶಾಲೆಯಿಂದ ಹೊರಗುಳಿಯುವ ಲಕ್ಷ ಲಕ್ಷ ಮಕ್ಕಳು, ಬೀದಿ ಮಕ್ಕಳು, ಕೂಲಿ ಮಾಡುವ ಮಕ್ಕಳು ವಿದ್ಯೆಯ ಪರಿಧಿಯಿಂದಲೇ ಹೊರಗುಳಿದರೆ ಅದಕ್ಕೆ ಯಾರನ್ನು ಹೊಣೆಗಾರರನ್ನಾಗಿಸುವುದು ? ಇವರನ್ನು ಬೇರೆ ಬೇರೆ ಸಂದರ್ಭಗಳಲ್ಲಿ ದಾಳಗಳಾಗಿ ಬಳಸಿಕೊಳ್ಳುವ ಆಳುವ ವರ್ಗವೇ ಕಣ್ಣು ಹೊರಳಿಸಿರುವಾಗ ಅವರು ಬೆಳೆದು ಯುವಕರಾದಾಗ ಅವರಿಂದ ಏನನ್ನು ತಾನೆ ನಿರೀಕ್ಷಿಸಲು ಸಾಧ್ಯ ? ಇಂತಹ ಹತ್ತು ಹಲವಾರು ಪ್ರಶ್ನೆಗಳನ್ನು ಕೇಳುತ್ತಲೇ ಹೋಗಬಹುದು.

ಒಂದು ಕಡೆ ಜಗತ್ತಿನ ಅತ್ಯುತ್ತಮ ಶಿಕ್ಷಣ ಸೌಲಭ್ಯಗಳನ್ನು ಪಡೆದು, ಕೈ ತುಂಬ ಸಂಪಾದಿಸುವ ಯುವಜನತೆಯಿದ್ದರೆ ಇನ್ನೊಂದು ಕಡೆ ಚಿಂದಿ ಆಯುತ್ತ ಮತ್ತಿನ ಲೋಕದಲ್ಲಿ ವಿಹರಿಸುವ ವರ್ಗವಿದೆ. ಈ ಉಳ್ಳವರ ಹಾಗೂ ಬಡಿಗೈಗಳ ನಡುವಿನ ಕಂದಕ ಹಿಂದೆಂದಿಗಿಂತಲೂ ಬಹಳ ಹೆಚ್ಚಾಗಿದೆ. ಸಂಪತ್ತು ಕೆಲವೇ ಕೈಗಳಲ್ಲಿ ಕ್ರೋಢೀಕರಣವಾಗುತ್ತಿದೆ. ಜಗತ್ತಿನ ಅತ್ಯಂತ ಶ್ರೀಮಂತರ ಪಟ್ಟಿಯಲ್ಲಿ ಭಾರತದ ಕುಬೇರರ ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಿದೆ. ಅಷ್ಟೇ ಅಧೋಗತಿಯಲ್ಲಿ ಇನ್ನೊಂದು ವರ್ಗ ಸಾಗುತ್ತಿದೆ. ಈ ಮೇಲಾಟ-ಕೀಳಾಟದಲ್ಲಿ ನಮ್ಮ ಯುವಜನತೆ ನಲುಗುತ್ತಿದ್ದಾರೆ.

ಯುವಜನರ ಸವಾಲುಗಳ ಮಾತು ಬಂದಾಗಲೆಲ್ಲ ನಾವು ಸ್ವಾಮಿ ವಿವೇಕಾನಂದರನ್ನೋ, ಸುಭಾಷ್‌ಚಂದ್ರ ಬೋಸರನ್ನೋ ಉದಹರಿಸುವುದು ವಾಡಿಕೆಯಾಗಿಬಿಟ್ಟಿದೆ. ಇಂತಹ ಬೌದ್ಧಿಕ ಭ್ರಷ್ಟತೆಗೆ ಇಂದಿನ ಯುವಜನರನ್ನು ಉದ್ಧರಿಸುವ ಪ್ರಾಮಾಣಿಕ ಕಳಕಳಿಯಾದರೂ ಇದ್ದೀತೇ ? ಇಂತಹ ನೂರಾರು, ಸಾವಿರಾರು ಪ್ರಶ್ನೆಗಳು ಕಾಡಬೇಕಾಗಿರುವುದು ಹಿರಿಯ ಮನಸ್ಸುಗಳನ್ನು. ಅವೇ ಗೊಂದಲಗಳ ಗೂಡಾಗಿರುವಾಗ ಯುವಜನರಿಗೆ ಯಾರು ಮಾರ್ಗದರ್ಶಕರಾಗಬಹುದು ? ಏಳಿ...ಎದ್ದೇಳಿ... ಗುರಿ ಮುಟ್ಟುವ ತನಕ ನಿಲ್ಲದಿರಿ... ಎಂಬ ಒಂದೇ ಕರೆಗೆ ಪ್ರಪಂಚವೇ ಎದ್ದು ನಿಂತ ಸಾಮಾಜಿಕ ಪರಿಸರಕ್ಕಿಂತ ಬಹಳ ಭಿನ್ನವಾದ ಪರಿಸರದಲ್ಲಿ ಬದುಕುತ್ತಿರುವ ಇಂದಿನ ಯುವಜನತೆ ಯಾರನ್ನು ನೋಡಿ ಕಲಿಯಬೇಕು ? ಇದಕ್ಕೆ ಸರ್ವೇಗಳು ಉತ್ತರ ನೀಡಬಲ್ಲವೇ ?


**ನೂತನ ಎಂ. ದೋಶೆಟ್ಟಿ**
ಕಾರ್ಯಕ್ರಮ ನಿರ್ವಾಹಕರು, ಆಕಾಶವಾಣಿ
ರಾಜಭವನ ರಸ್ತೆ, ಬೆಂಗಳೂರು - ೫೬೦ ೦೦೧

*ಶಹೀದ್ ಸಾಮ್ರಾಟ್ ಭಗತ್ ಸಿಂಗ್ ಅವರ ತಾಯಿ ವಿದ್ಯಾವತಿ ಅವರು ಸಂಘರ್ಷದ ಬದುಕಿನ ಕೊನೆಯ ದಿನಗಳಲ್ಲಿ ಆಡಿದ ವಿಚಾರದ ಮಾತೊಂದು ಹೀಗಿದೆ – "ಮಕ್ಕಳ ದುಃಖ ತಾಯಿಯಾದವರು ಪಡೆದುಕೊಳ್ಳುವ ಸರ್ವೋತ್ತಮ ವ್ಯವಸ್ಥೆಯೊಂದು ಆ ಈಶ್ವರನು ಮಾಡಿದ್ದೇ ಆದರೆ ವಿಶ್ವದ ಯಾವುದೇ ತಾಯಿಯು ತನ್ನ ಮಕ್ಕಳಲ್ಲಿ ಒಬ್ಬರಿಗೂ ದುಃಖಿಯಾಗಿರಲು ಬಿಡುತ್ತಿರಲಿಲ್ಲ." ಮುದ್ದಿನ ಮಗ ಭಗತ್ ಸಿಂಗ್ ನಿರಂತರವಾಗಿ ದೇಶಕ್ಕಾಗಿ ಹೋರಾಡಿ ಕೇವಲ ೨೪ ವರ್ಷದ ಎಳೆಯ ವಯಸ್ಸಿನಲ್ಲಿ ನಗುನಗುತ್ತ ಗಲ್ಲಿಗೇರುತ್ತಾರೆ. ಅವರ ಸಂಘರ್ಷದ ಪರಿ ನೇರ ನೋಡಿ, ತಾವೂ ನೊಂದು, ಅನುಭವಿಸಿದ ಹಾಗೂ ದೇಶಕ್ಕಾಗಿ ತ್ಯಾಗದ ಹಿಮಾಲಯವನ್ನೇ ಕಟ್ಟಿ ನಿಲ್ಲಿಸಿದ ವ್ಯಕ್ತಿ ಸರದಾರ ಭಗತ್ ಸಿಂಗ್. ಅವರ ತಾಯಿ 'ಕ್ರಾಂತಿಯ ಮಹಾತಾಯಿಯೇ' ಆಗಿ ಭಾರತ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸಕ್ಕೆ ಕೊಟ್ಟ ದೊಡ್ಡ ಕಾಣಿಕೆಯಾಗಿದ್ದಾರೆ.*


ವಿದ್ಯಾವತಿ

*ಸರ್ವಸಮತೆಯ ನಾಡೊಂದು ಕಟ್ಟುವ ಕನಸಿನ ಭಗತ್ ಸಿಂಗ್ ಅವರಿಗೆ ಜನ್ಮ ಕೊಟ್ಟ ತಾಯಿ ಇಂಗ್ಲಿಷ್‌ರ ವಿರುದ್ಧ– 'ನಾನು ಸತ್ತರೂ ನಿಮಗೆ ಬಾಗುವುದಿಲ್ಲ' ಎಂದು ಗುಡುಗಿದ್ದಾರೆ.*

*ವೀರೇಂದ್ರ ಸಿಂಧು ಅವರು ಭಗತ್ ಸಿಂಗ್ ಅವರ ತಮ್ಮನ ಮಗಳು. ಜೈಲಿನ ಅನೇಕ ದಾಖಲೆಗಳನ್ನು ಪರಿಶೀಲಿಸಿ, ಪರಿವಾರದ ಹಲವು ಹಿರಿಯ ಜೀವಗಳ ಸ್ಮೃತಿಪೆಟ್ಟಿಗೆಗಳನ್ನು ತೆರೆದು ಪರಿಶೀಲಿಸಿ 'ಯುಗದ್ರಷ್ಟಾ ಭಗತ್ ಸಿಂಗ್ ಔರ ಉನಕೆ ಮೃತ್ಯುಂಜಯಿ ಪುರಖೆ' ಎಂಬ ಗ್ರಂಥ ಕಟ್ಟಿಕೊಟ್ಟಿದ್ದಾರೆ. ಅನುವಾದ ಎನ್ನುವಷ್ಟು ಈ ಗ್ರಂಥದ ಸಹಾಯದಿಂದ ಸಿದ್ಧಗೊಳಿಸಲಾದ ಲೇಖನ ಇಲ್ಲಿದೆ. ಭಗತ್ ಸಿಂಗ್ ಅವರ ತ್ಯಾಗದ ಸಂಕಥನಗಳು ಮತ್ತೆ ಮತ್ತೆ ನಮ್ಮ ಯುವ ಪೀಳಿಗೆಯ ಮುಂದೆ ಹರಡಿ ಪರಿಶೀಲಿಸಿ ನಿಜದ ಮನುಜರಾಗುವ ರಾಗ ಹಾಡುತ್ತಲೇ ಇರಬೇಕಾಗಿದೆ.*

# ಸರದಾರ ಭಗತ್ ಸಿಂಗ್ ಅವರ ತಾಯಿ ಕ್ರಾಂತಿಲೋಕದ ಮಹಾತಾಯಿ ವಿದ್ಯಾವತಿ

ಭಗತ್ ಸಿಂಗ್‌ನ ತಾಯಿ ವಿದ್ಯಾವತಿ ಅವರ ನೆನಪುಗಳ ಬಾಗಿಲು ತೆರೆಯಿತು. ಅವರು ಹೇಳಿದರು : "ಆಗ ಭಗತ್ ಸಿಂಗ್‌ನ ಮೊಕದ್ದಮೆ ನಡೆಯುತ್ತಿತ್ತು. ನಮ್ಮ ಹಳ್ಳಿಯಲ್ಲಿ ಒಬ್ಬ ಬಂದಿದ್ದ, ಊರ ಹೊರಗೆ ಬೆಂಕಿ ಹೊತ್ತಿಸಿ ಏನೋ ಜಪತಪ ನಡೆಸಿದ್ದ. ಮೂರ್‍ನಾಲ್ಕು ದಿವಸಗಳಲ್ಲಿಯೇ ಅವನ ಸಾಧನೆ ಕುರಿತು ಊರಲ್ಲಿ ಚರ್ಚೆ ಪ್ರಾರಂಭವಾಯಿತು. ಆ ಸಾಧುವಿನ ಹತ್ತಿರ ಹೋಗು, ಭಗತ್ ಸಿಂಗ್‌ಗೆ ರಕ್ಷಣೆ ಸಿಗುತ್ತದೆ ಎಂದು ಯಾರೋ ಹೇಳಿದರು. ಇಂತಹವುಗಳಲ್ಲೆಲ್ಲ ನನಗೇನು ಹೆಚ್ಚು ನಂಬಿಕೆ ಇರಲಿಲ್ಲ. ಆದರೆ ತಾಯಿಯ ಕರುಳು ಮುಂಚೂಣಿಗೆ ಬಂದಿತು, ನಾನು ರಾತ್ರಿ ಹೊತ್ತಿನಲ್ಲಿ ಕುಲಬೀರ್ ಸಿಂಗ್‌ನನ್ನು ಸಂಗಡ ಕರೆದುಕೊಂಡು ಆ ಸಾಧುವಿನ ಹತ್ತಿರ ಹೋದೆ. ಆತ ಏನೋ ಓದಿದಂತೆ ಮಾಡಿ ಚಿಕ್ಕ ಕಾಗದದ ಪುಡಿಯಲ್ಲಿ ಭಸ್ಮ ಕೊಟ್ಟು, 'ಇದು ಭಗತ್ ಸಿಂಗ್‌ನ ತಲೆಯಲ್ಲಿ ಹಾಕು. ಎಲ್ಲವೂ ಸರಿ ಹೋಗುತ್ತದೆ' ಎಂದನು. ಜೈಲಿನಲ್ಲಿ ಭೇಟಿಯಾದ ದಿನ ನಾನು ಆ ಭಸ್ಮವನ್ನು ತೆಗೆದುಕೊಂಡು ಹೋದೆ. ಭಗತ್ ಸಿಂಗ್‌ನ ಹತ್ತಿರ ಕುಳಿತು ಸಾವಕಾಶವಾಗಿ ಅವನ ತಲೆಯಲ್ಲಿ ಕೈಯಾಡಿಸತೊಡಗಿ ಭಸ್ಮವನ್ನು ತಲೆಯಲ್ಲಿ ಹಾಕಲು ಪ್ರಯತ್ನಿಸುತ್ತಿದ್ದೆ. ನನ್ನ ಕೈ ಇನ್ನೂ ತಲೆಗೆ ಸ್ಪರ್ಶಿಸಿರಲಿಲ್ಲ, ಅವನ ಟೊಂಕದ ಹತ್ತಿರ ಕೈ ಸುತ್ತಾಡುತ್ತಿತ್ತು, ತಕ್ಷಣ ಅವನೆಂದ : "ನನ್ನ ತಲೆಯಲ್ಲಿ ಹಾಕಬೇಕೆಂದ ಭಸ್ಮವನ್ನು ಈ ಕುಲಬೀರ್‌ನ ತಲೆಯ ಮೇಲೆ ಹಾಕು. ಆಗ ಅವನು ಸದಾ ನಿನ್ನ ಹತ್ತಿರ ಇದ್ದುಬಿಡುತ್ತಾನೆ" ಎಂದು.

ಇದು ನನಗೆ ಪರಮಾಶ್ಚರ್ಯದ ವಿಚಾರವೆನಿಸಿತು. ಬಹಳ ದಿನಗಳವರೆಗೆ ನಾನು ವಿಸ್ಮಯಗೊಂಡಿದ್ದೆ, ನಾನು ಬಯಸಿದ ಮನದ ಮಾತು ಅವನು ಹೇಗೆ ಗುರುತಿಸಿದ ? ನನ್ನ ಮಗ ಗಲ್ಲಿಗೇರುವುದು ತಪ್ಪಲಿ ಎಂದು ಅಖಂಡ ಪಾಠ ಮಾಡಿಸಿದೆ.

ಮತ್ತೊಮ್ಮೆ ಭೇಟಿಗೆ ಹೋದಾಗ ಅವನು ಊಟ ಮಾಡುವ ಕಬ್ಬಿಣದ ತಟ್ಟೆಯಲ್ಲಿ ಕೆಂಪು ಗುಲಾಬಿ ಹೂಗಳು ತುಂಬಿದ್ದವು. ನಾನು ಕೇಳಿದೆ : "ಭಗತ್ ಸಿಂಗ್, ಈ ಹೂಗಳು ಎಲ್ಲಿಂದ ಬಂದವು ?" ಬಲು ಉತ್ಸಾಹದಿಂದ ಅವನು ಹೇಳಿದ : "ನನಗೆ ಜಗತ್ತಿನಲ್ಲಿ ಹೂಗಳ ಕೊರತೆಯೇ ಇಲ್ಲ." ಈಗ ವಿಚಾರಿಸುತ್ತೇನೆ, ಹೌದು ಅವನ ಚಿತ್ರಕ್ಕೆ ಹೂ ಇಡುತ್ತಾರೆ, ಅವನ ಮೂರ್ತಿಗೆ ಹೂ ಅರ್ಪಿಸುತ್ತಾರೆ. ನಿಜವೆಂದರೆ ನನಗೆ ಅರ್ಪಿಸುವ ಹೂಗಳೂ ಅವನ ಹೂಗಳೇ ಅಲ್ಲವೆ !

ವೀರೇಂದ್ರಸಿಂಧು ಕೇಳುತ್ತಾರೆ : "ತಾವು ಏನೆಲ್ಲ ನೆನಪಿನಲ್ಲಿಟ್ಟುಕೊಂಡಿದ್ದೀರಿ ! ಈ ರೀತಿ ನೀವು ಇತಿಹಾಸಕ್ಕೆ ಮಾಡಿದ ಉಪಕಾರ ದೊಡ್ಡದು." ವಿದ್ಯಾವತಿ ಹೇಳಿದರು : "ಈ ವಿಷಯಗಳಂತೂ ನನ್ನ ಎಲುಬುಗಳಲ್ಲಿ ಸೇರಿ ಒಂದಾಗಿವೆ. ನನ್ನನ್ನು ಸುಟ್ಟರೂ ಈ ಮಾತುಗಳು ನನ್ನ ಎಲುಬುಗಳ ಮೇಲೆ ಬರಹವಾಗಿ ಕಾಣುತ್ತವೆ." ಅವರ ಹೃದಯ ಕಣ್ಣೀರಾಗಿ ಕಣ್ಣುಗಳು ತೇವಗೊಂಡವು.

ನಿಜಕ್ಕೂ ಭಗತ್ ಸಿಂಗ್‌ರ ತಾಯಿ ವಿದ್ಯಾವತಿ ಅಪಾರ ಧೈರ್ಯದ ದೇವಿಯೇ. ತಮ್ಮ ದೀರ್ಘ ಜೀವನ ಯಾತ್ರೆಯಲ್ಲಿ ಏನೇನೂ ಕಂಡಿರಲಿಲ್ಲ ? ಜೀವನದ ಮೊದಲನೆಯ ಹಂತದಲ್ಲಿಯೇ ತನ್ನ ಕುಟುಂಬದ ಕಷ್ಟಕೋಟಲೆಗಳನ್ನು ಕಂಡರು. ಒಬ್ಬ ಮೈದುನ ಅಜಿತ ಸಿಂಗ್ ವಿದೇಶಕ್ಕೆ ತೆರಳಿದ. ಎರಡನೆಯ ಮೈದುನ ಸರದಾರ ಸ್ವರ್ಣ ಸಿಂಗ್ ಜೈಲಿನ ಅಸಹ್ಯ ಹಿಂಸೆ ಸಹಿಸುತ್ತ ಶಹೀದ ಆದ. ಅವರ ಪತಿ ಸರದಾರ ಕಿಶನ್ ಸಿಂಗ್ ಜೀವನವಿಡೀ ಜೈಲು ಹಾಗೂ ಕೋರ್ಟಿನ ಸುತ್ತಾಟಗಳಲ್ಲಿ ಕಳೆದ.

**ಪ್ರೊ॥ ಕಾಶೀನಾಥ ಅಂಬಲಗೆ**

ಎರಡನೆಯ ಹಂತದಲ್ಲಿ ಮಗ ಭಗತ್ ಸಿಂಗ್ ಗಲ್ಲಿಗೇರಿದ. ಮುಂದಿನ ಎರಡು ಮಕ್ಕಳೂ ಜೈಲಿನಲ್ಲಿ ಬಂಧಿಯಾದರು, ಪತಿಗೆ ಲಕ್ವಾ ಬಡಿಯಿತು. ಒಂದು ದೇಹ ಮಾತ್ರ ಮನೆಯಲ್ಲಿ ಹರಡಿದ ಕೆಲಸಗಳಲ್ಲಿ ಮುಳುಗಿರುತ್ತಿತ್ತು.

ಸೈಮನ್ ಕಮೀಶನ್ ಲಾಹೋರ್‌ಗೆ ಬಂದ ಸಮಯವದು. ಹರನಾಮ್ ಕೌರ್ ಬಂಗಾಗೆ ಹೋಗಬೇಕಾಗಿತ್ತು, ಭಗತ್ ಸಿಂಗ್‌ಗೆ ಭೇಟಿಯಾಗುವ ಪ್ರಬಲ ಬಯಕೆಯೂ ಇತ್ತು. ಕಾರಣವಾಗಿ ವಿದ್ಯಾವತಿಯೂ ಅವಳೊಡನೆ ಲಾಹೋರ್‌ಗೆ ಹೊರಟುನಿಂತರು. ಆಗ ಭಗತ್ ಸಿಂಗ್ ಅಲ್ಲಿಯೇ ಇರುತ್ತಿದ್ದರು. ಕೋಣೆಯಲ್ಲಿ ಪುಸ್ತಕಗಳೆಲ್ಲ ಸಿಕ್ಕಾಪಟ್ಟೆ ಹರಡಿಕೊಂಡಿದ್ದವು. ಅದನ್ನು ನೋಡಿದ ತಾಯಿಗೆ ತಿಳಿದುಹೋಯಿತು, ಪೊಲೀಸರು ಕಿತ್ತಾಡಿ ಶೋಧನೆ ನಡೆಸಿದ್ದಾರೆ ಎಂದು. ಭಗತ್ ಸಿಂಗ್ ಅಲ್ಲಿರಲಿಲ್ಲ. ಆದರೆ ಅವ್ವ ಹಾಗೂ ಚಿಕ್ಕಮ್ಮ ಬಂದಿದ್ದಾರೆಂದು ತಿಳಿದು ಹಿಂದಿನ ಬಾಗಿಲಿನಿಂದ ಬಂದು ಭೇಟಿಯಾಗಿ ಬೇಗ ಹೊರಟುಹೋದರು.



ವಿದ್ಯಾವತಿಯವರ ವಜ್ರದಂತಹ ಗಟ್ಟಿ ಮನಸ್ಸು ಹಲವು ಕಷ್ಟಗಳನ್ನು ನುಂಗಿ ನೀರು ಕುಡಿದಿದೆ. ಸುಮಾರು ಐದಾರು ಸಲ ಹಾವು ಕಡಿದು ಸಾವಿನ ಮನೆಯ ಹತ್ತಿರ ಸುಳಿದೂ ಸುಳಿದೂ ಹಿಂತಿರುಗಿದ್ದಾರೆ. ಬಹಾದ್ದೂರ್ ಭಗತ್ ಸಿಂಗ್‌ಗೆ ಜನ್ಮ ನೀಡಿದ ತಾಯಿಯ ಬಹದ್ದೂರ್‌ತನ ಸುತ್ತ ಊರುಗಳಲ್ಲಿ ಜನಜನಿತವೂ ಆಗಿತ್ತು.

ಸೆಪ್ಟೆಂಬರ್ ೧೯೦೭ರಲ್ಲಿ ವಿದ್ಯಾವತಿ ಭಗತ್ ಸಿಂಗ್‌ಗೆ ಜನ್ಮ ಕೊಟ್ಟರು. ವಿಚಿತ್ರವೆಂದರೆ ಹಿಂದಿನ ಒಂದು ದಿವಸದ ಮಟ್ಟಿಗೆ ಭಗತ್ ಸಿಂಗ್ ಅವರ ತಂದೆ ಸರದಾರ ಕಿಶನ್ ಸಿಂಗ್ ಒಂದು ಮೊಕದ್ದಮೆಯಲ್ಲಿ ಬಂಧಿಯಾಗಿದ್ದರು, ಸರದಾರ ಸ್ವರ್ಣ ಸಿಂಗ್ ಜೈಲಿನಲ್ಲಿದ್ದರು. ಸರದಾರ ಅಜಿತ ಸಿಂಗ್ ಗಡೀಪಾರು ಶಿಕ್ಷೆಯಾಗಿ ಬರ್ಮಾದಲ್ಲಿದ್ದರು. ಮೂರೂ ಏಕಕಾಲದ ಹೊಡೆತಗಳನ್ನು ತಾಯಿ ಹೇಗೆ ಸಹಿಸಿರಬೇಕು! ಆಕಸ್ಮಿಕ ಸುಖವೆಂದರೆ ಭಗತ್ ಸಿಂಗ್ ಜನಿಸಿದ ದಿನವೇ ಎಲ್ಲರ ಬಿಡುಗಡೆ ಆಗುತ್ತದೆ. ಮನೆಯಲ್ಲಿ ಸಂತೋಷದ ಹೊಳೆ ಹರಿಯುತ್ತದೆ. ಅದಕ್ಕೆ ಅವನ ಹೆಸರು 'ಭಗತ್' ಆಯಿತು.

ಆದರೆ ಸಂಘರ್ಷಗಳ ಹಿನ್ನೆಲೆಯಲ್ಲಿಯೇ ಬಾಲ್ಯ ಕಳೆದ ಶಹೀದ್ ಭಗತ್ ಸಿಂಗ್ ಅವರ ವ್ಯಕ್ತಿತ್ವ, ದೇಶಭಕ್ತಿ, ದೇಶಕ್ಕೆ ಸ್ವತಂತ್ರ್ಯದ ಮಹತ್ವವನ್ನು ಅನುಭವಿಸುತ್ತ ಯೌವನಕ್ಕೆ ಕಾಲಿಡುತ್ತದೆ. ಕ್ರಾಂತಿಕಾರಿ ಪರಿವಾರದ ಭಾಗವಾದ ತಾಯಿ ವಿದ್ಯಾವತಿಯವರೂ ಮುಳ್ಳುಗಳನ್ನೇ ಹೂವಾಗಿಸಿ ಮುನ್ನಡೆಯುವುದನ್ನು ಕಲಿತಿರುತ್ತಾರೆ. ೧೯೨೭ರ ಸುಮಾರಿಗೆ ಭಗತ್ ಸಿಂಗ್ ಬಾಂಬ್ ಕೇಸ್‌ನಲ್ಲಿ ಬಂಧಿಸಲ್ಪಡುತ್ತಾರೆ. ಈ ತಾಯಿ ಪತಿಯ ಬಂಧನ ಕಂಡಿದ್ದರು, ಮೈದುನನ ಗಡೀಪಾರು ಶಿಕ್ಷೆ ಕಂಡಿದ್ದರು, ಮತ್ತೊಬ್ಬ ಮೈದುನ ಜೈಲು ಅನುಭವಿಸಿ ಮರಣ ಹೊಂದಿದ್ದನ್ನೂ ಕಂಡಿದ್ದರು. ಆದರೆ ಈ ಬಂಧನ ಹೊಟ್ಟೆಯಲ್ಲಿ ಹುಟ್ಟಿದ ಮಗನ ಬಂಧನವಾಗಿತ್ತು. ಇದು ಕಲಂ ೧೪೪ ಅಲ್ಲ, ಕೆಲತಿಂಗಳು ಜೈಲಲ್ಲಿದ್ದು ಬಿಡುಗಡೆ ಹೊಂದುವುದಲ್ಲ. ಬಾಂಬ್ ಕೇಸಲ್ಲಿ ಗಲ್ಲಿಗೇರಿಸಲೂಬಹುದು, ಕಾಲಾಪಾನಿ ಶಿಕ್ಷೆಯೂ ಆಗಬಹುದು. ಅವರು ಹೇಳುತ್ತಾರೆ: "ಪ್ರತಿಕ್ಷಣ ಬೆಂಕಿ ಕಿಡಿಯ ಮೇಲೆ ನಡೆದಂತಾಗುತ್ತಿತ್ತು, ಸರದಾರ್‌ಜಿ ಹಗಲು-ರಾತ್ರಿ ಸಂತೈಸುತ್ತಿದ್ದರು, ಆದರೆ ನನ್ನ ಮನ ಅಮಂಗಲ ಕಾಣುತ್ತಿತ್ತು, ಅವರು ಸಮಾಧಾನ ಹೇಳುವುದು ನೆವ ಮಾತ್ರದ ಸಾಂತ್ವನ ಎನಿಸುತ್ತಿತ್ತು. ನನ್ನ ಬದುಕು ಒಡೆದು ಚೂರು ಚೂರಾಗುತ್ತಿದೆ. ಇದು ಹೀಗೆಯೇ ಮುಂದುವರಿಯುತ್ತದೆ ಎಂದು ನನ್ನ ಮನಸ್ಸು ಹೇಳುತ್ತಿತ್ತು".



ಭಗತ್ ಸಿಂಗ್ ಅವರ ಚಿಂತೆ ತಾಯಿಗೆ ಸದಾ ಕಾಲವೂ ಬೆನ್ನು ಹತ್ತಿರುತ್ತಿತ್ತು. ಆತನ ನೆನಪಾದ ಕೂಡಲೆ ಲಾಹೋರ್‌ಗೆ ಹೊರಡುತ್ತಿದ್ದರು. ಹೀಗೊಮ್ಮೆ ಲಾಹೋರ್‌ಗೆ ಹೋದಾಗ ಭಗತ್ ಸಿಂಗ್ ಹಾಗೂ ಸುಖದೇವ್ ಅವರ ಸಂಗಡ ಟಾಂಗಾದಲ್ಲಿ ಹೋಗುವಾಗ ಸುಖದೇವನತ್ತ ನೋಡುತ್ತ, "ಇವನೇ ನಿನಗೆ ಎಲ್ಲೆಂದರಲ್ಲಿ ಕರೆದುಕೊಂಡು ಹೋಗುತ್ತಾನೆ. ತಡಿ, ಈಗ ಈತನಿಗೆ ಕಪಾಳಕ್ಕೆ ಬಿಗೀತಿನಿ" ಎನ್ನುತ್ತಾರೆ. ಭಗತ್ ಸಿಂಗ್ ಸುಖದೇವನನ್ನು ಬಹಳ ಪ್ರೀತಿಸುತ್ತಿದ್ದರು. ತಕ್ಷಣ ಅನ್ನುತ್ತಾರೆ: "ಇಲ್ಲವ್ವ, ಈತನಿಗೆ ಹೊಡೆಯಬೇಡ. ಈತ ದೊಡ್ಡಮನೆತನದ ಅಚ್ಚುಮೆಚ್ಚಿನ ಮಗ." ಕಣ್ಸನ್ನೆ ಮಾಡಿ ಆತನನ್ನು ಕೆಳಗೆ ಇಳಿಸುತ್ತಾರೆ. ಭಗತ್‌ಸಿಂಗರು ತಮ್ಮ ವಿಚಾರಗಳಲ್ಲಿ ಬದುಕಿನ ತುಂಬ ದೃಢವಾಗಿರುತ್ತಾರೆ, ಆದರೆ ಯಾರ ಮನಸ್ಸನ್ನೂ ನೋಯಿಸದವರಾಗಿರುತ್ತಾರೆ. ಅದರಲ್ಲೂ ಅವ್ವನ ಕುರಿತು ಅವರ ಮನಸ್ಸಿನಲ್ಲಿ ಅಪಾರ ಪ್ರೀತಿ.

ತಾಯಿಗೆ ಮಗನ ಚಿಂತೆ, ಮಗನಿಗೆ ಸಾಧನೆಯ ಚಿಂತೆ. ಸ್ಯಾಂಡರ್ಸ್‌ನ ವಧೆಯ ನಂತರ ಭಗತ್ ಸಿಂಗ್ ಭೂಗತರಾದರು. ಶೋಧ ಸಮಾಚಾರಗಳ ಸೀಮೆಗಳಿಂದ ದೂರ! ಸೀಮಾತೀತ ಅಜ್ಞಾತವಾಸಿ. ತಾಯಿಯ ಮನಸ್ಸು ಒಡೆಯಿತು. ಆಕೆಯ ವ್ಯಕ್ತಿತ್ವದಲ್ಲಿ ಅತಿ ಶ್ರೇಷ್ಠ ಸಂಪತ್ತೆಂದರೆ ನಗು. ಈಗ ಅದೂ ಮುಳುಗಿಹೋಯಿತು. ನಿರಾಶೆಯಲ್ಲಿ ಲೀನವಾದಳು, ಉಸಿರಾಡುವ ಕಲ್ಲಿನಂತೆ! ಮಗ ಭಗತ್ ಸಿಂಗ್‌ನ ಸುಂದರ ಮುಖ ಕಣ್ಣಲ್ಲಿ ತೇಲುತಿತ್ತು, ಜೈಲಿನ ಲೋಹದ ಭಯಂಕರ ಸರಳುಗಳು ಭಯ ಬೀಳಿಸುತ್ತಿದ್ದವು, ಮತ್ತೆ ಭಗತ್ ಸಿಂಗ್‌ನ ಮುಖ ಮತ್ತು ನೇಣು ಕುಣಿಕೆ ಅಣಕಿಸುತ್ತಿತ್ತು.

ಕೆಲವು ದಿನಗಳ ನಂತರ ತಂದೆಯ ಹೆಸರಿಗೆ ದೆಹಲಿ ಕಾರಾಗೃಹದಿಂದ ಭಗತ್ ಸಿಂಗರ ಪತ್ರ ಬಂದಿತ್ತು. ಭೇಟಿಗಾಗಿ ಬರಲು ಕರೆದ ಪತ್ರ ತಂದೆಗೆ ಬಹಳ ಖುಷಿ ತಂದಿತ್ತು. ಆದರೆ ಮುಂದೆ ಹೀಗೂ ಬರೆಯಲಾಗಿತ್ತು: "ಅವ್ವ ಅವರಿಗೆ ತರಬೇಡಿ, ಸುಮ್ಮನೆ ಅಳುತ್ತಾಳೆ, ಅದನ್ನು ಕಂಡು ನನಗೂ ಅಳು ಬರುತ್ತದೆ." ಆಕೆ ಹೋಗಲಿಲ್ಲ, ಎಲ್ಲರೂ ಹೋಗಿಬಂದರು. ಆ ತಾಯಿಗೆ ಎಷ್ಟು ನೋವಾಗಿರಬಹುದು! ಆಕೆಯೇ ಬಲ್ಲಳು!! ದೆಹಲಿಯಲ್ಲಿ ಆಜೀವ ಜೈಲು ಶಿಕ್ಷೆಯ ನಂತರ ಬೇರೊಂದು ಮೊಕದ್ದಮೆಗಾಗಿ ಭಗತ್‌ನನ್ನು ಲಾಹೋರ್‌ಗೆ ತಂದರು, ಆಗ ಭಗತ್ ಸಿಂಗ್ ಕೈಗೊಂಡಿದ್ದ ಆಮರಣ ಉಪವಾಸ ಜಾರಿಯಲ್ಲಿತ್ತು. ವಿದ್ಯಾವತಿ ಹೇಳುತ್ತಾರೆ: "ಆಗ ಒಂದು ತುತ್ತು ಉಣ್ಣಲೂ ಮನಸ್ಸಾಗುತ್ತಿರಲಿಲ್ಲ. ಸದಾ ಕಾಲ ಮನಸ್ಸನ್ನು ಕಾಡುವುದೆಂದರೆ ಮಗ ಉಪವಾಸ ಇದ್ದರೆ ನಾನು ಊಟ ಮಾಡುವುದಾದರೂ ಹೇಗೆ ಎಂಬುದು. ಆದರೂ ಒಂದೆರಡು ತುತ್ತು ತಿನ್ನುತ್ತಿದ್ದೆ. ಏಕೆಂದರೆ ನಡೆದುಕೊಂಡು ಲಾಹೋರ್‌ಗೆ ಹೋಗಬೇಕಲ್ಲ! ಆ ದಿನಗಳಲ್ಲಿ ಭಗತ್ ಹಾಗೂ ಬಟುಕೇಶ್ವರದತ್ತ (ಅಸೆಂಬ್ಲಿ-ಬಾಂಬ್‌ಸ್ಫೋಟದ ಸಂಗಾತಿ) ಮೂಳೆಯ ಪಂಜರದಂತೆ ಕಾಣುತ್ತಿದ್ದರು. ಇಬ್ಬರಿಗೂ ಸ್ಟ್ರೆಚರ್ ಮೇಲೆ ಮಲಗಿಸಿ ಕೋರ್ಟಿಗೆ ತರುತ್ತಿದ್ದರು."

ಮೊಕದ್ದಮೆಯ ದಿನಗಳಲ್ಲಿ ಕುಟುಂಬದ ಎಲ್ಲರ ಲಕ್ಷ್ಯ ಬರೀ ಕೋರ್ಟು ಹಾಗೂ ಭಗತ್ ಸಿಂಗ್ ಅವರೆಡೆಗೇ ಕೇಂದ್ರೀಕೃತವಾಗಿತ್ತು. ಮನೆಯ ವ್ಯವಹಾರವೆಲ್ಲ

ನಿಂತುಬಿಟ್ಟಿತ್ತು. ಸರದಾರ್ ಕಿಶನ್ ಸಿಂಗ್ ಅವರು ಮೊಕದ್ದಮೆ, ಮೆರವಣಿಗೆ, ಸಭೆಗಳಲ್ಲಿ ಮುಳುಗಿಹೋಗಿದ್ದರು. ಇದ್ದದ್ದೆಲ್ಲ ಮಾರಾಟ ಮಾಡಿ ಖರ್ಚು ನಿಭಾಯಿಸುತ್ತಿದ್ದರು.

ಮಗನ ಭೇಟಿಗಾಗಿ ಹಲವು ಸಲ, ಹಲವು ಗಂಟೆಗಳವರೆಗೆ ಕಾರಾಗೃಹದ ಹೊರಗೆ ನಿಲ್ಲಬೇಕಾಗುತ್ತಿತ್ತು. ಜಿಲ್ಲಾಧಿಕಾರಿಗಳು ಗಮನಿಸುತ್ತಲೇ ಇರಲಿಲ್ಲ. ಭೇಟಿ ಸಾಧ್ಯವಾಗದೆ ಹಿಂತಿರುಗುವಾಗ ವಿದ್ಯಾವತಿಯವರ ಸ್ಥಿತಿ ಹೇಗಿರುತ್ತಿತ್ತೆಂದರೆ, ಖಾಲಿ ಜೋಳಿಗೆ ಹಿಡಿದು ಇಡೀ ದಿವಸ ಸುತ್ತಾಡಿದರೂ ಸಂಜೆಯೂ ಖಾಲಿ ಜೋಳಿಗೆ ಹಿಡಿದು ಹಿಂತಿರುಗುವ ಭಿಕ್ಷುಕನಂತೆ ದಯನೀಯ! ವಿದ್ಯಾವತಿ ಹೇಳುತ್ತಾರೆ: "ಬಾಬುಜೀ (ಸರದಾರ ಅರ್ಜುನ್ ಸಿಂಗ್), ಕುಲಬೀರ್ ಸಿಂಗ್ ಮತ್ತು ನಾನು ಕಾರಾಗೃಹದ ಬಾಗಿಲಿಗೆ ಮಧ್ಯಾಹ್ನ ತಲುಪಿದೆವು. ಸಂಜೆಯಾದರೂ ಭೇಟಿಗೆ ಕರೆಯಲಿಲ್ಲ. ನಾವು ಭಗತ್‌ಗೆ ಬಹಳ ಹತ್ತಿರದಲ್ಲಿದ್ದೆವು. ನಮ್ಮ ನಡುವೆ ಕೇವಲ ಒಂದು ಗೋಡೆ ಮಾತ್ರ. ಆಚೆಗೆ ಆತ, ಈಚೆಗೆ ನಾವು. ಆತನ ದರ್ಶನಕ್ಕೆ ನಮ್ಮ ಕಣ್ಣುಗಳು ಹಸಿದು ನಿಂತಿದ್ದವು, ಆದರೆ ಅದು ಸಾಧ್ಯವಾಗಲೇ ಇಲ್ಲ. ಹಿಂತಿರುಗಿ ನಡೆದುಕೊಂಡು ಸಾಗುತ್ತಿದ್ದೆವು. ಸೋತ ಮನಸ್ಸು ಮತ್ತು ದಣಿದ ಕಾಲುಗಳನ್ನು ಹೊತ್ತು ಹೇಗೋ ಕಲ್ಲುಮುಳ್ಳುಗಳ ದಾರಿ ಸವೆಸುತ್ತಿದ್ದೆವು. ಹಿಂದೆ ಅದ್ಯಾರೋ ಇಬ್ಬರು ಒಬ್ಬರಿಗೊಬ್ಬರು ಕಣ್ಸನ್ನೆ ಮಾಡುತ್ತ ನಮ್ಮ ಬೆನ್ನು ಬಿದ್ದಿದ್ದರು. ಕಳ್ಳರೆಂದು ಗೊತ್ತಾಗಿ ನಾನು ಜೋರಾಗಿ ಹೇಳಿದೆ: "ಭಗತ್ ಸಿಂಗ್‌ನ ವಕೀಲ ಏನೂ ಹೇಳೋದೇ ಇಲ್ಲ. ಸರಕಾರಿ ವಕೀಲ ಭಾಳ ಮಾತಾಡ್ತಾನೆ ಕುಲವೀರ! ಬೇರೊಬ್ಬ ವಕೀಲರನ್ನು ನೇಮಿಸಿಕೊಳ್ಳೋಣ. ಈ ಮಾತನ್ನು ಕೇಳಿಸಿಕೊಂಡು ಅವರು ಹಿಂದೆ ಸರಿದರು. ಭಗತ್ ಸಿಂಗ್ ಕಳ್ಳರಿಗೂ ಪೂಜನೀಯವಾಗಿದ್ದ ಎಂದು ತಿಳಿಯಿತು."

ಹೀಗೆ ಮತ್ತೊಮ್ಮೆ ಭೇಟಿಗೆ ಹೋದಾಗ ಭಗತ್ ಸಿಂಗ್ ಹೇಳಿದ: "ಅವ್ವಾರೇ, ನೀವೂ ಜೈಲಿಗೆ ಬಂದುಬಿಡಿ, ಇಲ್ಲಿ ಒಂದೇ ಕಡೆ ಇದ್ದುಬಿಡೋಣ, ನೀವು ನಡೆದುಕೊಂಡು ಬರುವ ಪ್ರಮೇಯವೇ ಇರುವುದಿಲ್ಲ." ತಾಯಿ ಉತ್ಸುಕತೆಯಿಂದ ಕೇಳಿದರು: "ಹೇಗೆ ಬರಲಿ ಮಗ! ನನಗೆ ಭಾಷಣ ಮಾಡಲು ಬರುವುದಿಲ್ಲ. ಪಿಕೆಟಿಂಗ್ ಮಾಡಿ ಬರಲೆ?" "ಅದೆಲ್ಲ ನಮ್ಮ ಕೆಲಸವಲ್ಲ" ಎಂದು ಭಗತ್ ಸಿಂಗ್ ಹೇಳಿದ. ಜೈಲು-ಗಲ್ಲು ಎನ್ನುವುದನ್ನೆಲ್ಲ ಮರೆತು ಆಕೆ ಹಾಸ್ಯದ ಮೂಡಿನಲ್ಲಿ ಹೇಳಿದಳು, "ಅಂದರೆ ಯಾರ ಕಡೆಗಾದರೂ ಕಲ್ಲು ಒಗೆದು ಬರಲೆ?" ಅವಳ ಮಾತನ್ನು ಕೇಳಿ ಭಗತ್ ಸಿಂಗ್ ಗಹಗಹಿಸಿ ನಕ್ಕರು. ಸುತ್ತಲೂ ಇದ್ದ ಜನರೂ ನಕ್ಕರು. ನನಗೆನಿಸುತ್ತದೆ, ತಾಯಿ ಮಗನ ಇಂತಹ ನಗು ಈ ಇತಿಹಾಸ ಎಂದಾದರೂ ಕಂಡಿರಲು ಸಾಧ್ಯವೇ!

ಗಲ್ಲಿಗೇರುವ ಕೆಲದಿನಗಳ ಹಿಂದೆ ಭೇಟಿಗೆ ಹೋದಾಗ ಭಗತ್ ಸಿಂಗ್ ತಾಯಿಗೆ ಹೇಳಿದ್ದ: "ಗಲ್ಲಿಗೇರಿಸುವ ದಿನ ನೀವು ಬರಬೇಡಿ ಅವ್ವ. ಅಳುತ್ತೀರಿ, ಮೂರ್ಛೆ ಹೋಗಿರುತ್ತೀರಿ, ಜನ ನಿಮಗೆ ಸಂಭಾಳಿಸಬೇಕೋ ಅಥವಾ ಹೆಣಗಳು ಪಡೆಯಲು ಹೆಣಗಾಡಬೇಕೋ? ಕುಲಬೀರ್‌ನನ್ನು ಕಳಿಸಿಬಿಡಿ. ಜೈಲಿನವರು ಕೊಟ್ಟರೆ ಅವನು ಹೆಣ ತೆಗೆದುಕೊಂಡು ಹೋದಾನು!" ಭಗತ್ ಸಿಂಗ್‌ರಿಗೆ ತನ್ನ ಮೃತ್ಯು ಆಮಂತ್ರಣ ಕೊಟ್ಟ ಮೃತ್ಯುವಾಗಿತ್ತು. ಕಾರಣ ಸಾವಿನ ನಂತರದ ಅವರ ಹೆಣ ಅವರಿಗೆ ಸರ್ವಶ್ರೇಷ್ಠ ಸಾಧನೆ ಆಗಿತ್ತು, ತಮ್ಮ ಬದುಕಿನ ಸಾರ್ಥಕತೆ ಹಾಗೂ ಪರಿಪೂರ್ಣತೆಯಾಗಿತ್ತು. ಇದರಿಂದಾಗಿ ಸಾವಿನ ನಂತರದ ತಮ್ಮ ಹೆಣ ಕುರಿತು ಇಷ್ಟೊಂದು ನಿರ್ಲಿಪ್ತತೆಯಿಂದ ಮಾತಾಡಲು ಅವರಿಗೆ ಸಾಧ್ಯವಾಯಿತು. ಆದರೆ ಆ ತಾಯಿ! ಆಕೆಯ ಹೃದಯದಲ್ಲಿ ನಡೆದ ಆ ಕಾಳಿಮಾತೆಯ ತಾಂಡವ ನೃತ್ಯದ ನೋವು ಆಕೆಗೇ ಗೊತ್ತು!

೨೩ ಮಾರ್ಚ್, ೧೯೩೧ರಂದು ಭಗತ್ ಸಿಂಗ್ ಅವರನ್ನು ಗಲ್ಲಿಗೇರಿಸಲಾಯಿತು. ಅದಕ್ಕೆ ಪ್ರತಿಕ್ರಿಯಿಸಿದ ತಾಯಿ: "ಸಮಾಚಾರ ಕೇಳಿ ನನ್ನ ಹೃದಯ ಒಡೆದುಹೋಯಿತು. ಒಳಗೆ ಕಣ್ಣೀರ ಸಮುದ್ರ ಘೀಳಿಡುತ್ತಿತ್ತು, ಆದರೆ ಕಣ್ಣಿಗೆ ಬರುವ ತನಕ ನನ್ನ ವಿವೇಕ ಅದನ್ನು ತಡೆಯುತ್ತಿತ್ತು. ನಗುನಗುತ್ತ ಗಲ್ಲಿಗೇರಿದ ನನ್ನ ಮಗ ಭಗತ್ ಅಂತಿಮವಾಗಿ ಹೇಳಿದ ಮಾತುಗಳು ಮತ್ತೆ ಮತ್ತೆ ಕಿವಿಯಲ್ಲಿ ಪ್ರತಿಧ್ವನಿಸುತ್ತಿದ್ದವು: "ಅವ್ವ ಅಳಬೇಡಿ, ತಾವು ಹುಚ್ಚಿಯಂತೆ ಅಳುತ್ತ ಸುತ್ತಾಡಿದಂತಾದೀತು. ಜನ ಅಂದುಕೊಂಡಾರು, ಭಗತ್‌ಸಿಂಗನ ಅವ್ವ ಅಳುತ್ತಾಳೆ" ಎಂದು. ಕರುಳು ಕಿತ್ತಿ ಬರುತ್ತಿತ್ತು, ಒಳಗೆ ನುಂಗಿಕೊಳ್ಳುತ್ತಿದ್ದೆ ಕಣ್ಣೀರನ್ನು!"

ಕುತ್ತಿಗೆಗೆ ನೇಣಿನ ಕುಣಿಕೆ ಹಾಕುವುದಕ್ಕಿಂತಲೂ ಕಠಿಣವಾದ ಕೆಲಸವಲ್ಲವೇನು ತಾಯಿಗೆ ಇದನ್ನು ನುಂಗಿಕೊಳ್ಳುವುದು, ಎಂದು ವಿಚಾರಿಸುತ್ತೇನೆ. ಆಕೆಗೆ ಇದು ಹೇಗೆ ಸಾಧ್ಯವಾಯಿತು? ಹೇಗೆ ಸಾಧ್ಯವಾಯಿತೆಂದರೆ, ಆ ಹೊತ್ತಿನಲ್ಲಿ ಆಕೆಯಲ್ಲಿ ಏಕ ಕಾಲಕ್ಕೆ ಇಬ್ಬರು ತಾಯಂದಿರು ಬಂದು ಕುಳಿತುಕೊಂಡಿದ್ದರು. ಒಬ್ಬ ತಾಯಿ ಮಗನ ತಾಯಿಯಾದರೆ, ಮತ್ತೊಬ್ಬ ತಾಯಿ ಶಹೀದನ ತಾಯಿ. ಮಗನ ತಾಯಿಗೆ ಅಳು ಉಕ್ಕಿ ಬರುತ್ತಿತ್ತಾದರೆ ಶಹೀದನ ತಾಯಿ ಅಳುವನ್ನು ತಡೆದು ನಿಲ್ಲಿಸುತ್ತಿದ್ದಳು. ಎಷ್ಟೊಂದು ಕರುಣಾಮಯಿ!



ಆ ತಾಯಿಯ ಪರಿವಾರ ಘೋರ ಸಂಕಟಕ್ಕೀಡಾಯಿತು ಕೆಲವೇ ದಿನಗಳಲ್ಲಿ. ನೂರಾರು ಚೀಲ ಕಾಳು ಬೆಳೆಯುವ ಈ ರೈತ ಪರಿವಾರ ಕೆಲ ಕಾಳಿಗಾಗಿ ಹೆಣಗಾಡಬೇಕಾಯಿತು. ಆಕೆಯ ಇಬ್ಬರು ಮಕ್ಕಳು ಕುಲಬೀರ್ ಸಿಂಗ್ ಹಾಗೂ ಕುಲತಾರ್ ಸಿಂಗ್ ಜೇಲು ಸೇರಿದರು. ಪತಿ ಸರದಾರ್ ಕಿಶನ್ ಸಿಂಗ್ ಲಕ್ವಾ ಹೊಡೆದು ವಿಕಲಾಂಗರಾಗಿ ಹಾಸಿಗೆ ಹಿಡಿದರು. ಈಗ ಆಕೆಯೇ ಎಲ್ಲವೂ ಆಗಬೇಕಾಯಿತು. ಆಕೆಯ ವ್ಯಕ್ತಿತ್ವಕ್ಕೆ ಮೂರು ಮುಖಗಳು: ಒಮ್ಮೆ ಕುಟುಂಬ ನೋಡಿಕೊಳ್ಳಬೇಕು, ಮತ್ತೊಮ್ಮೆ ಹೊಲ ನೆಲ ನೋಡಿ ಸುಧಾರಿಸಿಕೊಳ್ಳಬೇಕು, ಮಗದೊಮ್ಮೆ ಕೆಲ ಸಭೆಗಳಿಗೆ ಅಧ್ಯಕ್ಷತೆ ವಹಿಸಬೇಕು.

ಒಮ್ಮೆ ಮೋರಿಗೇಟ (ಲಾಹೋರ) ಹತ್ತಿರ ವಿದ್ಯಾವತಿ ಅವರ ಅಧ್ಯಕ್ಷತೆಯಲ್ಲಿ ಒಂದು ವಿಶಾಲ ಸಭೆ ನಡೆಯುತ್ತಿತ್ತು. ಸರಳವಾದ ಭಾಷೆಯಲ್ಲಿ ಭಾಷಣ ಮಾಡುತ್ತ ಇಂಗ್ಲಿಷರನ್ನು ಕುರಿತು ಅವರು ಹೇಳುತ್ತಾರೆ: "ನನ್ನ ಒಬ್ಬ ಮಗನನ್ನು ನೀವು ಗಲ್ಲಿಗೆ ಹಾಕಿದಿರಿ. ನನ್ನ ಚಿಕ್ಕ ಮೈದುನ ಸರದಾರ್ ಸ್ವರ್ಣ ಸಿಂಗ್‌ಗೆ ಜೇಲಿನಲ್ಲಿ ಶಾರೀರಿಕ ಹಿಂಸೆ ಕೊಟ್ಟು ರೋಗಕ್ಕೆ ನೂಕಿದಿರಿ. ಅದರಿಂದಾಗಿ ಅವನ ಸಾವಿಗೆ ಕಾರಣರಾದಿರಿ. ನನ್ನ ಎರಡನೆಯ ಮೈದುನ ಸರದಾರ್ ಅಜಿತ ಸಿಂಗ್‌ನನ್ನು ಗಡೀಪಾರು ಮಾಡಿ ವಿದೇಶದಲ್ಲಿ ಅಡ್ಡಾಡಿಸಿದಿರಿ. ಈಗ ನನ್ನ ಎರಡು ಮಕ್ಕಳಿಗೆ ಯಾವ ಮೊಕದ್ದಮೆಯೂ ನಡೆಸದೆ ಬಂಧಿಸಿದ್ದೀರಿ. ಇದೆಲ್ಲದರಿಂದ ನಾನು ಭಯಪಟ್ಟೆ ಎಂದುಕೊಂಡಿದ್ದೀರಾ? ಇಲ್ಲ. ಸತ್ತರೂ ನಾನು ನಿಮಗೆ ಬಾಗುವುದಿಲ್ಲ. ನಾನು ಬ್ರಿಟಿಷ್ ಸಾಮ್ರಾಜ್ಯಕ್ಕೆ ಆಹ್ವಾನ ಕೊಡುವೆ. ನನ್ನ ಉಳಿದಿಬ್ಬರು ಮಕ್ಕಳನ್ನು ದೇಶಸೇವೆಗಾಗಿ ಅರ್ಪಿಸುವೆ. ಬರ್‍ರಿ ಮೂರ್ಖರೇ! ನಿಮ್ಮ ಹಸಿವು ಇನ್ನೂ ಹಿಂಗದಿದ್ದರೆ, ಇವರನ್ನು ತೆಗೆದುಕೊಂಡು ಹೋಗಿ"! – ಈ ಮಾತುಗಳಿಂದ ಸಭೆಯಲ್ಲಿ ಉತ್ಸಾಹ ಉಕ್ಕಿತು, ಜನ 'ಶಹೀದ್ ಸಾಮ್ರಾಟ್ ಭಗತ್ ಸಿಂಗ್‌ರಿಗೆ ಜಯವಾಗಲಿ!' ಎಂಬ ಘೋಷಣೆ ಮೊಳಗಿಸಿದರು. ಘೋಷಣೆಯು ಭೂಮಿ-ಆಕಾಶದಲ್ಲಿ ಮೊಳಗಿತು. ಆ ತಾಯಿಯ ಮುಖ ತ್ಯಾಗದ ಬೆಳಕಿನಿಂದ ಹೊಳೆಯತೊಡಗಿತ್ತು.

ಶಹೀದ್ ಸಾಮ್ರಾಟ್ ಭಗತ್ ಸಿಂಗ್‌ರ ತಾಯಿ, ವಿದ್ಯಾವತಿ ಕ್ರಾಂತಿ ಜಗದ ಮಹಾತಾಯಿ ೧ ಜೂನ್, ೧೯೭೫ರಂದು ಅಂತಿಮ ಉಸಿರೆಳೆದು ತಮ್ಮ ಶಹೀದ್ ಪುತ್ರ ಭಗತ್ ಸಿಂಗ್ ಹಾಗೂ ಆತನ ಮೂವರು ಅಭಿನ್ನ ಸಂಗಾತಿಗಳೊಡನೆ ಸೇರಿಹೋದರು.

ಅವರ ಅಂತಿಮ ದಿನಗಳ ಸೂಕ್ತಿಯೊಂದು ಮಾತೃತ್ವದ ವಿಶ್ವಕೋಶದಲ್ಲಿ ಅಮರವಾಗಿ ಉಳಿಯಿತು: "ಮಕ್ಕಳ ದುಃಖವನ್ನು ತಾಯಂದಿರು ಪಡೆದುಕೊಳ್ಳುವ ಸರ್ವೋತ್ತಮ ವ್ಯವಸ್ಥೆಯೊಂದು ಆ ಈಶ್ವರನು ಮಾಡಿದ್ದೇ ಆದರೆ ವಿಶ್ವದ ಯಾವುದೇ ತಾಯಿಯು ತನ್ನ ಮಕ್ಕಳಲ್ಲಿ ಯಾರನ್ನೂ ದುಃಖಿಯಾಗಿರಲು ಬಿಡುತ್ತಿರಲಿಲ್ಲ." ತಾಯಿಯ ಈ ವಾತ್ಸಲ್ಯದ ಮೀಮಾಂಸೆ ಯಾರು ಮತ್ತು ಹೇಗೆ ಮಾಡಲು ಸಾಧ್ಯ?

**ಪ್ರೊ॥ ಕಾಶೀನಾಥ ಅಂಬಲಗೆ**
ಪ್ರೇರಣೆ ಹಾಗೂ ಸಹಕಾರ: ವೀರೇಂದ್ರ ಸಿಂಧು

ಜೆ.ಎನ್.ಯು. ವಿದ್ಯಾರ್ಥಿ ಸಂಘದ ಅಧ್ಯಕ್ಷ ಹಾಗೂ ಆಲ್ ಇಂಡಿಯಾ ಸ್ಟೂಡೆಂಟ್ಸ್ ಫೆಡರೇಶನ್ ನಾಯಕ ಕನ್ಹಯ್ಯಾ ಕುಮಾರನ ವಿಚಾರಣೆ ದೆಹಲಿಯ ನ್ಯಾಯಾಲಯದಲ್ಲಿ ನಡೆಯುವ ಸಂದರ್ಭದಲ್ಲಿ ಅವರ ಬೆಂಬಲಿಗ ವಿದ್ಯಾರ್ಥಿಗಳು, ಅಧ್ಯಾಪಕರು ಅಲ್ಲಿ ಸೇರಿದ್ದರು. ಅವರ ಮೇಲೆ ವಕೀಲರೆಂದು ಕರೆಸಿಕೊಳ್ಳುವ ಅಥವಾ ವಕೀಲರ ಸಮವಸ್ತ್ರವನ್ನು ಧರಿಸಿದ್ದ ಸಮಾಜವಿರೋಧಿ ಗುಂಪುಗಳು ದಾಳಿ ನಡೆಸಿದವು. ಮಾಧ್ಯಮದವರೂ ಇವರ ದಾಳಿಗೆ ತುತ್ತಾದರು. ಅಂದರೆ ಜೆ.ಎನ್.ಯು. ಒಳಗೆ ನಡೆಯುತ್ತಿದ್ದ ಸಂಘರ್ಷವನ್ನು ಸಂಘಪರಿವಾರವು ಬೀದಿಗೆ ತಂದಿದೆ ಎಂದರ್ಥ.



# ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ರಾಜಕೀಯ ಬಿರುಗಾಳಿ

ವಿದ್ಯಾರ್ಥಿಗಳು ರಾಜಕೀಯದಿಂದ ದೂರವಿರಬೇಕು ಎನ್ನುವುದು ಹಳೆಯ ಮಾತು. ಆದರೆ ಆಧುನಿಕ ಜಗತ್ತಿನಲ್ಲಿ ಈ ಮಾತು ಯಾವ ಸಂದರ್ಭದಲ್ಲಿಯೂ ಆಚರಣೆಗೆ ಇಳಿಯಲಿಲ್ಲ. ಭಾರತದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿಯಾಗಲಿ, ನಂತರದ ದಿನಗಳಲ್ಲಾಗಲಿ ವಿದ್ಯಾರ್ಥಿ ಸಮುದಾಯ ರಾಜಕೀಯದಿಂದ ದೂರವಿದ್ದದ್ದು ಕಡಿಮೆ. ಅದೇ ಸಂದರ್ಭದಲ್ಲಿ 'ರಾಜಕೀಯ ಶಿಕ್ಷಣ ಸಂಸ್ಥೆಗಳಿಂದ ದೂರವಿರಬೇಕು' ಎಂದು ಹೇಳುವುದು ತೀರ ಅಪರೂಪವೆಂಬುದನ್ನೂ ನೆನಪಿನಲ್ಲಿಡಬೇಕು. ಶಿಕ್ಷಣ ಸಂಸ್ಥೆಗಳು ಸಮಾಜದ ಅಂಗಗಳಾಗಿಯೇ ಹುಟ್ಟಿ ಬೆಳೆಯುತ್ತಿದ್ದು, ಅಲ್ಲಿನ ಶಿಕ್ಷಣಾರ್ಥಿಗಳೂ ತಮ್ಮ ಸುತ್ತಲಿನ ವಿದ್ಯಮಾನಗಳನ್ನು ತಮ್ಮದೇ ಆದ ರೀತಿಯಲ್ಲಿ ವಿಶ್ಲೇಷಿಸಿ ಅರ್ಥ ಮಾಡಿಕೊಳ್ಳುತ್ತಾರೆ. ರಾಜಕೀಯವೂ ಅಂಥ ವಿದ್ಯಮಾನಗಳ ಭಾಗವೇ. ಆ ವಿದ್ಯಾರ್ಥಿಗಳಲ್ಲಿ ಕೆಲವರು ಆ ರಾಜಕೀಯ ಚಟುವಟಿಕೆಗಳಲ್ಲಿ ನೇರವಾಗಿ ಭಾಗವಹಿಸುತ್ತಾರೆ. ಹೀಗಾಗಿ, ಅವರು ರಾಜಕೀಯದಿಂದ ದೂರವಿರಬೇಕು ಎನ್ನುವುದು ಒಂದು ಅಪ್ರಬುದ್ಧ ಹೇಳಿಕೆ. ಜವಾಹರಲಾಲ್ ನೆಹರು ವಿಶ್ವವಿದ್ಯಾಲಯದಲ್ಲಿನ ಇತ್ತೀಚಿನ ವಿದ್ಯಮಾನಗಳ ಹಿನ್ನೆಲೆಯಲ್ಲಿ ಸಮಾಜದ ಕೆಲ ಮೂಲೆಗಳಲ್ಲಿ ಇಂಥ ಮಾತುಗಳು ಕೇಳಿಬರುತ್ತಲಿವೆಯಾದ್ದರಿಂದ ಈ ಪೀಠಿಕೆಯೊಂದಿಗೆ ಈ ಲೇಖನವನ್ನು ಆರಂಭಿಸಬೇಕಾಯಿತು.



ಜೆ.ಎನ್.ಯು.ನಲ್ಲಿನ ಬೆಳವಣಿಗೆಗಳನ್ನು ದೇಶದಲ್ಲಿ ಇಂದಿನ ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಸನ್ನಿವೇಶಗಳಿಂದ ಬೇರ್ಪಡಿಸಿ ನೋಡಿದರೆ, ಅದು ನಮಗೆ ಅರ್ಧಸತ್ಯಗಳನ್ನೂ, ಅಸತ್ಯಗಳನ್ನೂ ನೀಡುವ ನೋಟವಾಗುತ್ತದೆ. ಸಂಘಪರಿವಾರದ ರಾಜಕೀಯ ಘಟಕವಾದ ಭಾ.ಜ.ಪ. ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಾಗಿನಿಂದ ದೇಶದ ಸಾಂಸ್ಕೃತಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ತನ್ನ ಮುದ್ರೆಯನ್ನು ಮೂಡಿಸುವ ಯತ್ನಗಳು ನಡೆಯುತ್ತಲೇ ಇವೆ. ಶಿಕ್ಷಣ ಮತ್ತು ಸಂಸ್ಕೃತಿ – ಇವೆರಡನ್ನೂ ತನ್ನ ಮುಷ್ಟಿಯಲ್ಲಿಟ್ಟುಕೊಂಡರೆ ಮಾತ್ರ ಇಲ್ಲಿನ ಜನರ ಬುದ್ಧಿಯನ್ನು ಪ್ರಭಾವಿಸಲು ಸಾಧ್ಯವೆಂಬ ಪರಿವಾರದ ಸಿದ್ಧಾಂತ ಹಿಂದಿನಿಂದಲೂ ಅವರ ಕಾರ್ಯಸೂಚಿಯ ಭಾಗ. ಈ ಬಹುಕಾಲದ ಬಯಕೆ ಸುಲಭವಾಗಿ ಈಡೇರುವ ಸಾಧ್ಯತೆಗಳು ಕಂಡುಬಂದಿದ್ದು 'ಅಭಿವೃದ್ಧಿ'ಯ ಮಂತ್ರ ಜಪಿಸುತ್ತಾ, ತನ್ನ ನಾಟಕೀಯ ಭಾಷಣಗಳ ಮೂಲಕ ಜನರನ್ನು ತಲುಪಿದ ನರೇಂದ್ರ ಮೋದಿಯ ನಾಯಕತ್ವದಲ್ಲಿ ಭಾ.ಜ.ಪ. ಅಧಿಕಾರ ಸ್ಥಾನದಲ್ಲಿ ಕುಳಿತಾಗ. ಅಂದಿನಿಂದಲೂ ಸಂಸತ್ತಿನ ಒಳಗೆ ಮತ್ತು ಹೊರಗೆ ಸಂಸತ್ಸದಸ್ಯರೆನಿಸಿಕೊಂಡವರೇ ರಾಷ್ಟ್ರದ ಸಂಸ್ಕೃತಿ, ದೇಶಭಕ್ತಿ, ದೇಶದ್ರೋಹದಂಥ ವಿಷಯಗಳ ಬಗ್ಗೆ ಪ್ರಚೋದನಕಾರಿ ಹೇಳಿಕೆಗಳನ್ನು ಉದುರಿಸುತ್ತಿದ್ದರೂ, ತನ್ನನ್ನು ತಾನು 'ಪ್ರಧಾನ ಸೇವಕ'ನೆಂದು ಕರೆದುಕೊಳ್ಳುವ ಪ್ರಧಾನ ಮಂತ್ರಿಯದು ಮಾತ್ರ ಜಾಣ ಕಿವುಡು ಮತ್ತು ಜಾಣ ಕುರುಡು. ಅದೊಂದು ರೀತಿಯ ಭಾ.ಜ.ಪ.ದೊಳಗಿನ ಶ್ರಮ ವಿಭಜನೆ.

ಭಾರತೀಯ ಇತಿಹಾಸ ಪರಿಷತ್ತು, ಪುಣೆಯ ಎಫ್.ಟಿ.ಟಿ.ಐ.ಗಳಲ್ಲಿ ತಮ್ಮವರನ್ನೇ ನೇಮಕ ಮಾಡಿದ್ದು, ಇತ್ತೀಚೆಗೆ ವಾರಣಾಸಿಯ ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಪ್ರಾಧ್ಯಾಪಕ, ಗಾಂಧಿವಾದಿ, ಹೆಸರಾಂತ ವಿಜ್ಞಾನಿ ಸಂದೀಪ್ ಪಾಂಡೆಯವರನ್ನು ನಕ್ಸಲರ ಬೆಂಬಲಿಗನೆಂದು ಕರೆದು ಕೆಲಸದಿಂದ ವಜಾ ಮಾಡಿದ್ದು, ಭಾರತೀಯ ವಿಜ್ಞಾನ ಅಧಿವೇಶನಗಳಲ್ಲಿ ಪ್ರಾಚೀನ ಭಾರತದ ನಿಜವಾದ ವೈಜ್ಞಾನಿಕ ಸಾಧನೆಗಳನ್ನು ಬದಿಗೊತ್ತಿ, ವೈಮಾನಿಕ ಶಾಸ್ತ್ರ, ಪ್ಲಾಸ್ಟಿಕ್ ಸರ್ಜರಿ ಮುಂತಾದ ಮಿಥ್ಯೆಗಳ ವೈಭವೀಕರಣ – ಇವು ಶಿಕ್ಷಣ, ಸಂಸ್ಕೃತಿಗಳನ್ನು 'ಕಬ್ಜಾ' ಮಾಡಿಕೊಳ್ಳಲು ಭಾ.ಜ.ಪ.ದವರು ನಡೆಸಿದ ಕೆಲವು ಪ್ರಯತ್ನಗಳ ನಿದರ್ಶನಗಳು. ಈ ಪ್ರಯತ್ನದಲ್ಲಿ ಅವರು ಯಶಸ್ವಿಯೂ ಆಗಿದ್ದಾರೆ.

ಉನ್ನತ ಶಿಕ್ಷಣ ಸಂಸ್ಥೆಗಳಿರುವುದೇ ವಿದ್ಯಾರ್ಥಿಗಳನ್ನು ಪಠ್ಯಪುಸ್ತಕಗಳಿಂದಾಚೆಗೆ ಕರೆದೊಯ್ದು ಅವರ ಬೌದ್ಧಿಕ ಸಾಮರ್ಥ್ಯವನ್ನು ಹೆಚ್ಚು ಮಾಡುವುದಕ್ಕಾಗಿ; ಆಳುವವರು ಹೇಳಿದ್ದೇ ಸರಿ ಎನ್ನುತ್ತಾ ಮೂಕಪ್ರಾಣಿಗಳನ್ನು ಸೃಷ್ಟಿಸುವುದಕ್ಕಾಗಿ ಅಲ್ಲ. ಸಂಘಪರಿವಾರದವರಿಗೆ ರಾಷ್ಟ್ರ, ಸಂಸ್ಕೃತಿ, ಸಮಾಜ, ರಾಷ್ಟ್ರೀಯತೆ, ರಾಷ್ಟ್ರಪ್ರೇಮ

**ನಗರಗೆರೆ ರಮೇಶ್**

ಇತ್ಯಾದಿಗಳ ಬಗ್ಗೆ ತಮ್ಮದೇ ಆದ, ಗೋಳ್ವಾಲ್ಕರ್, ಸಾವರ್ಕರ್ ಪ್ರಣೀತ ಧೋರಣೆಗಳಿವೆ. ಈ ಧೋರಣೆಗಳನ್ನು ಒಪ್ಪಿ ದೇಶವನ್ನು ಒಂದು ಭೂಪಟದ ಮಟ್ಟಕ್ಕೆ ಇಳಿಸಿ ಪೂಜಿಸುವುದು ಇವರ ಪ್ರಕಾರ ದೇಶಪ್ರೇಮ. ಈ ದೇಶದಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಸಾಮಾಜಿಕ ತಾರತಮ್ಯವನ್ನು ಟೀಕಿಸುತ್ತಾ, ದೇಶದ ಭೂಪಟಕ್ಕಿಂತಲೂ ದೇಶವಾಸಿಗಳು ಮುಖ್ಯ ಎಂದು ಹೇಳುವವರು ದೇಶದ್ರೋಹಿಗಳು; ಕೋಮುಸಾಮರಸ್ಯ ಬಯಸುವವರನ್ನು ಕೊಲ್ಲುವವರು 'ಶೂರರು'. ಇಲ್ಲಿನ ಧಾರ್ಮಿಕ ಅಲ್ಪಸಂಖ್ಯಾತರು, ಕಮ್ಯುನಿಸ್ಟರು ದೇಶವಿರೋಧಿಗಳು; ಮುಸಲ್ಮಾನರಾದರೆ ಉಗ್ರಗಾಮಿಗಳು ಅಥವಾ ಅವರ ಬೆಂಬಲಿಗರು, ಕ್ರೈಸ್ತರಾದರೆ ಮತಾಂತರದಲ್ಲಿ ತೊಡಗುವವರು ಅಥವಾ ಅವರ ಬೆಂಬಲಿಗರು; ಹಿಂದುಗಳಾದರೆ ಅವರು ನಕ್ಸಲೈಟರು ಅಥವಾ ಅವರ ಬೆಂಬಲಿಗರು. ಒಟ್ಟಿನಲ್ಲಿ, ತಮ್ಮನ್ನು ವಿರೋಧಿಸುವವರು, ಅವರು ಯಾವುದೇ ಧರ್ಮವನ್ನು ಅನುಸರಿಸಲಿ, ಅನುಸರಿಸದಿರಲಿ, ಅವರಿಗಾಗಿ ಒಂದು ಹಣೆಪಟ್ಟಿ ಆರ್.ಎಸ್.ಎಸ್.ನವರ ಬಳಿ ಸಿದ್ಧ.

ತನ್ನ ಸಿದ್ಧಾಂತಗಳನ್ನು ಹರಡಲು, ವಿದ್ಯಾಸಂಸ್ಥೆಗಳಲ್ಲಿ ಕೆಲಸ ಮಾಡಲು, ಅಭಾವಿಪವನ್ನು ಸೃಷ್ಟಿಸಿರುವ ಸಂಘಪರಿವಾರ ಕೇಂದ್ರದಲ್ಲಿ ತಮ್ಮದೇ ಪಕ್ಷ ಅಧಿಕಾರಕ್ಕೆ ಬಂದನಂತರ ರಣೋತ್ಸಾಹದೊಂದಿಗೆ ದುಡಿಯುತ್ತಿದೆ. ಇಂಥ ಪ್ರಯತ್ನಗಳ ಭಾಗವಾಗಿಯೇ, ಚೆನ್ನೈನ ಐ.ಐ.ಟಿ.ಯಲ್ಲಿನ ಅಂಬೇಡ್ಕರ್, ಪೆರಿಯಾರ್ ಅಧ್ಯಯನ ವೇದಿಕೆಯ ಸದಸ್ಯರ ಮೇಲೆ ನಿಷೇಧವನ್ನು ಹೇರಲಾಯಿತು; ಹೈದರಾಬಾದಿನ ಕೇಂದ್ರೀಯ ವಿಶ್ವವಿದ್ಯಾಲಯದ ಅಂಬೇಡ್ಕರ್ ವಿದ್ಯಾರ್ಥಿ ಸಂಘಟನೆಯನ್ನು 'ರಾಷ್ಟ್ರ ವಿರೋಧಿ', 'ಜಾತಿವಾದಿ' ಎಂದು ಕರೆದು ಅದರ ಐವರು ಸದಸ್ಯರನ್ನು ವಸತಿನಿಲಯದಿಂದ ಹೊರಹಾಕಲಾಯಿತು; ಪರಿಣಾಮವಾಗಿ ಅತ್ಯಂತ ಸೂಕ್ಷ್ಮಮತಿ, ಸಂವೇದನಾಶೀಲಿಯಾದ ರೋಹಿತ್ ವೇಮುಲನ (ಆತ್ಮ)ಹತ್ಯೆಯಾಯಿತು. ಇದೀಗ ಅಖಿಲ ಭಾರತೀಯ ವಿದ್ಯಾರ್ಥಿ ಸಂಘಟನೆ ಒಂದು ದೇಶವಿರೋಧಿ ಸಂಸ್ಥೆ ಎಂದು ಬಿಂಬಿತವಾಗುತ್ತಿದೆ.

ಈ ಎಲ್ಲ ಸಂದರ್ಭಗಳಲ್ಲಿಯೂ ಅಭಾವಿಪದ ನೇರ ಕೈವಾಡವಿರುವುದು ಈಗಾಗಲೇ ಸಿದ್ಧಪಟ್ಟಿದೆ. ಹೈದರಾಬಾದಿನ ಅಭಾವಿಪ ಒಬ್ಬ ಕೇಂದ್ರ ಮಂತ್ರಿಗೆ ದಲಿತ ವಿದ್ಯಾರ್ಥಿಗಳ ವಿರುದ್ಧ ದೂರು ಸಲ್ಲಿಸಿದಾಗ ಆ ದೂರನ್ನು ಕೇಂದ್ರ ಮಾನವ ಸಂಪನ್ಮೂಲ ಸಚಿವರ ಗಮನಕ್ಕೆ ತರಲಾಯಿತು. ನಂತರದ ಬೆಳವಣಿಗೆಗಳು ಕ್ಷಿಪ್ರವಾಗಿ ನಡೆದು, ಅಲ್ಲಿ ನಡೆದ ಹುನ್ನಾರಗಳೆಲ್ಲವೂ ಜಗಜ್ಜಾಹೀರಾಗಿವೆ. ಅಂಥದೇ ತಂತ್ರಗಾರಿಕೆ ದೆಹಲಿಯಲ್ಲಿಯೂ ಪ್ರಯೋಗದ ಹಂತದಲ್ಲಿದೆ. ಇದರ ಪರಿಣಾಮಗಳಂತೂ ಅತ್ಯಂತ ವಿಷಮ ಹಾಗೂ ವಿಷಮಯವಾಗಿವೆ.

## ಅಭಿನಂದನೆ

ನವಕರ್ನಾಟಕ ಪ್ರಕಾಶನದ 'ವೈಚಾರಿಕ ಕವನಗಳು' ಎಂಬ ಕೃತಿಗಾಗಿ ಲೇಖಕ ಎಸ್. ಮಂಜುನಾಥ ಅವರಿಗೆ ಬೆಳಗಾವಿ ಜಿಲ್ಲೆಯ ಆಜೂರ ಪ್ರತಿಷ್ಠಾನದವರು ಕೊಡಮಾಡುವ ರಾಜ್ಯಮಟ್ಟದ 'ಆಜೂರ ಪ್ರಶಸ್ತಿ' ಲಭಿಸಿದೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಹಾರ್ದಿಕ ಅಭಿನಂದನೆಗಳು.

ಹೈದರಾಬಾದಿನಲ್ಲಿ ತನಗೆ ಅಂಟಿದ ಕಳಂಕವನ್ನು ತೊಳೆದುಕೊಳ್ಳಲು, ಜನರ ಗಮನವನ್ನು ಆ ಘಟನೆಯಿಂದ ಬೇರೆಡೆ ಸೆಳೆಯಲು, ಜೆ.ಎನ್.ಯು.ನಲ್ಲಿನ ಕೆಲವು ಸಂದರ್ಭಗಳನ್ನು ಬಳಸಿಕೊಳ್ಳಲಾಯಿತು. ಜೆ.ಎನ್.ಯು.ನಲ್ಲಿ ವಿದ್ಯಾರ್ಥಿ ಸಂಘಟನೆಯೊಂದು ಆಯೋಜಿಸಿದ ಕಾರ್ಯಕ್ರಮವೊಂದರಲ್ಲಿ ನಡೆದವೆನ್ನಲಾದ ಕೆಲವು ಅಹಿತಕರ ಘಟನೆಗಳನ್ನೇ ಮುಂದುಮಾಡಿ ರಾಷ್ಟ್ರದ ರಾಜಧಾನಿಯನ್ನೇ ಯುದ್ಧರಂಗವನ್ನಾಗಿ ಮಾರ್ಪಡಿಸಿದ "ಸಾಧನೆ" ಅಭಾವಿಪದ್ದು. ಹೈದರಾಬಾದಿನ ವಿಷಯದಲ್ಲಿ ಮಾನವ ಸಂಪನ್ಮೂಲ ಸಚಿವರ ಕೈವಾಡ ಸ್ಪಷ್ಟವಾಗಿದ್ದ ಹಾಗೆ, ದೆಹಲಿಯಲ್ಲಿ ಕೇಂದ್ರ ಗೃಹಮಂತ್ರಿ ತನ್ನ ಅಡಿಯಲ್ಲಿ ಕೆಲಸ ಮಾಡುವ ದೆಹಲಿ ಪೊಲೀಸರನ್ನು ಬಳಸಿ 'ದೇಶದ್ರೋಹಿ'ಗಳನ್ನು ಮಟ್ಟಹಾಕಲು ಹೊರಟಿದ್ದಾರೆ. ಜೆ.ಎನ್.ಯು.ನಲ್ಲಿ ನಡೆದ ಕಾರ್ಯಕ್ರಮದಲ್ಲಿ ಭಾರತ ವಿರೋಧಿ ಘೋಷಣೆಗಳನ್ನು ಕೂಗಿದವರು ಯಾರು ಎನ್ನುವ ಪ್ರಶ್ನೆಗೆ ಉತ್ತರ ಸಿಗುವ ಮೊದಲೇ ಜೆ.ಎನ್.ಯು. ವಿದ್ಯಾರ್ಥಿ ಸಂಘದ ಅಧ್ಯಕ್ಷರನ್ನು ಸೆರೆಹಿಡಿದು 'ದೇಶದ್ರೋಹ' ಆಪಾದನೆಯನ್ನು ಹೊರಿಸಲಾಗಿದೆ. ಅಫ್ಜಲ್ ಗುರುವಿಗೆ ವಿಧಿಸಿದ ಗಲ್ಲು ಶಿಕ್ಷೆಯ ಸಂಬಂಧ ಅಂದಿನಿಂದಲೂ ವಾದವಿವಾದಗಳು ನಡೆದೇ ಇವೆ. ಕಾಶ್ಮೀರದ ಪಿ.ಡಿ.ಪಿ. ಅಫ್ಜಲ್ ಗುರುವನ್ನು ಹುತಾತ್ಮ ಎಂದೇ ಬಣ್ಣಿಸಿತ್ತು. ಅದೇ ಪಕ್ಷದೊಂದಿಗೆ ಅಧಿಕಾರವನ್ನು ಹಂಚಿಕೊಳ್ಳುವಲ್ಲಿ ಭಾ.ಜ.ಪ.ಕ್ಕೆ ಯಾವ ದೇಶಪ್ರೇಮದ ನಿಲುವೂ ಅಡ್ಡಿಯಾಗಲಿಲ್ಲ. ಇಂಥ ದ್ವಂದ್ವಗಳ ಕುರಿತು ಪ್ರಶ್ನಿಸಿದಾಗ ಆ ವಿಷಯವನ್ನು ಪಕ್ಕಕ್ಕೆ ಸರಿಸಿ ಬೇರೆ ವಿಷಯಗಳ ಬಗ್ಗೆ ದೊಡ್ಡ ಗಂಟಲಿನಲ್ಲಿ ದೀರ್ಘ ಭಾಷಣ ಮಾಡುವುದು ಭಾಜಪದವರಿಗೆ ನೀಡುವ ತರಬೇತಿಯ ಒಂದು ಭಾಗವೆಂದೇ ತೋರುತ್ತದೆ.

ಜೆ.ಎನ್.ಯು. ವಿದ್ಯಾರ್ಥಿ ಸಂಘದ ಅಧ್ಯಕ್ಷ ಹಾಗೂ ಆಲ್ ಇಂಡಿಯಾ ಸ್ಟೂಡೆಂಟ್ಸ್ ಫೆಡರೇಶನ್ ನಾಯಕ ಕನ್ಹಯ್ಯಾ ಕುಮಾರನ ವಿಚಾರಣೆ ದೆಹಲಿಯ ನ್ಯಾಯಾಲಯದಲ್ಲಿ ನಡೆಯುವ ಸಂದರ್ಭದಲ್ಲಿ ಅವರ ಬೆಂಬಲಿಗ ವಿದ್ಯಾರ್ಥಿಗಳು, ಅಧ್ಯಾಪಕರು ಅಲ್ಲಿ ಸೇರಿದ್ದರು. ಅವರ ಮೇಲೆ ವಕೀಲರೆಂದು ಕರೆಸಿಕೊಳ್ಳುವ ಅಥವಾ ವಕೀಲರ ಸಮವಸ್ತ್ರವನ್ನು ಧರಿಸಿದ್ದ ಸಮಾಜವಿರೋಧಿ ಗುಂಪುಗಳು ದಾಳಿ ನಡೆಸಿದವು. ಮಾಧ್ಯಮದವರೂ ಇವರ ದಾಳಿಗೆ ತುತ್ತಾದರು. ಅಂದರೆ ಜೆ.ಎನ್.ಯು. ಒಳಗೆ ನಡೆಯುತ್ತಿದ್ದ ಸಂಘರ್ಷವನ್ನು ಸಂಘಪರಿವಾರವು ಬೀದಿಗೆ ತಂದಿದೆ ಎಂದರ್ಥ. ಭಾಜಪದ ಶಾಸಕನೊಬ್ಬ ಮತ್ತೊಂದು ರಾಜಕೀಯ ಪಕ್ಷದ ಕಾರ್ಯಕರ್ತನನ್ನು ಹಿಡಿದೆಳೆದಾಡಿ ಹಲ್ಲೆ ಮಾಡಿದ್ದು ದಾಖಲಾಗಿದೆ. ಆದರೆ ಆ 'ಜನಪ್ರತಿನಿಧಿ'ಗೆ ತಾನು ಮಾಡಿದ ಕೆಲಸದ ಬಗ್ಗೆ ಯಾವುದೇ ವಿಷಾದ ಅಥವಾ ಪಶ್ಚಾತ್ತಾಪವಿಲ್ಲ. ತಾನೊಬ್ಬ ದೇಶಪ್ರೇಮಿ, ದೇಶದ್ರೋಹಿಗಳನ್ನು ಶಿಕ್ಷಿಸುವುದು ತನ್ನ ಕರ್ತವ್ಯ, ಹಕ್ಕು ಎನ್ನುವ ಧಾಟಿಯಲ್ಲಿಯೇ ಆ ವ್ಯಕ್ತಿಯ ಮಾತು ಮುಂದುವರಿದಿದೆ.

ಕನ್ಹಯ್ಯಾ ಕುಮಾರ್ ಬಿಹಾರದ ಒಬ್ಬ ಸಾಮಾನ್ಯ ಅಂಗನವಾಡಿ ಕಾರ್ಯಕರ್ತೆಯ ಮಗ; ಜೆ.ಎನ್.ಯು.ನಲ್ಲಿ ಸಂಶೋಧನಾ ವಿದ್ಯಾರ್ಥಿ. ಹೈದರಾಬಾದಿನ ರೋಹಿತ್ ವೇಮುಲ ಆಂಧ್ರಪ್ರದೇಶದ ಬಡ ದಲಿತ ಮಹಿಳೆಯ ಮಗ; ಕೇಂದ್ರೀಯ ವಿಶ್ವವಿದ್ಯಾಲಯದಲ್ಲಿ ಸಂಶೋಧನೆಯಲ್ಲಿ ತೊಡಗಿರುವ ಪ್ರತಿಭಾವಂತ ವಿದ್ಯಾರ್ಥಿ. ಇಬ್ಬರೂ ತಳಸಮುದಾಯದಿಂದ ಬಂದವರು. ಇಂಥವರು ವ್ಯವಸ್ಥೆಯ ಮೇಲಿನ ಮೆಟ್ಟಿಲಲ್ಲಿರುವವರನ್ನು ವಿಮರ್ಶಿಸುವುದು ಆ ಜನರ ಪ್ರತಿನಿಧಿಯಾದ ಅಭಾವಿಪಕ್ಕೆ ನುಂಗಲಾರದ ತುತ್ತು. ಭಾರತ ವಿರೋಧಿ ಘೋಷಣೆಗಳನ್ನು ಕೂಗಿದರೆನ್ನಲಾದ ಆಪಾದನೆಗೆ ಗುರಿಯಾಗಿರುವ ಡೆಮೊಕ್ರಾಟಿಕ್ ಸ್ಟೂಡೆಂಟ್ಸ್ ಯೂನಿಯನ್‌ನ ಸದಸ್ಯರು ಮಾವೋಯಿಸ್ಟರ ಬೆಂಬಲಿಗರು. ಅದೇ ರೀತಿ, ಅದೇ ಕಾರಣಕ್ಕೆ ದೇಶದ್ರೋಹದ ಆರೋಪದ ಮೇಲೆ ಬಂಧನಕ್ಕೊಳಗಾಗಿರುವ ದೆಹಲಿ ವಿಶ್ವವಿದ್ಯಾಲಯದ ಪ್ರೊ॥ ಗಿಲಾನಿ ಒಬ್ಬ ಮುಸಲ್ಮಾನ. ಈ ವಿವರಗಳು ಸಾಕು ಕೇಂದ್ರದಲ್ಲಿರುವ ದೇಶಭಕ್ತರ ಸರ್ಕಾರಕ್ಕೆ 'ಗೌರವಾನ್ವಿತ' ಸಮಾಜದ ಮುಂದೆ ಈ ಎಲ್ಲರೂ ದೋಷಿಗಳು, ರಾಷ್ಟ್ರ ವಿರೋಧಿಗಳು ಎಂದು ಬಿಂಬಿಸಲು; ನ್ಯಾಯಾಲಯಗಳಲ್ಲಿ ವಿಚಾರಣೆ ನಡೆಯುವುದಕ್ಕೂ ಮುನ್ನವೇ ಮಾಧ್ಯಮಗಳಲ್ಲಿ ಇವರ ವಿಚಾರಣೆ ನಡೆದು, ಅವರಿಗೆ ಶಿಕ್ಷೆಯನ್ನೂ ವಿಧಿಸಲು.

ಜೆ.ಎನ್.ಯು. ಪ್ರಕರಣವು ಗಂಟೆ ಗಂಟೆಗೂ, ದಿನ ದಿನಕ್ಕೂ ಹೊಸ ಆಯಾಮಗಳನ್ನು ಪಡೆದುಕೊಳ್ಳುತ್ತಿದೆ. ವಿವಿಧ ರಾಜಕೀಯ ಪಕ್ಷಗಳೂ ರಂಗಪ್ರವೇಶ ಮಾಡಲೇಬೇಕಾಗಿ ಬಂದಿದೆ. ಭಾ.ಜ.ಪ.ಕ್ಕಿದ್ದಂತೆ, ಆ ಪಕ್ಷಗಳಿಗೂ ರಾಜಕೀಯ ಲೆಕ್ಕಾಚಾರವಿರುವುದು ತುಂಬ ಸಹಜ. ಆದರೆ ನಾಗರಿಕ ಸಮಾಜದಲ್ಲಿಯೂ ಸಹ ಜನ ಈ ಎಲ್ಲ ವಿಷಯಗಳನ್ನೂ ಕೂಲಂಕಷವಾಗಿ ವಿಶ್ಲೇಷಿಸಿ 'ಹುಸಿ ತಟಸ್ಥ ನೀತಿ'ಯನ್ನು ಬದಿಗೊತ್ತಿ ಪ್ರಗತಿಪರ ಹಾದಿಯಲ್ಲಿ ನಡೆದು, ಧರ್ಮನಿರಪೇಕ್ಷತೆ, ಸಮಾಜವಾದದಂಥ ಸಾಂವಿಧಾನಿಕ ಮೌಲ್ಯಗಳನ್ನು ಎತ್ತಿಹಿಡಿಯಬೇಕಾದ ಸಮಯವಿದು. ಇಲ್ಲವಾದಲ್ಲಿ, ಭಾರತದಲ್ಲಿ ಸ್ಥಾಪನೆಯಾಗುವ ಫ್ಯಾಸಿಸ್ಟ್ ಆಡಳಿತವನ್ನು ಅನುಭವಿಸಲು ಸಿದ್ಧರಾಗಬೇಕಾಗುತ್ತದೆ.

**ನಗರಗೆರೆ ರಮೇಶ್**
ನಂ. ೩೬೬, ೮ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು – ೫೬೦ ೦೭೦

# ಬಲೆ ಎಂದಿನಿಂದ ಇದೆ




ತಮಾ, ವೇಮುಲ
ಯಾಕಯ್ಯ ಇಂಥ ತಳಮಳ ?
ನೆತ್ತರ ಬಸಿದು
ನರನಾಡಿ ಹೊಸೆದು
ದೊಂದಿ ಹೊತ್ತಿಸ ಹೊರಟವನು
ಉರಿದು ಲಯವಾಗಬಹುದೆ ಹೀಗೆ
ಯಾರೊ ಹೊತ್ತಿಸಿದ ಕಿಚ್ಚಿಗೆ ?
ಒದ್ದೆ ರೆಕ್ಕೆಯ ಹಕ್ಕಿಗೆ
ಒಳಗದೆಂಥ ಬೇಗೆ ?

ಕಿತ್ತುಕೊಂಡವರು ಬಿಟ್ಟುಬಿಡಲಾರರು ಸುಲಭಕ್ಕೆ.
ಸೋಲುವ ಭಯಕೆ ಕತ್ತಿಯಾಗಿಸುತಾರೆ ನಾಲಿಗೆ.
ನಿನ್ನ ಕಣ್ಣಹನಿ ಎಣಿಸಲು
ಕೊಳ್ಳಿದೆವ್ವಗಳು ಪಹರೆ ಕೂತಿವೆ.
ತಮ್ಮ ಹಸಿವೆ ತೀರಿಸಲು ಬೇಯಿಸುತಾವೆ
ನಿನ್ನನೊಂದು ರೊಟ್ಟಿ ತುಣುಕೆಂಬ ಹಾಗೆ.
ಧರೆಗೆ ರಕ್ತಗಂಬಳಿ ಹಾಸುವವರೆಗೆ
ನೆಮ್ಮದಿಯಿಲ್ಲ ಅಧಿನಾಯಕನಿಗೆ
ಗೌಳಿ ಪತನ ಫಲ ನೆಚ್ಚಿ ತಿರುಗಿಸಲಾಗಿದೆ
ನೆಲದ ಗಡಿಯಾರಗಳ ಹಿಂದಕೆ.

ರೆಕ್ಕೆ ತೇವಗೊಂಡ ಹಕ್ಕಿಗಳೇ
ಹಣತೆಯೆಂದೂ ಕಗ್ಗತ್ತಲ ಕುರಿತು ದುಃಖಿಸುವುದಿಲ್ಲ
ಕೊಳಲೆಂದೂ ಮೌನ ಭಾಷೆ ಆಡುವುದಿಲ್ಲ
ಕರುಣದ ಗುರುವಿದ್ದಾನೆ ನಮಗೆ
ನಿತ್ಯಸೂರ್ಯ ಬಾಬಾ ಇದ್ದಾರೆ
ನಮ್ಮ ಹಗಲುಗಳಿಂದ ಬೆಳಕ ಕಿತ್ತುಕೊಳ್ಳಲಾರರು ಯಾರೂ
ಇರುಳಿನಾಗಸದಿಂದ ಚುಕ್ಕೆಗಳ ಕದಿಯಲಾರರು ಯಾರೂ...

ಜಿಗಣಿ ಬಲೆ ಎಂದಿನಿಂದ ಇದೆ
ಮಾಲಕರು ಬದಲಾಗಿದ್ದಾರೆ ಅಷ್ಟೆ
ಬನ್ನಿ, ಕಿತ್ತು ಕಡಿದು ಹಾರಿಬಿಡೋಣ ಒಟ್ಟಿಗೆ
ಸೂರ್ಯ, ಬಿಸಿಲು, ರೆಕ್ಕೆ, ಮುಗಿಲು
ಎಲ್ಲವೂ ನಮದೆ...

**ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕವಲಕ್ಕಿ ಅಂಚೆ
ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ – ೫೮೧ ೩೬೧

# ಖಾಸಗಿ ಸಂಪ್ರದಾಯ ಆಚರಣೆಗಳು : ಹೆಣ್ಣು

**ಡಾ॥ ವೀರೇಶ**

ಸಮಾಜ ಮತ್ತು ಸಮುದಾಯಗಳಲ್ಲಿ ಹೆಣ್ಣು ಒಂದಲ್ಲ ಒಂದು ಕಾರಣಕ್ಕಾಗಿ ಪೂಜೆ, ವ್ರತ, ಉಪವಾಸದಂತಹ ಸಂಪ್ರದಾಯ ಆಚರಣೆಗಳನ್ನು ನಿರಂತರವಾಗಿ ಮಾಡುತ್ತ ಬರುತ್ತಿದ್ದಾಳೆ. ಇದಕ್ಕೆ ಸಾಂಸ್ಕೃತಿಕ ಹಾಗೂ ಸಾಮಾಜಿಕ ಒತ್ತಡಗಳೆರಡೂ ಕಾರಣ. ಸಂಪ್ರದಾಯ ಆಚರಣೆಗಳು ಪೂಜೆ, ವ್ರತ, ಉಪವಾಸ ಆರಾಧನೆಯಂಥವು ಧರ್ಮದ ಹಿನ್ನೆಲೆಯಿಂದ ಬಂದವುಗಳಾಗಿವೆ. ಇವುಗಳನ್ನು ಆಚರಿಸಲೇಬೇಕು. ಇವುಗಳಲ್ಲಿ ಸಂತಾನಕ್ಕಾಗಿ, ಒಳ್ಳೆ ಗಂಡನ ಆಗಮನಕ್ಕಾಗಿ, ಗಂಡನ ಆಯುಷ್ಯಕ್ಕಾಗಿ, ತಂದೆ–ಮಕ್ಕಳ ಅಭಿವೃದ್ಧಿಗಾಗಿ, ಕುಟುಂಬದ ಐಶ್ವರ್ಯಕ್ಕಾಗಿ ನಡೆಸಿಕೊಂಡು ಬಂದಿರುವುದು ಕಂಡುಬರುತ್ತದೆ. ಆದರೆ ಇದರಲ್ಲಿ ಹೆಣ್ಣು ತನಗಾಗಿ ತನ್ನ ಶ್ರೇಯಸ್ಸಿಗಾಗಿ, ಅಭಿವೃದ್ಧಿಗಾಗಿ ಯಾವುದನ್ನೂ ಮಾಡುವಂತೆ ಕಂಡುಬರುವುದಿಲ್ಲ. ಸಮಾಜದಲ್ಲಿ ಮಹಿಳೆಗೆ ಶ್ರೇಯಸ್ಸು, ಅಭಿವೃದ್ಧಿ, ಐಶ್ವರ್ಯ, ಸಂತೋಷ, ಆರೋಗ್ಯ ಎಲ್ಲವೂ ಏನಿದ್ದರೂ ಪುರುಷ(ಗಂಡ)ನಿಂದಲೇ, ಮಕ್ಕಳಿಂದಲೇ ಎಂದು ಪರಿಭಾವಿಸಿಕೊಳ್ಳುವಂತೆ ಮಾಡಲಾಗಿದೆ. ಹೆಣ್ಣು ಹೆರಲೇ ಬೇಕು ಎನ್ನುವ ಒತ್ತಡ. ಒಂದು ವೇಳೆ ಹೆಣ್ಣು ಹೆತ್ತಿಲ್ಲವೆಂದರೆ ಅವಳು ಸಮಾಜದ ಕ್ರೂರ ದೃಷ್ಟಿಗೆ ಗುರಿಯಾಗುತ್ತಾಳೆ. ಗಂಡಿಗೆ ದೈಹಿಕ ದೋಷವಿದ್ದರೂ ಅದನ್ನು ಮುಚ್ಚಿಹಾಕಿ ಹೆಣ್ಣು ಮಕ್ಕಳನ್ನು ಪಡೆಯಲೇಬೇಕು ಎನ್ನುವ ಸಮಾಜ ಹೇರುವ ಒತ್ತಡ ಅವಳು ಅನೇಕ ರೀತಿಯ ಪೂಜೆ, ವ್ರತ, ಉಪವಾಸದಂತಹ ಆರಾಧನೆಯನ್ನು ಖಾಸಗಿಯಾಗಿ ಕೈಗೊಳ್ಳುವಂತೆ ಮಾಡುತ್ತಿದೆ. ಇದು ಶತಶತಮಾನಗಳಿಂದಲೂ ನಡೆದುಬಂದಿದೆ. ಇದಕ್ಕೆ ಜನಪದ ಸಾಹಿತ್ಯದ ಕಥೆಗಳಲ್ಲಿ ಕಂಡುಬರುವ ಹತ್ತು ಹಲವು ನಂಬಿಕೆಗಳನ್ನು ಸಮಾಜದಲ್ಲಿ ಸ್ಥಾಪಿಸಿ ನಂಬಿಕೆಯಿಂದ ಪೂಜೆ ವ್ರತ, ಆರಾಧನೆ ಸಂಪ್ರದಾಯದಂತಹ ಆಚರಣೆಯನ್ನು ನಡೆಸಿಕೊಂಡು ಬರಲಾಗಿದೆ.

ಸ್ತ್ರೀಯರು ಭಾಗವಹಿಸುವ ಆಚರಣೆಗಳಾದ "ಬನ್ನಿಮರದ ಪೂಜೆ, ಕೊಂತಿ ಪೂಜೆ, ಗುಳ್ಳವ್ವನ ಪೂಜೆ, ಅಕ್ಕಮ್ಮನ ಪೂಜೆ, ಬೆಳದಿಂಗಳಪ್ಪನ ಪೂಜೆ, ಹೊಸ ದ್ಯಾವರು ಪೂಜೆ, ಚಂಗಳ್ವನ ಪೂಜೆ, ಶೀಗೆ ಹುಣ್ಣಿಮೆ, ಜೋಕುಮಾರನ ಪೂಜೆ, ನಾಗರಪಂಚಮಿ ಪೂಜೆ, ಮಲೆನಾಡಿನ ಭೂಮಿ ಪೂಜೆ, ಹುಣ್ಣಿಮೆ ಪೂಜೆ, ಮೊದಲಾದವುಗಳನ್ನು ಹೆಂಗಸರ ಆಚರಣೆಗಳೆಂದು ಗುರುತಿಸಲಾಗುತ್ತದೆ." (ಸಂಧ್ಯಾರೆಡ್ಡಿ ಕೆ. ಆರ್.) ಇವುಗಳಲ್ಲಿ ಸಂತಾನಕ್ಕಾಗಿ ಮತ್ತು ಫಲವಂತಿಕೆಗೆ ದೇವರಲ್ಲಿ ಪೂಜಿಸಿ, ಪ್ರಾರ್ಥಿಸಿಕೊಂಡು ಬಂದಿರುವ ಸಂಗತಿಗಳು ಹಲವು ಕಡೆಗಳಲ್ಲಿ ದೊರೆಯುತ್ತವೆ.

ಸಂತಾನಕ್ಕಾಗಿ ಮತ್ತು ಫಲವಂತಿಕೆಗೆ ಸುಗ್ಗಿ ಹಬ್ಬದಲ್ಲಿ ಅಮ್ಮನಿಗೆ ಪ್ರಾರ್ಥಿಸಿಕೊಂಡರೆ ಮಕ್ಕಳಾಗುವುದೆಂಬ ನಂಬಿಕೆ ಮಲೆನಾಡಿನಲ್ಲಿದೆ. ಮೈಸೂರು ಸಮೀಪದ ಗುಂಡ್ಲುಪೇಟೆ ತಾಲ್ಲೂಕಿನ ಗೋಪಾಲಸ್ವಾಮಿ, ಬೆಟ್ಟದ ಕೃಷ್ಣ ಸಂತಾನ ಗೋಪಾಲಸ್ವಾಮಿ ಎಂದೇ ಹೆಸರುವಾಸಿ. ಇಟಲಿಯಲ್ಲಿ ಡಯಾನಳನ್ನು ಪ್ರಜನನ ದೇವತೆ ಎಂದು ಪೂಜಿಸುತ್ತಾರೆ. 'ತಾಯ್ತನಕ್ಕಾಗಿ' ಹೆಣ್ಣು ಕೈಗೊಳ್ಳುವ ಪೂಜೆ, ವ್ರತ, ಉಪವಾಸಗಳು ನೂರಾರು. ವಿಶ್ವ ಉಳಿಯಲು, ಬೆಳೆಯಲು ಜೀವಿಗಳು ಬೇಕು. ಜೀವಿಗಳ ಉಗಮಕ್ಕೆ ಒಂದು ಕ್ಷೇತ್ರದ ಅಗತ್ಯವಿದೆ. ಈ ಕಾರಣಕ್ಕಾಗಿ ಭೂಮಿಗೆ ವಿಶೇಷ ಮನ್ನಣೆ ದೊರೆತಿದೆ. ಇದೇ ಕಾರಣಕ್ಕೆ 'ಕೊಂತಿ' ಪೂಜ್ಯನೀಯಳಾಗಿದ್ದಾಳೆ. ಕೊಂತಿಯೆಂಬುದು ಒಂದು ಅತಿ ಉದ್ದದ ದುಂಡನೆಯ ಕಲ್ಲು. ಅದನ್ನ ಭೂಮಿಯಲ್ಲಿ ಹಳ್ಳ ತೋಡಿ ಅರ್ಧ ಭಾಗದಷ್ಟು ಹೂಳುವುದು ಈ ಆಚರಣೆಯ ಪ್ರಾರಂಭದ ಘಟ್ಟ. ಮೂರು ಅಥವಾ ಐದು ದಿನಗಳ ಅನಂತರದಲ್ಲಿ ಆಕೆಗೆ ನಿತ್ಯಪೂಜೆ ಪ್ರಾರಂಭವಾಗುತ್ತದೆ. ಹದಿನಾರನೆಯ ದಿನ ಆಕೆಯನ್ನು ಗಂಡನ ಮನೆಗೆ ಕಳುಹಿಸಿ ಬರುವ ಆಚರಣೆ ಇದೆ. ಇದು ಹೆಣ್ಣಿನ ಗರ್ಭಕ್ಕೆ ಹಾಗೂ ಆಕೆಯ ಗರ್ಭಧಾರಣೆಗೆ ಸಂಬಂಧಿಸಿದ ಹಬ್ಬ. "ಗುಳ್ಳವ ಉತ್ತರ ಕರ್ನಾಟಕದ ಹಲವು ಭಾಗಗಳಲ್ಲಿ ಆಚರಣೆಗೆ ಒಳಪಡಿಸುವ ಒಂದು ದೇವತೆ. ಈ ದೇವತೆಯನ್ನು ಹೆಣ್ಣುಮಕ್ಕಳೇ ವಿಶೇಷವಾಗಿ ಆಚರಿಸುವ ಸಂಪ್ರದಾಯ ಕಂಡುಬರುತ್ತದೆ. ಈ ಸ್ತ್ರೀ ದೇವತೆಯ ಆಚರಣೆ ಆಷಾಢ ಮಾಸದಲ್ಲಿ ಆರಾಧಿಸುವರು. ಶೂದ್ರರಿಗೆ ದೇವತೆಯಾಗಿರುವ ಇವಳ ಪೂಜೆ ಅಮಾವಾಸ್ಯೆಯಂದು ನಡೆಯುತ್ತದೆ. ಈ ಪೂಜೆಯನ್ನು ಮಂಗಳವಾರ ಬಾಲ ಮುತ್ತೈದೆಯರು ಗುಂಪು ಗುಂಪಾಗಿ ಊರ ಮುಂದಿರುವ ಹೊಳೆ, ಹಳ್ಳಕೆರೆ ಅಥವಾ ಹೊಲಕ್ಕೆ ಹೋಗುತ್ತಾರೆ. ಅಲ್ಲಿ ಕೂರಿಸಿ ಪೂಜೆ ಮಾಡಿ ತಿಂಡಿ ತಿನುಸುಗಳನ್ನು ತಿಂದು ಬರುತ್ತಾರೆ". (ವೀರೇಶ್ ಬಡಿಗೇರ). ಹಾಗೆ "ಅಕ್ಕಮ್ಮನ ಆಚರಣೆ ಕರ್ನಾಟಕ ಮತ್ತು ಆಂಧ್ರ ಪ್ರದೇಶದ ಕೆಲವು ಭಾಗಗಳಲ್ಲಿ ರೂಢಿಯಲ್ಲಿದೆ. ಅಕ್ಕಮ್ಮನ ಆಚರಣೆ ಕುರಿತಾಗಿ ಕೆಲವು ನಂಬಿಕೆಗಳು ಈ ರೀತಿ ದೊರೆಯುತ್ತವೆ. ವಯಸ್ಸಿಗೆ ಅನುಗುಣವಾಗಿ ಋತುಮತಿಯಾದ ಹೆಣ್ಣುಮಕ್ಕಳು ಸಂತಾನದ ಕೊರತೆಯನ್ನು ಅನುಭವಿಸುವ ದಂಪತಿಗಳು ಅಕ್ಕಮ್ಮನ ಕಾಲವೆಂದು ತಿಳಿದು ಮಂಗಳವಾರ, ಶುಕ್ರವಾರಗಳಂದು, ಪೂಜಿಸುತ್ತಾರೆ. ಅಲ್ಲದೆ, ಕಾರಣವಿಲ್ಲದೆ ಪೂಜಿಸಲು ಹೆದರುತ್ತಾರೆ. ಏಕೆಂದರೆ ಒಮ್ಮೆ ಪೂಜಿಸಿದ ನಂತರ ಮರೆಯುವಂತಿಲ್ಲ. ನಿಗದಿತ ಅವಧಿಗೆ ಅನುಗುಣವಾಗಿ ಆಚರಣೆಯನ್ನು ಮುಂದುವರಿಸಬೇಕು.








*ಅಮಾವಾಸ್ಯೆಯಂದು ಗಂಡನಿಗೆ ಪೂಜೆ*



*ಜೋಕುಮಾರನ ಪೂಜೆ*

ಸಂತಾನಕ್ಕಾಗಿ ಬೆಳದಿಂಗಳ ಪೂಜೆ ಅಥವಾ ಬೆಳ್ದಿಂಗಪ್ಪನ ಪೂಜೆ ಕರ್ನಾಟಕದ ತುಮಕೂರಿನ, ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಸುತ್ತಮುತ್ತಲಿನ, ಹಾಸನ, ಚಿಕ್ಕಮಗಳೂರು, ಅರಸೀಕೆರೆ ಈ ನಡುವಣ ಪ್ರದೇಶಗಳಲ್ಲಿ ಆಚರಣೆಯಲ್ಲಿದೆ. 'ಗುಡಿಯ ಹುಣ್ಣಿಮೆ' ಸಂಪ್ರದಾಯ ಬೆಳದಿಂಗಳ ಆರಾಧನೆಗೆ ಸಂಬಂಧಿಸಿದ್ದು.

ನಡೆಯುತ್ತಿರುವ ಆಚರಣೆಗಳಲ್ಲಿ ಹೆಣ್ಣು ಒತ್ತಡ, ಹಿಂಸೆ, ಶೋಷಣೆಗಳಿಗೆ ಒಳಗಾಗುತ್ತಾಳೆ. ಇದಕ್ಕೆ "ಕೋಲಾರ, ಬೆಂಗಳೂರು, ಜಿಲ್ಲೆಗಳಲ್ಲಿ ಹೊಸ ದ್ಯಾವರು ಆಚರಣೆ ಇದೆ. ಇದನ್ನು ಕೇವಲ ಹೆಣ್ಣುಮಕ್ಕಳೇ ಸೇರಿ ಆಚರಿಸುತ್ತಾರೆ. ಆಯಾ ಕುಲದ ಹಿರಿಯ ಮಹಿಳೆಯ ಮನೆಯಲ್ಲಿ ಈ ಸಂಪ್ರದಾಯ ನಡೆಯುತ್ತದೆ. ಆ ಹಿರಿಯ ಹೆಣ್ಣು ಮಗಳು ಅಕ್ಕಿ ಹಾಕಿ ಮಾಡುವ ತಂಬಿಟ್ಟಿನ ದೀಪದ ಎದುರಿನಲ್ಲಿ ಒಬ್ಬೊಬ್ಬ ಹೆಣ್ಣು ಮಗು ಪ್ರತ್ಯೇಕವಾಗಿ ಹೋಗಿ ಬೆತ್ತಲಾಗಿ ನಿಂತು ತನ್ನ ಮನೋವ್ರತವನ್ನು ನಿವೇದಿಸಿಕೊಳ್ಳುವುದು ಈ ಆಚರಣೆಯಲ್ಲಿ ಕಂಡುಬರುತ್ತದೆ. ಇದು ಬಹಳ ಗುಟ್ಟಾಗಿ ನಡೆಯುತ್ತದೆ. ಹೆಣ್ಣು ಹಿಂಸೆ, ಶೋಷಣೆಗಳಿಗೀಡಾಗುವ ಹಿನ್ನೆಲೆಯಲ್ಲಿ ಪೂಜೆ, ಸಂಪ್ರದಾಯ, ಆಚರಣೆಗಳು ನಡೆದುಕೊಂಡು ಬಂದಿರುವುದು ಗೊತ್ತಾಗುತ್ತದೆ. ಇಂದಿಗೂ ಆರಾಧನಾ ಮಂದಿರ, ದೇವಸ್ಥಾನ ಮತ್ತು ಪೂಜಾ ಸ್ಥಳಗಳಲ್ಲಿ ಹೆಚ್ಚಾಗಿ ಹೆಣ್ಣು ಕಾಣಿಸಿಕೊಳ್ಳುತ್ತಿರುವುದು ಈ ಹಿನ್ನೆಲೆಯಲ್ಲಿ ಇದಕ್ಕೆಲ್ಲ ಪುರುಷ ಪ್ರಧಾನ ಮೌಲ್ಯಗಳೇ ಕಾರಣ.

ಹೆಣ್ಣಿಗೆ 'ಅನಿಷ್ಟ' ನಿವಾರಣೆಯಾಗುತ್ತದೆ, 'ಶ್ರೇಯಸ್ಸು' ಲಭಿಸುತ್ತದೆ, 'ಮುತ್ತೈದೆ ಭಾಗ್ಯ' ದೊರೆಯುತ್ತದೆ ಎಂದು ಹೇಳಿಕೊಂಡು ಖಾಸಗಿಯಾಗಿ ಪೂಜೆ, ವ್ರತ, ಆರಾಧನೆ, ಸಂಪ್ರದಾಯ ಆಚರಣೆಗಳನ್ನು ನಡೆಸಿಕೊಂಡು ಬರಲಾಗಿದೆ. ಅವುಗಳನ್ನು ಉದಾಹರಿಸಬಹುದಾದರೆ : ಗೌರಿ ವ್ರತ, ಶುಕ್ರ ಗೌರಿ ಪೂಜೆ, ತುಳಸಿ ಪೂಜೆ, ತುಳಸಿ ಮದುವೆ, ಶ್ರಾವಣ ಶುಕ್ರವಾರ, ಅಷ್ಟಲಕ್ಷ್ಮಿ, ಸಂಕಷ್ಟಿ, ಭೀಮನ ಅಮಾವಾಸ್ಯೆ ಮುಂತಾದುವು. ಇವು ಬರೀ ನಂಬಿಕೆಯಿಂದಾಗಿ ದಿನ, ವಾರ, ತಿಂಗಳುಗಳವರೆಗೆ ಮುಂದುವರಿಯುತ್ತವೆ. ಇಲ್ಲಿ ಕೂಡ ಹೆಣ್ಣಿನ ಪಾಲ್ಗೊಳ್ಳುವಿಕೆ ಪ್ರಧಾನವಾದ್ದು. ಈ ಪೂಜೆಗಳಲ್ಲಿ ಕಟ್ಟುನಿಟ್ಟಿನ ನಿಯಮ ಮತ್ತು ಶ್ರಮ ಇರುತ್ತವೆ. ಇವುಗಳನ್ನು ಮಹಿಳೆಯರೇ ಮಾಡಬೇಕು ಮತ್ತು ಹೆಣ್ಣಿನ ಹಿತದೃಷ್ಟಿಯಿಂದ ಇವುಗಳನ್ನು ಆಚರಿಸಬೇಕು ಎಂದು ಹೇಳಲಾಗುತ್ತದೆ. ಈ ಪೂಜೆ ಆಚರಣೆಗಳು ಅವಳಲ್ಲಿ ಸಂಸ್ಕಾರ ಮತ್ತು ಮೌಲ್ಯಗಳನ್ನು ಬೆಳೆಸುತ್ತವೆ; ಇದರಿಂದ ಅವಳಿಗೆ ಶ್ರೇಯಸ್ಸು ಲಭಿಸುತ್ತದೆ; ಮುಂದಿನ ಜೀವನ, ಗಂಡನ ಮನೆಯಲ್ಲಿ ಸುಖವಾಗಿರುತ್ತಾಳೆ; ಎಂದೆಲ್ಲಾ ಹೇಳಲಾಗುತ್ತದೆ. ಆದರೆ ಈ ಪೂಜೆ ಸಂಪ್ರದಾಯದ ಮೌಲ್ಯಗಳೆಲ್ಲ ಗಂಡಿನ ಅಧೀನತೆ ಬೋಧಿಸುತ್ತವೆಯೇ ಹೊರತು ಶ್ರೇಯಸ್ಸು, ಸುಖವನ್ನಲ್ಲ. ಏಕೆಂದರೆ, ಮುತ್ತೈದೆ ಭಾಗ್ಯ ದೊರೆಯುತ್ತದೆ ಎಂದು ಹೇಳಲಾಗುವ ಭೀಮನ ಅಮಾವಾಸ್ಯೆಯಂದು ಗಂಡನಿಗೆ ಪೂಜೆ ಮಾಡಿ ಪಾದ ತೊಳೆದರೆ ಹೆಂಡತಿ (ದೀರ್ಘ ಸುಮಂಗಲಿಯಾಗಿರುತ್ತಾಳೆ) ಮುತ್ತೈದೆಯಾಗಿರುತ್ತಾಳೆ, ಗಂಡನ ಆಯುಷ್ಯ ವೃದ್ಧಿಯಾಗುತ್ತದೆ ಎನ್ನುವ ನಂಬಿಕೆಯನ್ನು ಬಿತ್ತಲಾಗಿದೆ. ಗಂಡನಿಗೆ ಪೂಜೆ






# ಮಂದಹಾಸ ಬೀರಬೇಕು

ಕುಂಬಿಣಿಯೇ ನಿನ್ನೊಡಲಲ್ಲಡಗಿದ
ಲಾವಾರಸವ ಉಗುಳಿ ನಿರುಮ್ಮಳಾಗಿಬಿಡು
ಕುದಿ-ಕುದಿದು ಉಷ್ಣವಾಗಬೇಡ,
ನಾಲಿಗೆ ಚಾಚು ಹರಿಯಲಿ ಲಾವಾ
ಸಿಕ್ಕ-ಸಿಕ್ಕದ್ದೆಲ್ಲಾ ಪಳಿಯುಳಿಕೆಯ್ಯುತ್ತಾ...!

ತನು ಮರಗಟ್ಟಿಸಿಕೊಳ್ಳಬೇಡ
ಮೈ ಕೊಡವಿಬಿಡು ಆಗೊಮ್ಮೆ ಈಗೊಮ್ಮೆ
ಬಹುಮಹಡಿಗಳೆಲ್ಲಾ ಕೌಚಿ ಬೀಳಲಿ
ನರರೆಲ್ಲಾ ನರಗಳಂತೆ ಮಣ್ಣಿನಲಿ ಚಾಚಲಿ
ಊರು ಕೇರಿಗಳು ನುಚ್ಚು ನೂರಾಗಲಿ...!

ಕಡಲೇ ಶಾಂತಿಗೆ ಧಿಕ್ಕಾರ ಕೂಗು
ಒಳಗೊಳಗೆ ಸುಳಿಸುಳಿದು
ಸೃಷ್ಟಿಸು ಅದ್ರಿಗೂ ಅಧಿಕ ಮಾರುತಗಳ
ಧುತ್ತೆಂದು ಉಗಿದುಬಿಡು, ಕೊಚ್ಚಿ ಹೋಗಲಿ
ಪಾಪಿ ಮಹಲುಗಳು ಹಾಗೆಯೇ...!

ಹೊಟ್ಟೆಗಿಟ್ಟಿಲ್ಲದಂತಾಗಿ ಕೂಳಿಗಾಗಿ ಅಲೆಯಬೇಕು
ಬಹುಪಾಲು ಅಳಿಯಬೇಕು, ದುರ್ನಾತ ಬೀರಬೇಕು
ಹೆಮ್ಮಾರಿ ರೋಗಗಳು ಬಡಿಯಬೇಕು
ವಿಜ್ಞಾನಿಗಳೆಲ್ಲಾ ಅಂಧರಾಗಿ, ಔಷಧ ವಿಫಲವಾಗಬೇಕು
ಆಗ ಕಾನನ ಮಂದಹಾಸ ಬೀರಬೇಕು...!

**ಕೊಟ್ರೇಶ್ ಎಸ್. ಉಪ್ಪಾರ್**
ಆಲೂರು, ತೇಜೂರು ರಸ್ತೆ, ಶಾಂತಿನಗರ, ಹಾಸನ – ೫೭೩ ೨೦೧

ಮಾಡುವುದು, ಪಾದ ತೊಳೆಯುವುದು, ನಮಸ್ಕರಿಸುವುದು, ಇವುಗಳು ಪುರುಷನ ಬಗ್ಗೆ ಶ್ರೇಷ್ಠತೆ ಸಾರುತ್ತವೆಯೇ ಹೊರತು, ಮುತ್ತೈದೆ ಭಾಗ್ಯ ಮತ್ತು ಶ್ರೇಯಸ್ಸನ್ನಲ್ಲ. ಈ ತೆರನಾದ ಪೂಜೆ ಮಾಡಿರುವ ಈವರೆಗಿನ ಹೆಣ್ಣಿನ ಗಂಡನು, ಶಾಶ್ವತವಾಗಿ ಬದುಕಿರುವ ಉದಾಹರಣೆ ಇಲ್ಲ. ಆದರೂ ಇದನ್ನು ಸಂಪ್ರದಾಯದ ಪೂಜೆ ಎಂದು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಇಂದಿನ ಆಧುನಿಕ ಜಗತ್ತಿನಲ್ಲಿ ಮುಂದುವರಿಸುತ್ತಿರುವುದು ಕಂಡುಬರುತ್ತದೆ. ಇಂದಿಗೂ ಇವುಗಳನ್ನು ಬೋಧಿಸುವವರು ಇದ್ದಾರೆ. ಖಾಸಗಿ ವಲಯದಲ್ಲಿನ ಪೂಜೆ – ವ್ರತಗಳು ಬಹುತೇಕ ಗಂಡಿನ ಶ್ರೇಯಸ್ಸಿಗಾಗಿ ಪುರುಷಪ್ರಧಾನ ಕುಟುಂಬಕ್ಕಾಗಿ ಹೆಣ್ಣು ನಡೆಸಿಕೊಂಡು ಹೋಗುತ್ತಿರುವುದೂ ಇದೆ. ಮೌನ ಗೌರಿ ವ್ರತವನ್ನು ನೋಡಿದರೆ ಇದು ತಿಳಿಯುತ್ತದೆ.

ಈ ತೆರನಾದ ಪೂಜಾ ವ್ರತಗಳ ಮೂಲಕ ಸಂಪ್ರದಾಯವನ್ನು ಅನುಸರಿಸಿಕೊಂಡು ಹೊರಡುವ ಅನಿವಾರ್ಯತೆ ಸೃಷ್ಟಿಮಾಡಿರುವುದು ಕೇವಲ ಹೆಣ್ಣಿಗಾಗಿ ಮಾತ್ರ. ಹೆಣ್ಣಿಗೆ ಇವುಗಳನ್ನು ಬೋಧನೆ ಮಾಡಿಸಿರುವುದು ಪುರುಷ ಪ್ರಧಾನತೆಯು ಪರೋಕ್ಷ ನೆಲೆಯಲ್ಲಿ ತಂತ್ರ ಹೂಡಿರುವುದು ವ್ಯಕ್ತವಾಗುತ್ತದೆ. ಇವು ಹೆಣ್ಣನ್ನು ಗಂಡಿನ ಅಧೀನ ಎಂಬಂತಹ, ಗಂಡು ಎಂದರೆ 'ಶ್ರೇಷ್ಠತೆ' ಎನ್ನುವಂತಹ ಸಂಗತಿಗಳನ್ನು ಸ್ಥಿರೀಕರಿಸುತ್ತವೆ. ಜೊತೆಗೆ ಹೆಣ್ಣು ಪುರುಷ ಪ್ರಧಾನತೆಗಾಗಿ ದುಡಿಯಬೇಕು ಎಂದು ಬೋಧಿಸಿ, ಹೆಣ್ಣಿಗೆ ದಾಸ್ಯತ್ವದ ನೆಲೆಯಲ್ಲಿ ಇರಲು ಕಾರಣವಾಗುತ್ತವೆ. ಹೆಣ್ಣು ಕುಟುಂಬದ ಅಭಿವೃದ್ಧಿಗಾಗಿ, ಕೀರ್ತಿಗಾಗಿ, ಔನತ್ಯಕ್ಕಾಗಿ ತ್ಯಾಗಿಯಾಗಬೇಕು. ದುಡಿಯಬೇಕು, ಅದರಲ್ಲಿಯೇ ಆಕೆಯ ಶ್ರೇಯಸ್ಸು ಎಂದು ಬೋಧಿಸುತ್ತವೆ. ಈ ಎಲ್ಲವನ್ನು ನೋಡಿದರೆ ಹೆಣ್ಣು ತನಗಾಗಿ ಏನನ್ನೂ ಮಾಡುವುದಿಲ್ಲ ಎನ್ನುವ ಸಂಗತಿಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಈ ತೆರನಾದ ಸಂಪ್ರದಾಯ ಆಚರಣೆಗಳು ಹೆಣ್ಣನ್ನು ಆಳುವ ಮತ್ತು ತುಳಿಯುವ ಪುರುಷನಿಗೆ ಅಧೀನಗೊಳಿಸಿ, ಹೆಣ್ಣು ಕೀಳರಿಮೆಯಲ್ಲಿ ಇರುವಂತೆ ಮಾಡುತ್ತವೆ. ಇವುಗಳಿಂದ ಹೆಣ್ಣು ಮುಕ್ತವಾಗಬೇಕಾಗಿದೆ ಹಾಗೂ ಈ ತೆರನಾದ ಆಚರಣೆಗಳನ್ನು ತಿರಸ್ಕರಿಸಬೇಕಿದೆ. ಯಾಕೆಂದರೆ ಬಹುತೇಕ ಖಾಸಗಿಯಾಗಿ ನಡೆಯುವ ಪೂಜೆ, ವ್ರತ ಸಂಪ್ರದಾಯಗಳು ಸಂತಾನ, ಐಶ್ವರ್ಯ, ಸಂಪತ್ತು ಸಮೃದ್ಧಿಗಾಗಿ ಆಚರಿಸಲ್ಪಡುತ್ತವೆ ಎಂದರೆ, ಈ ಯಾವುದರ ಮೇಲೂ ಹೆಣ್ಣಿಗೆ ಒಡೆತನವಿಲ್ಲ. ಆದುದರಿಂದ ಈ ತೆರನಾದ ಸಂಪ್ರದಾಯ ಆಚರಣೆಗಳು ಹೆಣ್ಣಿಗೆ ಬಾಧ್ಯತೆಯನ್ನು ಸೃಷ್ಟಿಮಾಡಿ, ಅದರ ಹಕ್ಕು ಗಂಡಿಗೆ ಉಪಯೋಗವಾಗುವಂತೆ ಮುನ್ನಡೆಯುತ್ತಿವೆ. ಹೀಗಾಗಿ ಸಂಪ್ರದಾಯ ಆಚರಣೆಗಳು ಯಾವುದೇ 'ಅನಿಷ್ಟ' ನಿವಾರಣೆಯ ಉದ್ದೇಶವನ್ನು ಹೊಂದಿಲ್ಲ, ಬದಲಾಗಿ ಹೆಣ್ಣನ್ನೇ ಅನಿಷ್ಟದಂತೆ ಚಿತ್ರಿಸಲಾಗಿದೆ.




ಸಂಪ್ರದಾಯ ಆಚರಣೆಗಳಲ್ಲಿ ಸ್ತ್ರೀಯರ ಭಾಗವಹಿಸುವಿಕೆ ಮತ್ತು ಮಹಿಳಾ ಪ್ರಧಾನವಾದ ಆಚರಣೆಗಳಿವೆ. ಇವುಗಳಲ್ಲಿ ಮಹಿಳೆಯರೇ ಹೆಚ್ಚಾಗಿ ಪೂಜೆ, ವ್ರತ, ಉಪವಾಸ, ಆರಾಧನೆಗಳನ್ನು ಕೈಗೊಳ್ಳುತ್ತಾರೆ. ಮತ್ತು ಇದರಿಂದ ಮಹಿಳೆಯರಿಗೆ ಒಳ್ಳೆಯದಾಗುತ್ತದೆ, ಹಾಗೆ ಮನೆ, ಕುಟುಂಬ, ಗಂಡ, ಮಕ್ಕಳು, ಹೆಣ್ಣು ಮಕ್ಕಳಿಗೂ ಒಳ್ಳೆಯದಾಗುತ್ತದೆ ಎಂದು ನಾನಾ ಬಗೆಯಲ್ಲಿ ನಂಬಿಸಿ ಪೂಜೆ, ವ್ರತಗಳನ್ನು ಮಾಡಿಸುತ್ತಾರೆ. ಆದರೆ ಇದರಿಂದ ಯಾವ ಹೆಣ್ಣಿನ ಸಮಸ್ಯೆಗಳು ಪರಿಹಾರವಾಗಿವೆಯೋ ತಿಳಿದಿಲ್ಲ. ಜೊತೆಗೆ ಹೆಣ್ಣು ಮತ್ತು ಹೆಣ್ಣು ಸಮುದಾಯದ ಮೇಲೆ ನಡೆಯುವ ಕೌಟುಂಬಿಕ ದೌರ್ಜನ್ಯ ಮತ್ತು ಹಿಂಸೆಗಳು ಇದುವರೆಗೂ ನಿಂತಿಲ್ಲ. ಹೆಣ್ಣಿನ ವೈಯಕ್ತಿಕ ಮತ್ತು ಆರೋಗ್ಯದ ಸಮಸ್ಯೆಗಳಾದ ಅಪೌಷ್ಟಿಕತೆ, ಅನಾರೋಗ್ಯಗಳಿಗೆ ಪರಿಹಾರ ದೊರೆತಿಲ್ಲ. ಆಯ್ಕೆಯ ಸ್ವಾತಂತ್ರ್ಯ, ನಿರ್ಧಾರ ತೆಗೆದುಕೊಳ್ಳುವ ಹಕ್ಕು, ಲೈಂಗಿಕ ಸ್ವಾತಂತ್ರ್ಯ, ಸಾರ್ವಜನಿಕವಾಗಿ ಬೆರೆಯುವ ಸ್ವಾತಂತ್ರ್ಯ ಮುಂತಾದ ಸಂಗತಿಗಳಿಂದ ಇನ್ನೂ ಹೊರಬಂದಿಲ್ಲ. ಇಂದಿಗೂ ಹೆಣ್ಣಿನ ಮೇಲೆ ಸಾಮೂಹಿಕ ಅತ್ಯಾಚಾರ, ಕೌಟುಂಬಿಕ ಹಿಂಸೆ, ವರದಕ್ಷಿಣೆ ಕಿರುಕುಳ, ಮಹಿಳೆ ಹತ್ಯೆ ಮುಂತಾದುವು ಪ್ರತಿದಿನ ನಡೆಯುತ್ತಲೇ ಇವೆ. ಇವುಗಳಿಂದ ಮುಕ್ತಿ ದೊರೆತಿಲ್ಲ. ಆದರೆ ಪೂಜೆ, ವ್ರತಗಳು ಮತ್ತು ಸಂಪ್ರದಾಯ ಆಚರಣೆಗಳ ವಿಷಯಕ್ಕೆ ಬಂದರೆ ಕೇವಲ ಹೆಣ್ಣಿಗೆ ಮಾತ್ರ ಈ ತೆರನಾದವುಗಳನ್ನು ಅನುಸರಿಸಿಕೊಂಡು ಹೋಗುವ ಅನಿವಾರ್ಯತೆ ಸೃಷ್ಟಿಯಾಗಿರುವುದು ಕಂಡುಬರುತ್ತದೆ. ಜೊತೆಗೆ ಇವುಗಳನ್ನು ಅನುಸರಿಸುವಾಗಲೂ ಹೆಣ್ಣಿನಿಂದ ಹೆಣ್ಣಿಗೆ ಬೋಧನೆ ಮಾಡಿಸಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ಹೆಣ್ಣಿಗೆ ಪುರುಷನು ಸೃಷ್ಟಿಸಿದ ಅಭದ್ರತೆಯ ಭಾವನೆ.

ಇನ್ನು ಹೆಣ್ಣು ನಿರಂತರವಾಗಿ ಪೂಜೆ, ವ್ರತ, ಉಪವಾಸ, ಆರಾಧನೆ ಸಂಪ್ರದಾಯ ಆಚರಣೆಗಳನ್ನು ಅನುಸರಿಸಿಕೊಂಡು ಬಂದರೂ ಹೆಣ್ಣಿನ ಕುರಿತು ಸೃಷ್ಟಿ ಮಾಡಿರುವ ಮಿಥ್‌ಗಳು ಹೋಗಿಲ್ಲ. 'ಅಮಂಗಲೆ', 'ದಾರಿದ್ರ್ಯದವಳು', 'ಅನಿಷ್ಟೆ', 'ಚಂಚಲೆ', 'ಮೋಹಿನಿ', 'ಮೋಸಗಾರಳು' ಮುಂತಾದ ಅವಹೇಳನಕಾರಿ ಮಾತುಗಳಿವೆ. ಇವುಗಳಿಂದ ಮುಕ್ತಿ ದೊರೆತಿಲ್ಲ. ಮತ್ತೊಂದು ಕಡೆ ಹೆಣ್ಣೆಂದರೆ ತ್ಯಾಗಿ, ದೇವತೆ, ಕರುಣಾಮಯಿ, ಸಹಿಷ್ಣೆ ಮುಂತಾಗಿ ಕರೆಯಲಾಗುತ್ತದೆ. ಪುರುಷ ಮತ್ತು ಕುಟುಂಬದ ಅಭಿವೃದ್ಧಿಗಾಗಿ, ಕೀರ್ತಿಗಾಗಿ ಔನತ್ಯಕ್ಕಾಗಿ ಹೆಣ್ಣು ತ್ಯಾಗಿಯಾಗಬೇಕು, ದುಡಿಯಬೇಕು, ಅದರಲ್ಲಿಯೇ ಆಕೆಯ ಶ್ರೇಯಸ್ಸಿದೆಯೆಂದು ಬೋಧಿಸಲಾಗುತ್ತದೆ. ಪುರುಷಪ್ರಧಾನತೆಗಾಗಿ ಹೆಣ್ಣು ದುಡಿಯಬೇಕು. ಹೆಣ್ಣು ಗಂಡಿನ ಅಧೀನಳಾಗಿ ಗಂಡಿನ ಶ್ರೇಷ್ಠತೆಯನ್ನು ಸ್ಥಿರೀಕರಿಸುವ ಮತ್ತು ಹೆಣ್ಣಿಗೆ ದಾಸ್ಯತ್ವದ ನೆಲೆಯಲ್ಲಿ ಇರುವಂತೆ ಮಾಡುತ್ತವೆ. ಹೆಣ್ಣನ್ನು ಶೋಷಿಸುವ, ಪುರುಷನಿಗೆ ಅಧೀನಗೊಳಿಸುವ ಮೂಲಕ ಕೀಳರಿಮೆಗೆ ಒಳಪಡಿಸುವ ಕೆಲಸಮಾಡುತ್ತವೆ. ಇವುಗಳಿಂದ ಮುಕ್ತವಾಗ ಬೇಕಾಗಿದೆ. ಯಾಕೆಂದರೆ ಇವು ಮುಂದುವರಿದು ಲಿಂಗಾತಾರತಮ್ಯ, ಲಿಂಗಾಧಾರಿತ ಶ್ರಮ ವಿಭಜನೆ, ಲಿಂಗಾಧಾರಿತ ಅಸಮಾನತೆ, ಲಿಂಗಾಧಾರಿತ ಅಧಿಕಾರ ಹಂಚಿಕೆ ಕೆಲಸ ಮಾಡುತ್ತವೆ. ಜೊತೆಗೆ ಖಾಸಗಿಯಾಗಿ ನಡೆಯುವ ಸಂಪ್ರದಾಯ ಆಚರಣೆಗಳು ಹೆಚ್ಚಾಗಿ ಹೆಣ್ಣನ್ನು ಕೇಂದ್ರೀಕರಿಸಿರುವುದರಿಂದ ಅಂಧಾನುಕರಣೆಯ ಸಂಪ್ರದಾಯ ಆಚರಣೆಗಳಿಂದ ಎಚ್ಚರವಿರುವುದು ಅವಶ್ಯಕವಾಗಿದೆ.


**ಡಾ॥ ವೀರೇಶ**

ಪೋಸ್ಟ್ ಡಾಕ್ಟರಲ್ ಫೆಲೋ, ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ









# ಹೊಸಳ್ಳಿಮಠರ ಹೊಸಶೈಲಿಯ ಕಲಾಕೃತಿಗಳು

ಗದುಗಿನ ಎಂ. ಎಸ್. ಹೊಸಳ್ಳಿಮಠ ಅವರು ಹೊಸ ಶೈಲಿಯ ಕಲಾವಿದ. ಒಂದು ಪರಂಪರೆಯ ಚೌಕಟ್ಟನ್ನು ಮೀರಿ ನಿಂತಿರುವ ಇವರ ವಿಶಿಷ್ಟ ಕಲಾಕೃತಿಗಳನ್ನು ಗಮನಿಸಿದಾಗ ಕಲಾಪ್ರಿಯರಿಗೆ ಅಚ್ಚರಿಯಾಗದೆ ಇರದು. ಅಮೂರ್ತ ಶೈಲಿಯನ್ನೆ ಹೆಚ್ಚು ರೂಢಿಸಿಕೊಂಡಿರುವ ಇವರು, ಮೂರ್ತ ಶೈಲಿಯ ಚಿತ್ರಗಳನ್ನು ಅಮೂರ್ತ ಶೈಲಿಗೆ ಬದಲಾಯಿಸುವ ಕ್ರಮ ನಿಜಕ್ಕೂ ಅಚ್ಚರಿ ಮೂಡಿಸುತ್ತದೆ. ಸರಣಿ ಚಿತ್ರಗಳನ್ನು ರಚಿಸುವುದರ ಜೊತೆಗೆ ಸ್ಥಿರಚಿತ್ರಣಗಳನ್ನು ತಮ್ಮದೇ ಆದ ಒಂದು ಹೊಸ ಶೈಲಿಯಲ್ಲಿ ರಚಿಸುತ್ತಿದ್ದಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ದೃಶ್ಯಕಲೆಯಲ್ಲಿ ಸ್ನಾತಕೋತ್ತರ ಪದವಿ ಪಡೆದು, ಪ್ರಸ್ತುತ ಹುಬ್ಬಳ್ಳಿಯ 'ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯ'ದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಮಿಚಗನ್, ಪಂಡರಾಪುರ, ಕಲಬುರಗಿ, ಗದಗ ಹೀಗೆ ಹಲವು ನಗರಗಳ ಗ್ಯಾಲರಿಗಳಲ್ಲಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿವೆ. ಆಳ್ವಾಸ್ ನುಡಿಸಿರಿ ಮೂಡಬಿದರೆ (2010), ವಿಶ್ವಕನ್ನಡ ಸಮ್ಮೇಳನ ಬೆಳಗಾವಿ(2011), ಧಾರವಾಡ ಉತ್ಸವ(2012), ಲಲಿತಕಲಾ ಅಕಾಡೆಮಿ ಶಿಬಿರ(2013) ಮುಂತಾದ ನಾಡಿನ ಪ್ರಮುಖ ಚಿತ್ರಕಲಾ ಶಿಬಿರ/ಕಮ್ಮಟಗಳಲ್ಲಿ ಪಾಲ್ಗೊಂಡು ಅಪರೂಪದ ಕಲಾಕೃತಿಗಳನ್ನು ರಚಿಸಿದ ಅನುಭವ ಇವರಿಗಿದೆ. ಇತ್ತೀಚೆಗಷ್ಟೆ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ತಮ್ಮ ಸಮಕಾಲೀನ ರೊಂದಿಗೆ ಕಲಾಕೃತಿಗಳ ಪ್ರದರ್ಶನವನ್ನು ಏರ್ಪಡಿಸಿ ಚಿತ್ರ ಕಲಾಸಕ್ತರ ಗಮನ ಸೆಳೆದಿದ್ದಾರೆ.

– ಕೆ.ಬಿ.ವೀರಲಿಂಗನಗೌಡ್ರ.

ಚಿತ್ರಕಲಾ ಶಿಕ್ಷಕ. ಎಸ್.ಆರ್.ಜಿ.ಹೆಚ್.ಎಂ ಪ್ರೌಢಶಾಲೆ, ಸಿದ್ದಾಪುರ-581355. ಉತ್ತರ ಕನ್ನಡ ಜಿಲ್ಲೆ.











Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

**HOSATHU** Kannada Monthly / MARCH 2016 / ₹ 20 (No. of Pages 64)
RNI Regd. KARKAN / 1999 / 614. Karnataka Regd. KARN/BGE/07/2015-17
Licenced to post without prepayment. WPP No.14.
Posted at BENGALURU PSO, MYSORE ROAD, BENGALURU-560 026 on the 28th of every month.